ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ
राष्ट्रीय ग्रामीण स्वास्थ्य मिशन
(2005-2012)

# ಗ್ರಾಮ ಆರೋಗ್ಯ ದಿನ

ಕರ್ನಾಟಕ ಸರ್ಕಾರ




- ಗ್ರಾಮಗಳಲ್ಲಿ ವಾಸಿಸುವ ಗರ್ಭಿಣಿಯರಿಗೆ, ಬಾಣಂತಿಯರಿಗೆ ಹಾಗೂ ಮಕ್ಕಳಿಗೆ ಸಮಗ್ರ ಆರೋಗ್ಯ ಒದಗಿಸುವ ದೃಷ್ಟಿಯಿಂದ ರಾಜ್ಯದ ಪ್ರತಿಯೊಂದು ಅಂಗನವಾಡಿ ಕೇಂದ್ರದಲ್ಲಿ 'ಗ್ರಾಮ ಆರೋಗ್ಯ ದಿನ' ನಡೆಸಲಾಗುತ್ತಿದೆ.
- ಪ್ರತಿ ತಿಂಗಳಲ್ಲಿ ಎರಡು ದಿನ ಗ್ರಾಮದ ಅಂಗನವಾಡಿ ಕೇಂದ್ರದಲ್ಲಿ ಬೆಳಿಗ್ಗೆ 10 ಗಂಟೆಯಿಂದ ಮಧ್ಯಾಹ್ನ 1 ಗಂಟೆಯವರೆಗೆ ಏರ್ಪಡಿಸಲಾಗುತ್ತಿದೆ.
- ಗರ್ಭಿಣಿ ಹಾಗೂ ಬಾಣಂತಿಯರಿಗೆ ಆರೋಗ್ಯ ಸೇವೆ ನೀಡುವುದು, ಗಂಡಾಂತರ ಹೆರಿಗೆಗಳನ್ನು ಗುರುತಿಸಿ – ಮೇಲ್ದರ್ಜೆ ಆಸ್ಪತ್ರೆಗಳಿಗೆ ಕಳಿಸಿಕೊಡುವ ಮತ್ತು ಮಕ್ಕಳಿಗೆ ಲಸಿಕೆ ಹಾಕಿಸುವ ಸೇವೆ ನೀಡಲಾಗುವುದು.
- ಹದಿಹರೆಯದವರಿಗೆ ಆರೋಗ್ಯ, ವೈಯಕ್ತಿಕ ಸ್ವಚ್ಛತೆ ಬಗ್ಗೆ ಶಿಕ್ಷಣ ನೀಡುವುದು, ಸಮುದಾಯದ ಹಾಗೂ ಗ್ರಾಮದ ಆರೋಗ್ಯ ಮತ್ತು ನೈರ್ಮಲ್ಯ ಸಮಸ್ಯೆಗಳನ್ನು ಚರ್ಚಿಸಿ, ಅವುಗಳ ನಿವಾರಣೆಗೆ ಯೋಜನೆ ರೂಪಿಸಿಕೊಂಡು ಅನುಷ್ಠಾನಗೊಳಿಸಲಾಗುವುದು.
- ಶಾಲಾ ಶಿಕ್ಷಕರು, ಜನಪ್ರತಿನಿಧಿಗಳು ಇದರಲ್ಲಿ ಭಾಗವಹಿಸುವರು.

(ಹೆಚ್ಚಿನ ವಿವರಗಳಿಗೆ ಹತ್ತಿರದ ಆರೋಗ್ಯ ಕೇಂದ್ರವನ್ನು ಸಂಪರ್ಕಿಸಿ)

**ಮಗುವಿಗೆ ಸಕಾಲದಲ್ಲಿ ಲಸಿಕೆ ಕೊಡಿಸಿ ಮಾರಕ ರೋಗಗಳಿಂದ ರಕ್ಷಿಸಿ**


ಪ್ರಕಟಣೆ : ಮಾಹಿತಿ ಶಿಕ್ಷಣ ಮತ್ತು ಸಂಪರ್ಕ ವಿಭಾಗ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು - 560 009

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಸೃಜನ್, ಆಚಾರ್ಯ, ಎನ್. ಆರ್. ಬೊಮ್ಮಳ್ಳಿ,
ಶ್ರೀಹರಿ, ರಾಂಚಂದ್ರ ಕೊಪ್ಪಲು, ಬಿ. ವಿಲ್ಸನ್

ಮುಖಚಿತ್ರ : ಕರ್ನಾಟಕ ಉಚ್ಚ ನ್ಯಾಯಾಲಯ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಚುನಾವಣೆ ಮುಗಿದು ಫಲಿತಾಂಶ ಹೊರಬಿದ್ದಿರುವುದರಿಂದ ಇನ್ನು ಮುಂದೆ ಸರ್ಕಾರಗಳು ರಸ್ತೆ ರಿಪೇರಿ, ಸೀರೆ ಹಂಚಿಕೆ, ಹೆಂಡದ ವಿತರಣೆ, ಭೂರಿ ದಕ್ಷಿಣೆ ನೀಡುವುದು, ಮುಂತಾದ ಕ್ರಿಯೆಗಳಲ್ಲಿ ತೊಡಗಲು ಚುನಾವಣಾ ಆಯುಕ್ತರ ಅಡ್ಡಿ ಇರುವುದಿಲ್ಲ. ಅರ್ಥರಹಿತ ನಿರ್ಬಂಧಗಳ ಹೇರಿಕೆಯನ್ನು ರಾಜಕೀಯ ಪಕ್ಷಗಳು ವಿರೋಧಿಸದಿರುವುದರಿಂದ ಚುನಾವಣಾ ಆಯುಕ್ತರು ಮನಬಂದಂತೆ ವರ್ತಿಸುತ್ತಾರೆ. ನಮ್ಮ ದೇಶದ ಜನಗಳನ್ನು ಕುರಿಗಳೆಂದು ಪರಿಭಾವಿಸುವ ಆಯುಕ್ತರಿಗೆ ಧಿಕ್ಕಾರವಿರಬೇಕು. ಅಭ್ಯರ್ಥಿಗಳು ನೀಡಿರುವ ಅಥವಾ ನೀಡಬಹುದಾಗಿದ್ದ ದಾನಗಳಿಂದ ಮೈಮರೆತು ಮತ ನೀಡುತ್ತಾರೆಂದು ಜನಗಳ ಪ್ರಜ್ಞೆಯನ್ನು ಅವಹೇಳನ ಮಾಡುವ ಪ್ರವೃತ್ತಿಯು ಖಂಡನೀಯ. ''ನಾವು ಗೆದ್ದರೆ ಕಾವೇರಿ ವಿವಾದವನ್ನು ಬಗೆಹರಿಸುತ್ತೇವೆ'' ಎಂದು ಮನಮೋಹನ ಸಿಂಗ್ ತಮಿಳುನಾಡು ಪ್ರಚಾರದಲ್ಲಿ ಹೇಳಿದರು. ''ನಾವು ತೆಲಂಗಾಣವನ್ನು ರಚಿಸುತ್ತೇವೆ'' ಎಂದು ಅಡ್ವಾನಿ ಹೇಳಿದರು. ಒಂದು ಸೀರೆ ಅಥವಾ ಪಂಚೆಯು ಇದಕ್ಕಿಂತಲೂ ದೊಡ್ಡ ಆಮಿಷವಲ್ಲ. ಆದರೆ ಆಯುಕ್ತರು ಅದನ್ನು ಗಮನಿಸುವುದಿಲ್ಲ. ಮನಮೋಹನ ಸಿಂಗ್ ಗೆದ್ದಿರುವುದರಿಂದ ಈಗ ಅವರು ಕಾವೇರಿ ವಿವಾದವನ್ನು ಪರಿಹರಿಸಲು ತಮಿಳುನಾಡು ಪರವಾದ ತೀರ್ಮಾನ ಕೊಡಲು ಒಂದು ರೀತಿ ಬದ್ಧರಾಗಿದ್ದಾರೆ. ಮಾನ್ಯ ಯಡಿಯೂರಪ್ಪನವರು ಅದನ್ನು ಹೇಗೆ ನಿಭಾಯಿಸುತ್ತಾರೆಂದು ಕಾದು ನೋಡಬೇಕು.

ಕೇಂದ್ರದಲ್ಲಿ ಸರ್ಕಾರ ರಚಿಸಲು ಸಿದ್ಧತೆ ನಡೆಸುತ್ತಿದ್ದ ಮೂರನೆಯ ರಂಗವು ಮೂಲೆ ಗುಂಪಾಗಿದೆ, ಛಿದ್ರವಾಗಿದೆ. ಅದಕ್ಕೆ ಈ ಅವಲಕ್ಷಣವು ಮೊದಲಿನಿಂದಲೂ ಇದ್ದದ್ದೇ. ಸಿದ್ಧಾಂತದ ಗೊಡವೆಯೇ ಇಲ್ಲದ ಐದಾರು ಪಕ್ಷಗಳು ಒಟ್ಟಾಗುವುದು ಕಾಂಗ್ರೆಸ್ಸನ್ನು ಸೋಲಿಸಲು ಮುಂದಾದಾಗ. ಹುಮ್ಮಸ್ಸಿನಿಂದ ಎಡಪಕ್ಷಗಳು ಅದಕ್ಕೆ ನಾಯಕತ್ವ ನೀಡಲು ಧಾವಿಸಿದವು. ಚಿಕ್ಕಮಗಳೂರಿನ ಪ್ರಚಾರ ಸಭೆಯಲ್ಲಿ ಎ. ಬಿ. ಬರ್ಧನ್ ಹೇಳಿದರು, ''ಶ್ರೀ ದೇವೇಗೌಡರೇ ಮೂರನೆಯ ರಂಗದ ಶಿಲ್ಪಿ'' ಎಂದು. ಈ ಶಿಲ್ಪಿಗೆ ಮೂರು ಸ್ಥಾನಗಳು. ಅದಕ್ಕಿಂತಲೂ ಸ್ವಲ್ಪ ಉತ್ತಮ ತೆಲುಗು ದೇಶಂ ಮತ್ತು ಜಯಲಲಿತಾ ಪಕ್ಷಗಳು. ''ಅನಿವಾರ್ಯವಾದರೆ ಪ್ರಧಾನಿಯಾಗಲು ನಾನು ಸಿದ್ಧ'' ಎಂದು ಪ್ರಕಾಶ್ ಕಾರಟ್ ಹೇಳಿದ್ದರು. ಅಂತಹ ಅನಿವಾರ್ಯತೆ ಉಂಟಾಗಲಿಲ್ಲವಾದ್ದರಿಂದ ಅವರಿಗೆ ತಲೆನೋವು ತಪ್ಪಿದೆ. ತೃತೀಯ ರಂಗದ ಮುಂದಾಳು ದೇವೇಗೌಡರು ತಾವು ಹಾಸನದಲ್ಲಿ ಗೆಲ್ಲಲು ಚಿಕ್ಕಮಗಳೂರಿನಲ್ಲಿ ರಾಧಾ ಸುಂದರೇಶ್ ಅವರನ್ನು ನಡುನೀರಿನಲ್ಲಿ ಕೈಬಿಟ್ಟರು. ಕಡೂರಿನಲ್ಲಿ ಅವರಿಗೆ ಮತ ನೀಡಲು ಮತದಾರರು ಷರತ್ತು ಹಾಕಿದರಂತೆ: ಚಿಕ್ಕಮಗಳೂರಿನಲ್ಲಿ ನೀವು ಕಾಂಗ್ರೆಸ್ಸಿಗೆ ಮತ ಕೊಡಿಸುವುದಾದರೆ ಮಾತ್ರ ನಿಮಗಿಲ್ಲಿ ನಮ್ಮ ಮತ, ಎಂದು. ಸರಿ, ಕುಮಾರಣ್ಣನನ್ನು ಚುನಾವಣೆಯ ಹಿಂದಿನ ದಿನ ರವಾನಿಸಿ ಅವರಿಗೆ ಅನುಕೂಲವಾಗುವಂತಹ ಸಂದೇಶವನ್ನು ತಮ್ಮ ಪಕ್ಷದ ನಾಯಕರಿಗೆ ರವಾನಿಸಿದರು. ಮಿತ್ರ ಪಕ್ಷಗಳಲ್ಲಿ ಮೈತ್ರಿ ಇಷ್ಟು ಗಾಢವಾದ್ದು! ಅಂದರೆ, ದೇವೇಗೌಡರಿಗೆ ಯಾವ ರಂಗವೂ ಬೇಡ, ಅವರಿಗೆ ಅವರ ಮುನ್ನಡೆ ಸಾಕು, ಆದ್ದರಿಂದಲೇ ಕುಮಾರಸ್ವಾಮಿಯವರನ್ನು ಸೋನಿಯಾ ಗಾಂಧಿ ಬಳಿಗೆ ಅಟ್ಟಿದ್ದು. ಗಣಿಗಾರಿಕೆಯ ಖಾತೆಯನ್ನು ತಮಗೆ ನೀಡುವುದಾದರೆ ತಮ್ಮ ಪಕ್ಷದ ಬೆಂಬಲ ಕಾಂಗ್ರೆಸ್ ಸರ್ಕಾರಕ್ಕೆ ಖಂಡಿತ ಇರುತ್ತದೆಂಬ ಮಾತನ್ನು ಸೋನಿಯಾ ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. ಈಗ ದೇವೇಗೌಡರ ಬೆಂಬಲವಾಗಲಿ, ಎಡ ಪಕ್ಷಗಳ ಬೆಂಬಲವಾಗಲಿ ಆಕೆಗೆ ಬೇಕಿಲ್ಲ. ಇಂತಹ ದೇವೇಗೌಡರೊಡನೆ ಮೈತ್ರಿ ಬೆಳೆಸಿ ಅಧಿಕಾರಕ್ಕೆ ಬರಬಹುದೆಂಬ ಎಡ ಪಕ್ಷಗಳ ಭರವಸೆ ತೀರಾ ಶೋಚನೀಯವಾದ್ದು. ಭೂಮಿಗೆ ಕಿವಿಗೊಟ್ಟು ಜನಮನದ ಆಳವನ್ನು ತಿಳಿಯುವುದರಲ್ಲಿ ಅವು ಸಂಪೂರ್ಣವಾಗಿ ಸೋತಿವೆ. ಕೇರಳ ಮತ್ತು ಪಶ್ಚಿಮ ಬಂಗಾಳದಲ್ಲಿ ಎಡರಂಗದ ಸರ್ಕಾರಗಳು ರಾಜಿನಾಮೆ ನೀಡುವುದು ಸೂಕ್ತವಾಗಿರುತ್ತದೆ. ಅದನ್ನು ಬೇರೆಯವರಿಂದ ಹೇಳಿಸಿಕೊಳ್ಳುವ ಮೊದಲೇ ನಿರ್ಗಮಿಸಿದರೆ ಸ್ವಲ್ಪವಾದರೂ ಗೌರವವು ಉಳಿಯುತ್ತದೆ.

ತಮ್ಮ ಆರ್ಥಿಕ ನೀತಿಗಳಿಗೆ ಎಡಪಕ್ಷಗಳು ಅಡ್ಡಿಯುಂಟುಮಾಡಿವೆ ಎಂದು ಹಲುಬುತ್ತಿದ್ದ ಪ್ರಧಾನಿ ಸಿಂಗ್ ಈಗ ಜನವಿರೋಧಿ ನೀತಿಗಳ ಮಹಾಪೂರವನ್ನು ಹರಿಸುತ್ತಾರೆಂಬುದರಲ್ಲಿ ಸಂಶಯವಿಲ್ಲ. ಅದನ್ನು ತಿಳಿಯದೆ ಹೋದ ಜನ ಮುಂದೆ ಪಶ್ಚಾತ್ತಾಪ ಪಡಬೇಕಾಗುತ್ತದೆ, ಆದರೆ ಆಗ ಅದರಿಂದ ಪ್ರಯೋಜನವಿರುವುದಿಲ್ಲ. ಕೈಗಾರಿಕಾ ವಿವಾದಗಳ ಕಾಯಿದೆಯನ್ನು ಸಡಿಲಗೊಳಿಸಿ ನೌಕರರನ್ನು ಬೇಕಾದಾಗ ವಜಾ ಮಾಡುವುದು, ಅವರ ಭವಿಷ್ಯ ನಿಧಿ ಮತ್ತು ನಿವೃತ್ತಿ ವೇತನದ ಹಣವನ್ನು ಖಾಸಗಿಯವರಿಗೆ ನೀಡಿ ಷೇರು ಮಾರುಕಟ್ಟೆಯಲ್ಲಿ ತೊಡಗಿಸುವಂತೆ ಮಾಡುವುದು,

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೦ ಸಂಚಿಕೆ - ೧೧ ಜೂನ್ ೨೦೦೯

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@dataone.in
hosathu@gmail.com
website : www.navakarnataka.com
http://navakarnataka.blogspot.com
http://hosathu.blogspot.com


**ಸಂಪಾದಕೀಯ**

## ಚುನಾವಣೆಗೊಂದು ಸೈದ್ಧಾಂತಿಕ ನಿಲುವು

ಬಿಜೆಪಿಯನ್ನು ಅಧಿಕಾರದಿಂದ ಹೊರಗಿಡುವಂಥ ನೀತಿಯೊಂದನ್ನು ರಚಿಸಿ, ಅದರಲ್ಲಿ ಜಯಪ್ರದವಾದ ಯುಪಿಎ ನಾಯಕರನ್ನು, ಅಂದರೆ ಮುಖ್ಯವಾಗಿ ಕಾಂಗ್ರೆಸ್ ಪಕ್ಷದ ಧುರೀಣರನ್ನು ಮೊದಲಿಗೆನಾವು ಅಭಿನಂದಿಸಲೇಬೇಕು. ನಿಂತನೀರಿನ, ವೃದ್ಧಾಪ್ಯದ, ಪೊರೆ ಕಳಚಿಕೊಂಡು, ಯುವ ಪೀಳಿಗೆಗೆ ಹೆಚ್ಚು ಅವಕಾಶ ಕಲ್ಪಿಸುವ ಆ ನೀತಿಯ ಭಾಗವನ್ನು ಮಿಕ್ಕೆಲ್ಲಾ ಪಕ್ಷಗಳೂ ಗಮನಿಸದೆ ಮಾರ್ಗವಿಲ್ಲ. ಈ ದೇಶದ ಬಂಡವಳಿಗರು ಇದು ತಮಗೆ ದೊರೆತ ವಿಜಯವೆಂದು ಬೀಗುತ್ತಿದ್ದಾರೆ. ಇವರಿಗೆ ಬಿಜೆಪಿಯೇ ನಿರ್ಣಾಯಕ ಮಟ್ಟದಲ್ಲಿ ಅಧಿಕಾರಕ್ಕೆ ಬಂದಿದ್ದರೂ ಅಷ್ಟೇ ಸಂತೋಷವಾಗುತ್ತಿತ್ತು ಎಂಬುದು ಸ್ಪಷ್ಟ. ಕಾರಣ, ಅವರು ಭಾವಿಸುವಂತೆ ಈ ಎರಡೂ ಪಕ್ಷಗಳ ಆರ್ಥಿಕ ದೃಷ್ಟಿಕೋನವೂ ಒಂದೆ ರೀತಿಯದು ಮತ್ತು ತಮ್ಮ ವರ್ಗಕ್ಕೆ ಉಪಯೋಗವಾಗುವಂಥದು. ಅವರಿಗೆ ದೇಶ ಆತಂಕಗೊಂಡಿದ್ದ ಭಯೋತ್ಪಾದನೆ ಮತ್ತು ಕೋಮುವಾದೀಯ ವಿಭಜನೆ ನೀತಿ ಗೌಣ. ಆದರೆ ಯುವಜನಕ್ಕೆ ಅಧಿಕಾರ ವರ್ಗಾವಣೆ ಎಂಬ ನೀತಿಯನ್ನು ಪ್ರತಿನಿಧಿಸುವವರೆಂದು ಹೇಳಲಾಗುವ ರಾಹುಲ್ ಗಾಂಧಿಯೂ ಇದೇ ನಿಲುವನ್ನು ತಾಳಿದವರೆ ಎಂಬುದು ಇನ್ನೂ ಅಸ್ಪಷ್ಟವಾಗಿದೆ. ಆ ಅಸ್ಪಷ್ಟತೆಯನ್ನು ಜನತೆಯ ವಿವಿಧ ವರ್ಗ ತಮತಮಗೆ ಬೇಕಾದಂತೆ ಅರ್ಥೈಸಿಕೊಂಡು, ಅವರ ಪರವಾಗಿ ಮತ ನೀಡಿರಬಹುದು. ಅಧಿಕಾರಕ್ಕೆ ಬರುವ ಯುವ ಪೀಳಿಗೆಯವರು ಆರ್ಥಿಕ ಬೆಳವಣಿಗೆಯನ್ನು ಕೇವಲ ಶೇಕಡಾವಾರು ಲೆಕ್ಕದಲ್ಲಿ ಅಳೆಯುವವರೇ ಆದರೆ ಈ ಪೀಳಿಗೆಯ ಬದಲಾವಣೆ ನೀತಿ ಬೇಗನೆ ಅರ್ಥ ಕಳೆದುಕೊಳ್ಳುವ ಸಂಭವವಿದೆ. ಅವರ ಅಪ್ಪಂದಿರು ವಯಸ್ಸಾಯಿತೆಂದು ತಮ್ಮ ತಮ್ಮ ಗದ್ದುಗೆಯನ್ನು ಮಕ್ಕಳಿಗೆ ಬಿಟ್ಟುಕೊಡುವುದು ಬದಲಾವಣೆಯಾಗುವುದಿಲ್ಲ. ತಮಗೆ ಸಾಕಷ್ಟು ಮತ ದೊರಕುವುದೆಂದು ಭರವಸೆ ಇಲ್ಲದಾಗ, ಐದನೆಯ ಸುತ್ತಿನ ಮತದಾನಕ್ಕೆ ಮೊದಲ ದಿನವೂ ರಾಹುಲ್ ಗಾಂಧಿ ಎಡಪಕ್ಷಗಳ ಜನಪರ ನೀತಿಯನ್ನು ಹೊಗಳಿ, ಕಾಂಗ್ರೆಸ್ ಪಕ್ಷ ಅವರ ಸಖ್ಯವನ್ನು ಅವರ ಜನಪರ ನೀತಿಗಾಗಿ ಬಯಸುತ್ತದೆಂದು ಹೇಳಿದ್ದು ಪ್ರಾಮಾಣಿಕವಾಗಿದ್ದರೆ ಜನತೆ ಮುಂಬರುವ ಯುಪಿಎ ಸರ್ಕಾರದಿಂದ ಹೆಚ್ಚು ಹೆಚ್ಚು ಜನಪರ ನೀತಿಗಳನ್ನು ನಿರೀಕ್ಷಿಸುತ್ತದೆ ಎನ್ನುವುದು ಈ ಜನಾದೇಶದ ಅಂತರಂಗ. ಚುನಾವಣೆಗೆ ಒಂದು ವರ್ಷ ಮುಂಚೆ ಮಾತ್ರ ಜನಪರ ಕಾರ್ಯಕ್ರಮಗಳನ್ನು ಸಾರುವ ಬೂಟಾಟಿಕೆಗೆ ಇನ್ನು ಮೇಲೆ ಜನ ಸೊಪ್ಪುಹಾಕುವುದಿಲ್ಲ. ಅದೇ ರೀತಿ ಕಳೆದ ಸರ್ಕಾರದ ಸಾಮಾನ್ಯ ಕನಿಷ್ಠ ಕಾರ್ಯಕ್ರಮದ ಒಂದು ಬಹುಮುಖ್ಯ ಅಂಶವಾದ ಕೋಮುವಾದವನ್ನು ಹತ್ತಿಕ್ಕುವ ಕಾನೂನಿನ ರಚನೆಗೆ ಇನ್ನು ಕಾಂಗ್ರೆಸ್ ಪಕ್ಷ ಅಡ್ಡಗಾಲು ಹಾಕುವಂತಿಲ್ಲ. ಬಿಜೆಪಿಯನ್ನು ಸ್ಪಷ್ಟವಾಗಿ ತಿರಸ್ಕರಿಸಿರುವ ಜನರೆ ಈ ನೀತಿಯನ್ನು ತಕ್ಷಣವೆ ಆಚರಣೆಗೆ ತರುವ ಒತ್ತಾಯವನ್ನು ಉಂಟುಮಾಡಿದ್ದಾರೆ. ಕಾಂಗ್ರೆಸ್ ಪಕ್ಷ ಇನ್ನು ಮುಂದೆ ಮೃದು ಹಿಂದುತ್ವದ ಧೋರಣೆ ತಳೆಯುವ ಅಗತ್ಯವಿಲ್ಲ ಹಾಗೂ ಅದನ್ನು ಜನತೆ ತಿರಸ್ಕರಿಸುತ್ತದೆ.

ಪ್ರಗತಿಪರ ಅರ್ಥವ್ಯವಸ್ಥೆ, ಸಮಾನತೆಯ ಸಮಾಜ, ಮತ್ತು ಜನತೆಯ ಮಟ್ಟದ ಪ್ರಜಾಪ್ರಭುತ್ವಗಳ ಕನಸುಕಾಣುವವರಿಗೆ ಈ ಚುನಾವಣೆಯಲ್ಲಿ ಎಡಪಕ್ಷಗಳು ಅನುಭವಿಸಿರುವ ಸೋಲು ಚಿಂತೆಯುಂಟುಮಾಡಿದೆ. ಸೋಲಿಗೆ ಕಾರಣಗಳನ್ನು ಹುಡುಕುವ ಕೆಲಸ ತ್ವರಿತವಾಗಿಯೇ ನಡೆಯಬೇಕು, ನಡೆಯುತ್ತದೆ. ಕೆಲವು ವಿಷಯಗಳು ಸ್ಪಷ್ಟವಿವೆ. ಎಡಪಕ್ಷಗಳ ಒಕ್ಕೂಟವನ್ನು ರಕ್ಷಿಸಿಕೊಳ್ಳುವ ತವಕದಲ್ಲಿ, ತಮ್ಮ ತಮ್ಮ ತಪ್ಪು ಹೆಜ್ಜೆಗಳನ್ನು ಬಹಿರಂಗವಾಗಿ ಹೇಳುವ ಪರಿಪಾಠ ಜರೂರಾಗಿದೆ. ಅರವತ್ತರ ದಶಕದಲ್ಲಿ ಆರಂಭವಾದ ಒಡಕಿನ ಮಾರ್ಗ ತನ್ನ ಎಲ್ಲಾ ಅವತಾರಗಳನ್ನು ತಾಳಿ, ಈಗ ಒಂದು ಸುತ್ತು ಸುತ್ತಿ, ತನ್ನ ದಿವಾಳಿತನವನ್ನು ಹೊರಗೆಡವಿ, ಬೆತ್ತಲೆಯಾಗಿ ನಿಂತಿದೆ ಎಂದು ಹೇಳಲು ಯಾವ ಹೆದರಿಕೆಯೂ ಬೇಡ. ಕಾಂಗ್ರೆಸ್ಸನ್ನು ಕಣ್ಣುಮುಚ್ಚಿಕೊಂಡು ಎಲ್ಲಕ್ಕೂ ವಿರೋಧಿಸುವುದು, ಸದ್ಯದ ಚುನಾವಣಾ ಲಾಭಕ್ಕಾಗಿ ಕೋಮುವಾದ ಜಾತಿವಾದಿಗಳೊಡನೆ ಸ್ನೇಹ ಬೆಳೆಸುವುದು, ರಾಜಿಯಾಗುವುದು, ತನ್ನದೆ ಪಾಕ್ಷಿಕ, ಪಂಥೀಯ ಲಾಭಕ್ಕಾಗಿ ಮತ್ತೊಮ್ಮೆ ಕಾಂಗ್ರೆಸ್ಸಿನೊಡನೆ ನಂಟು ಮಾಡಿಕೊಳ್ಳಲು ತವಕಿಸುವುದು, ಚುನಾವಣೆ ಸಮೀಪಿಸುತ್ತಿದ್ದಂತೆಯೇ ಮತ್ತೊಮ್ಮೆ ಸಂಪೂರ್ಣ ಕಾಂಗ್ರೆಸ್ ವಿರೋಧಿ ಎಂದು ಸಾರಿಕೊಳ್ಳುವುದು, ಈ ಯಾವುದರಲ್ಲೂ ಇತರ ಮಿತ್ರಪಕ್ಷಗಳೊಂದಿಗೆ ಸಮಾಲೋಚಿಸದೆ ಇರುವುದು, ಮುಂತಾದ ಈ ಬೆಳವಣಿಗೆಗಳ್ಯಾವುವೂ ಜನತೆಯ ವಿಶ್ವಾಸವನ್ನು ಪಡೆಯುವ, ಉಳಿಸಿಕೊಳ್ಳುವ ಮಾರ್ಗವಲ್ಲ. ಎಡಪಕ್ಷಗಳದ್ದೇ ಐಕ್ಯರಂಗದಲ್ಲೂ ಐಕ್ಯರಂಗದ ತತ್ವಗಳನ್ನು ಪಾಲಿಸದವರು, ಬೂರ್ಷ್ವಾ ಪಕ್ಷಗಳೊಡನೆ ಐಕ್ಯರಂಗವನ್ನು ಹೇಗೆ ತಾನೆ ನಿಭಾಯಿಸಬಲ್ಲರು ? ವಿಶೇಷ ಆರ್ಥಿಕ ವಲಯದಂಥ ಹೊಸಕಾಲದ ಬೂರ್ಷ್ವಾ ಅರ್ಥನೀತಿಯ ಸವಾಲುಗಳಿಗೆ, ಮಾರ್ಕ್ಸ್‌ವಾದದ ಆಧಾರದ ಮೇಲೆ ನೀತಿಯೊಂದನ್ನು ನಿರೂಪಿಸಲು ಅಸಮರ್ಥರಾದರೆ, ಕೇವಲ ಅದರ ವಿರೋಧವಾಗಲೀ, ಅಥವಾ ಅದರ ನಾಮಕಾವಸ್ತೆ ಅನುಕರಣೆಯಾಗಲಿ ಜನತೆಯ ಗೌರವವನ್ನು ಎಡಪಕ್ಷಗಳಿಗೆ ಹೇಗೆ ತಂದುಕೊಡಬಲ್ಲದು ? ಮಾರ್ಕ್ಸ್‌ವಾದದಡಿಯಲ್ಲಿ ಹೇಗೆ ಈ ಸವಾಲನ್ನು ನಿಭಾಯಿಸಬಹುದೆಂದು ನಮ್ಮ ಪತ್ರಿಕೆಯೂ ಸೇರಿ, ಹಲವಾರು ಚಿಂತನಶೀಲರು ಹಲವಾರು ಸಲಹೆಗಳನ್ನು ನೀಡಿದ್ದಾರೆ. ಆದರೆ ಅವುಗಳನ್ನು ಗೌರವದಿಂದ ಆದರಿಸುವ ನಾಯಕತ್ವದ ಕೊರತೆ ಎಡಪಕ್ಷಗಳನ್ನು ಸದೆಬಡಿದಿದೆ. ಕಾಂಗ್ರೆಸ್‌ನಂಥ ಬೂರ್ಷ್ವಾ ಪಕ್ಷವೊಂದು ರಾಜಕೀಯ ಪಕ್ಷವನ್ನು ಕಾರ್ಪೊರೇಟ್‌ಗಳಂತೆ, ಕಂಪನಿಗಳಂತೆ ನಡೆಸುವ ಮಾರ್ಗ ಹಿಡಿದಿದೆ; ಎಂಬಿಎ, ಟೆಕ್ನಾಲಜಿ ಪದವೀಧರ ಯುವಕರನ್ನು ಜಾಹಿರಾತು ನೀಡಿ ಸಂದರ್ಶಿಸಿ ಸೇರಿಸಿಕೊಳ್ಳುತ್ತಿದೆ. ಹೊಸಕಾಲದ ಹೊಸ ಸವಾಲುಗಳಿಗೆ, ನವೀನವಾಗಿ ಕಾರ್ಯಕ್ರಮ ರಚಿಸಬಲ್ಲ ಚಾರಿತ್ರಿಕ ಹೊರೆಯಿಲ್ಲದ ಯುವಕರನ್ನು ಆಕರ್ಷಿಸದೆ, ಇರುವ ಯುವ ಪೀಳಿಗೆಗೆ ನೀತಿ ನಿರೂಪಣೆಯಲ್ಲಿ ಅವಕಾಶ ನೀಡದೆ, ಹೇಗೆತಾನೆ ಎಡಪಕ್ಷಗಳು ಬೂರ್ಷ್ವಾ ಪ್ರಜಾಪ್ರಭುತ್ವದೊಳಗೆ ಅಧಿಕಾರ ಹಿಡಿಯಲು ಸಾಧ್ಯ ? ಈ ಸಾರಿ ಕೇರಳದಲ್ಲಿ ಪರಂಪರೆಯಿಂದ ಯಾವಾಗಲೂ ಸಿಪಿಐ ಉಮೇದುವಾರರೇ ಚುನಾಯಿಸಿಬರುತ್ತಿದ್ದ ಕಡೆ, ಸಿಪಿಐ(ಎಂ) ಪಕ್ಷ ತನ್ನ ಉಮೇದುವಾರರನ್ನು ನಿಲ್ಲಿಸಬೇಕೆಂದು ರಂಪಮಾಡಿದ್ದು ಎಷ್ಟು ಸರಿ ? ಪರಿಣಾಮವಾಗಿ ಅಲ್ಲಿ ಎಡಪಂಥ ಸೋಲು ಅನುಭವಿಸಿದ್ದು ಯಾರಿಗೆ ಲಾಭವಾಯಿತು ?

ಎಡಪಂಥ ಮತ್ತು ಪ್ರಗತಿಪರ ಪ್ರಜಾಪ್ರಭುತ್ವಾತ್ಮಕ ಶಕ್ತಿಗಳು ಈಗಲಾದರೂ ಅಗತ್ಯವಾದ ಸ್ವವಿಮರ್ಶೆಯನ್ನು ಮಾಡಿಕೊಳ್ಳುವುದು ಅನಿವಾರ್ಯ. ಎಡಪಂಥ ಈ ಪ್ರಜಾಪ್ರಭುತ್ವ ಪ್ರಕ್ರಿಯೆಯಲ್ಲಿ ನಗಣ್ಯವಾಗದಿರಬೇಕಾದರೆ ''ಜನ ಓಟು ಮಾಡಿರುವ ರೀತಿ ತಪ್ಪು, ಅವರಿಗೆ ತಿಳಿಯದು'' ಎನ್ನುವ ಬೇಜವಾಬ್ದಾರಿ ಪ್ರತಿಕ್ರಿಯೆಯನ್ನು ಬಿಟ್ಟು, ಎಲ್ಲರೂ ಒಟ್ಟಿಗೆ ಸೇರಿ

ಸ್ವವಿಮರ್ಶೆಯಲ್ಲಿ ತೊಡಗಬೇಕು. ೬೦ರ ದಶಕದಲ್ಲಿ ಒಡಕಿಗೆ ಮುಂದೂಡಿದ್ದ ಎಲ್ಲ ನೆಪಗಳೂ, ಕಾರಣಗಳೂ ಈಗ ಅರ್ಥ ಕಳೆದುಕೊಂಡಿವೆ. ಹಲವಾರು ಎಡಪಕ್ಷಗಳು ಇರುವುದಕ್ಕೆ ಯಾವ ಸಮರ್ಥನೆಯೂ ಉಳಿದಿಲ್ಲ. ತಮ್ಮ ಚಿಂತನಾಕ್ರಮವನ್ನು ಬದಲಾಯಿಸಿಕೊಳ್ಳಲಾರದ ಆ ಪೀಳಿಗೆಯ ನಾಯಕರುಗಳು ಇನ್ನು ಮುಂದುವರಿಯುವುದು ಅಗತ್ಯವಿಲ್ಲ. ಮಾರ್ಕ್ಸ್‌ವಾದದಲ್ಲಿ ಸರಳತೆಯೇ ಅಡಿಪಾಯ. ಅದರಲ್ಲಿ ಕ್ಲಿಷ್ಟತೆಯನ್ನು ಕಾಣುವವರಿಗೆ ಸೈದ್ಧಾಂತಿಕ ಅಜೀರ್ಣವಾಗಿರಬೇಕಷ್ಟೆ. ನಮಗೆ ಬೇಕಾಗಿರುವುದು ಮಾರ್ಕ್ಸ್‌ವಾದದ ಪುನರ್ವಿಮರ್ಶೆಯಲ್ಲ, ಪಕ್ಷ ಕಟ್ಟುವ, ರಾಜಕೀಯ ತಂತ್ರ ನಿರೂಪಿಸುವ ಪ್ರಕ್ರಿಯೆಯಲ್ಲಿ ಪರಿಷ್ಕಾರವಾಗಬೇಕಾಗಿರುವುದು. ಮಾರ್ಕ್ಸ್‌ವಾದಿಗಳೇ ಆಗದ ಪ್ರಗತಿಪರ ಪ್ರಜಾಪ್ರಭುತ್ವಾತ್ಮಕ ಶಕ್ತಿಗಳು ಮತ್ತು ಅಂತಹ ಕನಸು ಹೊತ್ತ ಯುವ ಪೀಳಿಗೆ ಎಡಪಂಥೀಯ ರಾಜಕೀಯದಲ್ಲಿ ಈ ಬದಲಾವಣೆಗಳನ್ನು ಅಪೇಕ್ಷಿಸುತ್ತದೆ. ರಾಷ್ಟ್ರೀಯ ಬೂರ್ಷ್ವಾವರ್ಗದ ಅಸ್ತಿತ್ವವನ್ನೇ ಪ್ರಶ್ನಿಸಿದವರು ಮನಮೋಹನರನ್ನು ವಿರೋಧಿಸಲು ಅವರ ದೇಶಭಕ್ತಿಯನ್ನೇ ಪ್ರಶ್ನಿಸಲು ಮುಂದಾದರೆ, ಬೂರ್ಷ್ವಾಪ್ರಜಾಪ್ರಭುತ್ವದಲ್ಲಿ ಅವರಿಗೆ ಸಿಗುವುದು ಕೇವಲ ಅಪಜಯವಷ್ಟೆ.

ಸಂಯುಕ್ತರಂಗದ ತಂತ್ರವನ್ನು ನಾಜೀ ಬೆಳವಣಿಗೆಗೆ ಉತ್ತರವಾಗಿ ನಿರೂಪಿಸಿದ ಡಿಮಿಟ್ರೋವ್, ಅಂಥ ರಂಗದಲ್ಲಿ ಸೇರಿ ಪ್ರತಿಯೊಂದು ಅಂಗ ಪಕ್ಷವೂ, ಅವು ಸಣ್ಣದೇ ಇರಲಿ, ದೊಡ್ಡದೇ ಇರಲಿ, ರಂಗ ಸೇರಿದ್ದರಿಂದ ತಾವೂ ಬೆಳೆಯುತ್ತೇವೆ, ಬೆಳೆಯುತ್ತಿದ್ದೇವೆ ಎಂಬ ಅನುಭವ ಪಡೆಯಬೇಕು ಎನ್ನುತ್ತಾನೆ. ಸಂಯುಕ್ತರಂಗ ಸೇರಿದ್ದರಿಂದ ಸಣ್ಣ ಪಕ್ಷಗಳಿಗೆ ಅದು ಉಸಿರುಕಟ್ಟುವ ಅನುಭವವಾದರೆ, ಅಂಥ ರಂಗ ಹೇಗೆ ತಾನೆ ಉಳಿಯಬಲ್ಲದು ? ನೇಪಾಳದ ಮಾವೋವಾದಿಗಳು, ರಾಜ್ಯಾಂಗ ರಚನೆಯ ಪ್ರಕ್ರಿಯೆ ನಡೆಯುತ್ತಿರುವಾಗ, ತಾಳ್ಮೆಯಿಂದ ನಡೆದುಕೊಳ್ಳಲಾರದೆ, ತಮ್ಮದೆ ಮಾತು ಎಲ್ಲರೂ ಕೇಳಬೇಕಷ್ಟೆ ಎನ್ನುವ ರೀತಿ ವರ್ತಿಸಿದರೆ, ಅವರ ಉದ್ದೇಶದ ಬಗ್ಗೆ ವಿಶ್ವಾಸ ಹೇಗೆ ಉಳಿಯುತ್ತದೆ? ಅವರಿಗೆ ಸೋದರ ಎಡಪಕ್ಷವನ್ನು ವಿರೋಧಿಸುವುದು ಮಿಕ್ಕೆಲ್ಲದಕ್ಕಿಂತ ಹೆಚ್ಚು ಮುಖ್ಯವಾಗಿ ಕಂಡಿತೇ ? ನಮ್ಮವರೂ ಈ ಬೆಳವಣಿಗೆಯಿಂದ ಕಲಿಯಬೇಕಾದದ್ದಿದೆ.

ರಾಹುಲ್ ಗಾಂಧಿ, ಕಾಂಗ್ರೆಸ್ಸು ಮತ್ತೊಮ್ಮೆ ಏಕ ಪಕ್ಷೀಯ ಅಧಿಕಾರವನ್ನು ಪಡೆಯಬೇಕೆಂಬ ತವಕದಲ್ಲಿದ್ದಾರೆ. ಬೂರ್ಷ್ವಾ ವರ್ಗ ಯಾವುದೇ ಸಿದ್ಧಾಂತಕ್ಕೆ ಎರವಾಗದ ಎರಡೇ ಪಕ್ಷಗಳ ಆಡಳಿತ ಬೇಕೆಂದು ಹವಣಿಸುತ್ತಿದೆ. ಈ ಎರಡೂ ಆಲೋಚನೆಗಳು ಮೂಲತಃ ಒಂದು ಸಿದ್ಧಾಂತವೇ ವಿನಾ ಅದು ಸಿದ್ಧಾಂತ ವಿಹೀನವೇನೂ ಅಲ್ಲ. ಅದು ಬಂಡವಳಿಗ ಸಿದ್ಧಾಂತ. ಈ ಬಣದವರಿಗೆ ಬಹು ಪಕ್ಷಗಳ ಸಂಯುಕ್ತ ರಂಗ ಇಷ್ಟವಿಲ್ಲ. ವಿಧಿಯಿಲ್ಲದೆ ಪ್ರಜಾಪ್ರಭುತ್ವದ ಒತ್ತಡಕ್ಕೆ ಮಣಿದಿದ್ದಾರೆ. ಪ್ರಗತಿಪರ ಶಕ್ತಿಗಳು ಈ ಬಗ್ಗೆ ಎಚ್ಚರಿಕೆ ವಹಿಸುವುದು ಅಗತ್ಯ. ತಮ್ಮ ನಡುವೆ ಕೂದಲು ಸೀಳುವ ತರ್ಕವನ್ನು ಬಿಟ್ಟು, ಎಲ್ಲರೂ ಒಂದುಗೂಡುವತ್ತ ಜರೂರಾಗಿ ಪ್ರಯತ್ನಿಸಬೇಕು. ಇಲ್ಲದಿದ್ದರೆ ಅಮೆರಿಕಾದಲ್ಲಿದ್ದಂತೆ ಕತ್ತೆಯ ಅಥವಾ ಆನೆಯ ಎರಡೇ ಪಕ್ಷಗಳಲ್ಲಿ ಅಧಿಕಾರವನ್ನು ಕೆಲವೇ ಸಂಸಾರಗಳು ಹಂಚಿಕೊಳ್ಳುತ್ತವೆ. ಕಳೆದ ಕೆಲವು ತಿಂಗಳಿಂದ ಕಂಡುಬಂದಂತೆ ಅವರು ಇಟ್ಟುಕೊಂಡ ಮಾಧ್ಯಮಗಳು ಅವರ ಪರವಾಗಿ 'ಪ್ರಜಾಪ್ರಭುತ್ವ'ವನ್ನು ನಿರ್ವಹಿಸುತ್ತವೆ. ಇದು ಅನಾರೋಗ್ಯಕರ. ಗ್ರಾಮೀಣ ಉದ್ಯೋಗ ಖಾತರಿ ಯೋಜನೆ, ರೈತರ ಸಾಲ ಮನ್ನಾ, ಕಡಿಮೆ ಬಡ್ಡಿಯ ಸಾಲ ಮುಂತಾದ ಹಲವಾರು ಜನಪರ ಕಾರ್ಯಕ್ರಮಗಳನ್ನು ರೂಪಿಸಿದ್ದು ಎಡಪಕ್ಷ ಮತ್ತು ಅವು ಸಾಧ್ಯವಾದುದು ಅವನ್ನು ವಿರೋಧಿಸಿದ ಚಿದಂಬರಂ, ಮಾಂಟೆಕ್ ಸಿಂಗರಿಂದ ಅಲ್ಲ ಎನ್ನುವುದನ್ನು ಪ್ರಚಾರ ಮಾಡಲು ಈ ಮಾಧ್ಯಮಗಳು ಮುಂದಾಗಲಿಲ್ಲವಷ್ಟೆ ಅಲ್ಲ, ಅವು ಆ ಕಾರ್ಯಕ್ರಮಗಳು ಮನಮೋಹನಸಿಂಗರದೇ ಎನ್ನುವಂತೆ ಪ್ರಚಾರ ಮಾಡಿದುವು. ಆದರೆ ಎಡಪಕ್ಷಗಳಿಗೆ ತಮ್ಮದೇ ಉತ್ತಮ ಕಾರ್ಯಕ್ರಮಗಳ ಪ್ರಯೋಜನವನ್ನು ಪಡೆಯುವ ತಂತ್ರವೂ ಕೈಗೂಡಲಿಲ್ಲವೇಕೆ ?

## ಶ್ರೀಲಂಕಾದಲ್ಲಿ ನಿಟ್ಟುಸಿರು

**ಜ**ವಹರಲಾಲ್ ನೆಹರು ಕಾಲದಲ್ಲಿ ಬಂಡಾರನಾಯಿಕೆ ಜೊತೆ ಏರ್ಪಟ್ಟ ಒಡಂಬಡಿಕೆಯ ಕಾಲದಿಂದಲೂ ಶ್ರೀಲಂಕಾ ಬಿಸಿ ಘರ್ಷಣೆಯ ವಾತಾವರಣದಲ್ಲೇ ನಡೆದುಬಂದಿದೆ. ಅಲ್ಲಿರುವ ತಮಿಳರು ಶ್ರೀಲಂಕಾದ ಪ್ರಜೆಗಳು. ಅವರ ಮುತ್ತಾತಂದಿರ ಕಾಲದಲ್ಲಿ ಅಲ್ಲಿ ಕೂಲಿಗೆಲಸಕ್ಕೆ ಹೋದವರು ಇಲ್ಲವೆ ಬಲವಂತವಾಗಿ ಹೊತ್ತೊಯ್ಯಲ್ಪಟ್ಟವರು. ಅವರನ್ನೆಲ್ಲಾ ಭಾರತಕ್ಕೆ ದಬ್ಬಬೇಕೆಂದು ೫೦ರ ದಶಕದಲ್ಲಿ ಪ್ರಯತ್ನವೊಂದು ನಡೆಯಿತು. ೬೦ ಮತ್ತು ೭೦ರ ದಶಕಗಳಲ್ಲಿ ಸಿಂಹಳೀಯರ ಮತ್ತು ತಮಿಳರ ನಡುವೆ ಸಂಘರ್ಷವೂ ಬಲವಾಯಿತು. ವ್ಯಾಪಕಗೊಂಡಿತು. ತಮಿಳರ ಮೇಲೆ ದಬ್ಬಾಳಿಕೆ, ಅವರಿಗೆ ಪ್ರಜಾಸ್ವಾತಂತ್ರ್ಯದ ನಿರಾಕರಣೆ, ಮತ್ತು ಆರ್ಥಿಕವಾಗಿ ಅನವಕಾಶ, ಇವು ತಮಿಳು ಉಗ್ರರ ಉಗಮಕ್ಕೆ ಮೂಲ ಕಾರಣ. ಪ್ರಾದೇಶಿಕ ಸ್ವಾಯತ್ತತೆಯನ್ನು ಕೊಡುವುದಾಗಿ ಮಾತುಕತೆಗಳಲ್ಲಿ ಹೇಳಿದರೂ ತಮಿಳರಿರುವ ಉತ್ತರ ಶ್ರೀಲಂಕಾಕ್ಕೆ ಸರ್ಕಾರವು ಯಾವ ಮಾನ್ಯತೆಯನ್ನೂ ನೀಡಲಿಲ್ಲ. ಆಂತರಿಕ ಹೋರಾಟಗಳಲ್ಲಿ ಸಿಂಹಳೀಯರು ಮತ್ತು ತಮಿಳರು ಅಧಿಕ ಸಂಖ್ಯೆಯಲ್ಲಿ ಹತರಾದರು. ಸಮಾಜವಾದಿ ವ್ಯವಸ್ಥೆಯ ಪರಿಹಾರ ತಾನು ಎನ್ನುತ್ತಿದ್ದ ಪ್ರಭಾಕರನ್ ದೇಶವನ್ನು ಇಬ್ಭಾಗ ಮಾಡಬೇಕೆಂದು ಒತ್ತಾಯಿಸುತ್ತಾ ಸಶಸ್ತ್ರ ಹೋರಾಟದಲ್ಲಿ ತೊಡಗಿದಾಗ ಪಶ್ಚಿಮ ಯೂರೋಪ್ ದೇಶಗಳಿಂದ ಸಾಕಷ್ಟು ಹಣ ಮತ್ತು ಬೆಂಬಲ ದೊರಕಿದ್ದು ಆತನ ದುರಾಗ್ರಹಕ್ಕೆ ಎಲ್ಲೆಯಿಲ್ಲದಾಯಿತು. ಕಾಶ್ಮೀರದ ಪ್ರಶ್ನೆಯು ಗಾಢವಾಗಿ ಕಾಡುತ್ತಿರುವ ಭಾರತಕ್ಕೆ ಯಾವ ದೇಶದ ಇಬ್ಭಾಗಕ್ಕೂ ಬೆಂಬಲ ನೀಡುವ ಬಲವಿಲ್ಲ, ಒಲವಿಲ್ಲ. ಸಿಂಹಳದ ಆಂತರಿಕ ವ್ಯವಹಾರಗಳಲ್ಲಿ ಭಾರತವು ಪ್ರವೇಶ ಮಾಡಬೇಕಾಗಿ ಬಂದದ್ದು ಎರಡೂ ದೇಶಗಳಿಗೆ ವ್ಯಸನ ತಂದಿತು. ಈಗ ಪ್ರಭಾಕರನ್ ಹತನಾಗಿ ಶ್ರೀಲಂಕಾದ ಉಗ್ರರು ಸ್ವಲ್ಪ ತಣ್ಣಗಾಗಿದ್ದಾರೆ, ದೇಶದ ವಿಭಜನೆ ತಪ್ಪಿದೆ. ತಮಿಳರಿಗೆ ನ್ಯಾಯಬದ್ಧವಾಗಿ ದೊರಕಬೇಕಾದ ಸಹಜ ಪ್ರಜಾಹಕ್ಕುಗಳನ್ನು ನೀಡುವತ್ತ ಶ್ರೀಲಂಕಾ ಸರ್ಕಾರ ಕಾರ್ಯೋನ್ಮುಖವಾಗಬೇಕು. ಇಲ್ಲದಿದ್ದರೆ ಪರಿಸ್ಥಿತಿ ಮತ್ತೆ ಬಿಗಡಾಯಿಸುತ್ತದೆ. ಭಾರತಕ್ಕೆ ನುಸುಳಿರುವ ಶ್ರೀಲಂಕಾದ ಉಗ್ರರನ್ನು ಪತ್ತೆ ಹಚ್ಚಿ ಅವರ ದೇಶಕ್ಕೆ ಹಿಂದಿರುಗುವಂತೆ ಮಾಡಬೇಕಾದ್ದು ದೇಶದ ಸುಭದ್ರತೆಗೆ ಅತ್ಯವಶ್ಯಕ. ತಮಿಳುನಾಡು ನಾಯಕತ್ವದ ಭಾವನಾತ್ಮಕ ಅಂಶಗಳನ್ನು ತಳ್ಳಿಹಾಕಿ ಶ್ರೀಲಂಕಾದ ಐಕ್ಯತೆಗೆ ನಾವು ಒತ್ತುಕೊಡಬೇಕು.


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| ಬಿಡಿ ಸಂಚಿಕೆ | ರೂ. ೧೨/- |
| --- | --- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)

ಸಾರ್ವಜನಿಕ ಸಂಪತ್ತನ್ನು ಖಾಸಗಿಯವರಿಗೆ ಹಸ್ತಾಂತರಗೊಳಿಸುವುದು, ಅಮೆರಿಕಾ - ಇಸ್ರೇಲ್‌ಗಳನ್ನು ತಬ್ಬಿಕೊಂಡು ಆಮೇಲೆ ಪುಡಿಪುಡಿಯಾಗುವುದು, ವಿದೇಶಾಂಗ ನೀತಿಯನ್ನು ಒಬಾಮಾಗೆ ತೃಪ್ತಿ ತರುವಂತೆ ಬದಲಾಯಿಸುವುದು, ಇವೆಲ್ಲಾ ನಾಳಿನ ಅನಿವಾರ್ಯವಾದ ಹೇಯ ಬೆಳವಣಿಗೆಗಳು. ಪಶ್ಚಿಮ ಬಂಗಾಳದಲ್ಲಿ ಎಡರಂಗವನ್ನು ಸೋಲಿಸಲು ಅಮೆರಿಕಾದ ಹಣ ಹರಿದುಬಂದಿದೆ ಎಂಬುದು ಅನುಮಾನದ ವಿಷಯವಲ್ಲ. ಜೊತೆಗೆ ಅಮೆರಿಕಾ ರಾಯಭಾರ ಕಚೇರಿಯ ಒಬ್ಬ ದುರುಳ ಅಧಿಕಾರಿಯು ಕೆಲವು ರಾಜಕೀಯ ಪಕ್ಷಗಳ ನೇತಾರರನ್ನು ಭೇಟಿಯಾಗಿ ಎಡಪಕ್ಷಗಳನ್ನು ಸರ್ಕಾರದಿಂದ ದೂರವಿರಿಸಬೇಕೆಂದು ಹೇಳಿದ್ದಾನೆ. ನಮ್ಮ ದೇಶದ ಆಂತರಿಕ ವ್ಯವಹಾರಗಳಲ್ಲಿ ಮೂಗು ತೂರಿಸುವುದು ಆಗಲೇ ಆರಂಭವಾಗಿದೆ. ಅದನ್ನು ಪ್ರಧಾನಿ ಖಂಡಿಸಿಲ್ಲ, ಖಂಡಿಸುವುದಿಲ್ಲ. ಅಲ್ಲದೆ ಶಶಿ ತರೂರ್ ಅವರನ್ನು ಪ್ರತಿಷ್ಠಾಪಿಸಲು ಕೇರಳದಿಂದ ಅವರನ್ನು ಚುನಾಯಿಸುವ ಪ್ರೇರಣೆ ಸಫಲವಾಗಿದೆ. ಶಶಿ ತರೂರ್ ಹುಟ್ಟಿದ್ದು ಇಂಗ್ಲೆಂಡಿನಲ್ಲಿ. ಈತನಿಗೆ ಮಲಯಾಳಂ ಬಾರದು. ವಿಶ್ವಸಂಸ್ಥೆಯಿಂದ ಸಾವಿರಾರು ಡಾಲರುಗಳ ನಿವೃತ್ತಿ ವೇತನ ದೊರೆಯುತ್ತದೆ. ಬಹುಶಃ ಈತನಿಗೆ ಅಮೆರಿಕಾದ ಪ್ರಜೆ ಎಂಬ ದಾಖಲೆಯೂ ಇರಬೇಕು. ಅಲ್ಲಿಯ ಪ್ರಜೆ ಇಲ್ಲಿಯೂ ಪ್ರಜೆ. ಆದ್ದರಿಂದ ಲೋಕಸಭೆಯಲ್ಲಿ ಕೂರಲು ಪರವಾನಗಿ ಉಂಟು. ಇನ್ನೊಬ್ಬನೊಡನೆ ಸೇರಿ ತರೂರ್ ಒಂದು ವ್ಯಾಪಾರಿ ಸಂಸ್ಥೆಯ ಒಡೆಯ. ರೆಡ್ ಕ್ರಾಸ್‌ಗೆ ಇವರೇ ಕಂಟ್ರಾಕ್ಟರು. ಸುನಾಮಿಯಂತಹ ಘಟನೆಯಾದಾಗ ಇವರ ಕಂಪನಿಗೆ ಅಪಾರ ಲಾಭ. ಡರ್ಫೂರ್ ಒಂದರಲ್ಲೇ ಕೋಟಿಗಟ್ಟಲೆ ಸಂಪಾದನೆಯಾಗಿದೆ. ಇರಾಕಿನಲ್ಲೂ ಲಾಭ ದೊರೆತಿದೆ. ಅವರ ಅಚಲವಾದ ನಿಷ್ಠೆ ಅಮೆರಿಕಾಕ್ಕೆ. ನಾವು ರಾಷ್ಟ್ರಗೀತೆಯನ್ನು ಹಾಡುವಾಗಲೂ ಅಮೆರಿಕಾವನ್ನು ಅನುಕರಿಸಬೇಕೆಂಬ ಮಹದಾಶಯ ಈತನದು. ನಾಳಿನ ದಿನಗಳಲ್ಲಿ ವಿದೇಶಾಂಗ ಸಚಿವನಾಗಿ ಈತ ಇನ್ನೇನು ಅನಾಹುತಗಳನ್ನುಂಟುಮಾಡುತ್ತಾನೋ ಎಂಬ ಆತಂಕಕ್ಕೆ ಎಡೆಯುಂಟು. ಒಟ್ಟಿನಲ್ಲಿ ಮನಮೋಹನ ಸಿಂಗರು ಭಾರತವನ್ನು ಒಂದು 'ಬನಾನಾ ರಿಪಬ್ಲಿಕ್' ಮಾಡಿಬಿಡುವ ಭರಾಟೆಯಲ್ಲಿದ್ದಾರೆ. ನಮ್ಮ ಮಾಧ್ಯಮಗಳು, ಭಾರತೀಯ ಜನತಾ ಪಕ್ಷ, ಹಾಗೂ ಉದ್ದಾಮ ವಿದ್ವಾಂಸರು ಇದನ್ನು ಗಣನೆಗೆ ತೆಗೆದುಕೊಂಡಿಲ್ಲ. ಒಂದಂಶವನ್ನು ಮನಸ್ಸಿನಲ್ಲಿ ಇಡಬೇಕು: ಈವರೆಗೆ ಎಲ್ಲೆಲ್ಲೂ ಭಯೋತ್ಪಾದಕರನ್ನು ಸೃಷ್ಟಿಸಿರುವುದು ಅಮೆರಿಕಾಕ್ಕೆ ಇನ್ನೂ ಸಾಲದೆಂಬಂತೆ ತೋರುತ್ತದೆ, ಭಾರತದಲ್ಲೂ ಅವರು ಹುಟ್ಟಿಕೊಳ್ಳಲು ಆಗುವಂತೆ ಅಮೆರಿಕಾ - ಭಾರತಗಳ ನಡುವಣ ಸಖ್ಯವನ್ನು ತಪ್ಪು ದಾರಿಯಲ್ಲಿ ಮುನ್ನಡೆಸುವ ಹುನ್ನಾರವನ್ನು ವಿಫಲಗೊಳಿಸುವ ಜವಾಬ್ದಾರಿಯನ್ನು ಚುನಾವಣೆಯಲ್ಲಿ ಸೋತಿರುವ ಪಕ್ಷಗಳು ನಿರ್ವಹಿಸಬೇಕು. ಅದರಲ್ಲಿ ಅಡ್ವಾನಿ ಪಕ್ಷವು ಭಾಗವಹಿಸುವ ಸಾಧ್ಯತೆ ಇರುವುದಿಲ್ಲ.

* * *

ಜಾಗತೀಕರಣ ಪ್ರಕ್ರಿಯೆಯ ತಥಾಕಥಿತ ಪ್ರಯೋಜನಗಳನ್ನು ಹೊಗಳುವುದು ಮನಮೋಹನ ಸಿಂಗರೊಬ್ಬರ ಚಾಳಿಯಲ್ಲ. ಅದ್ಭುತವಾದ ಆರ್ಥಿಕ ಬೆಳವಣಿಗೆ ಅದರಿಂದ ಸಾಧ್ಯವಾಗಿದೆಯೆಂದು ಅವರೆಲ್ಲರ ಅಂಬೋಣ. ಜನರ ನೇರವಾದ ಅನುಭವವು ಇದನ್ನು ಸುಳ್ಳನ್ನಾಗಿಸಿರುವುದಕ್ಕೆ ಉದಾಹರಣೆಗಳು ಹಲವು; ಅವನ್ನಿಲ್ಲಿ ಪಟ್ಟಿಮಾಡಬೇಕಾಗಿಲ್ಲ. ಚುನಾವಣೆಯಲ್ಲಿ ಕಾಂಗ್ರೆಸ್ ಗೆದ್ದನಂತರ ಉದ್ಯಮಿಗಳ ಒಕ್ಕೂಟದ ನಾಯಕರೊಬ್ಬರು ಹೇಳಿದ್ದಾರೆ, ಸರ್ಕಾರವು ಮೂಲ ಸೌಲಭ್ಯಗಳನ್ನು ನಿರ್ಮಿಸುವುದರಲ್ಲಷ್ಟೇ ತೊಡಗಿಕೊಳ್ಳಬೇಕು, ಎಂದು. ಅಂದರೆ, ಸೌಲಭ್ಯಗಳ ರಚನೆಗೆ (ರಸ್ತೆ, ರೈಲು ಮಾರ್ಗ, ಬಂದರು ನಿರ್ಮಾಣ, ಇತ್ಯಾದಿ) ಸಾರ್ವಜನಿಕರ ಹಣ, ಅದರಿಂದ ಖಾಸಗಿ ''ಉದ್ಯಮಿಗಳು'' ಲಾಭ ದೋಚಿಕೊಳ್ಳಲು ಅವಕಾಶ ಕಲ್ಪಿಸುವುದು ಸರ್ಕಾರದ ಹೊಣೆ, ಎಂದರ್ಥ. ಜಾಗತೀಕರಣ, ಆಂತರಿಕ ಮಾರುಕಟ್ಟೆಯ ನಿಯಂತ್ರಣ, ಹಣಕಾಸು ಸಂಸ್ಥೆಗಳ ಕಾರ್ಯವೈಖರಿ, ಮುಂತಾದುವುಗಳ ಬಗ್ಗೆ ಸಿಂಗ್-ಚಿದಂಬರಂ- ಅಹ್ಲುವಾಲಿಯಾ ತ್ರಿಕೂಟದೊಡನೆ ಭಿನ್ನಾಭಿಪ್ರಾಯಗಳನ್ನು ಹೊಂದಿದ್ದ ವೈ. ವಿ.ರೆಡ್ಡಿಯವರನ್ನು ಕೇಂದ್ರ ಸರ್ಕಾರವು ರಿಸರ್ವ್ ಬ್ಯಾಂಕ್ ಅಧ್ಯಕ್ಷಗಿರಿಯಿಂದ ದೂರಮಾಡಿತು. ಅವರ ಜಾಗದಲ್ಲಿ ಹೌದಪ್ಪನೊಬ್ಬನನ್ನು ನೇಮಿಸಿದ್ದಾರೆ. ರೆಡ್ಡಿ ಎಲ್ಲೋ ವಿಶ್ವವಿದ್ಯಾನಿಲಯಗಳಲ್ಲಿ ಅಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ. ಇತ್ತೀಚೆಗೆ ಅವರು ಪ್ರಕಟಿಸಿರುವ ಒಂದು ಮಹತ್ವದ ಗ್ರಂಥದ ಹಿನ್ನೆಲೆಯಲ್ಲಿ 'ದಿ ಹಿಂದು' ಪತ್ರಿಕೆಯು ರೆಡ್ಡಿಯವರನ್ನು ಸಂದರ್ಶಿಸಿ ಲೇಖನವೊಂದನ್ನು ಪ್ರಕಟಿಸಿತ್ತು. ಜಾಗತಿಕ ಹಣಕಾಸು ಬಿಕ್ಕಟ್ಟಿನ ಬಿಸಿ ನಮಗೆ ಬಹುವಾಗಿ ತಟ್ಟಿಲ್ಲ; ಅದಕ್ಕೆ ಕಾರಣ ನಾವು ಅನುಸರಿಸಿರುವ ಕಟ್ಟುನಿಟ್ಟಾದ ನಿರ್ಬಂಧಗಳು, ಎಂಬುದು ರೆಡ್ಡಿಯವರ ಮೂಲತತ್ತ್ವ. ಜಾಗತಿಕ ಹಣಕಾಸಿನ ಬಿಕ್ಕಟ್ಟು ಆಕಸ್ಮಿಕವಲ್ಲ, ಅದು ಈ ದಶಕದ ಆರ್ಥಿಕ ನೀತಿಗಳಿಂದ ಪರಿಣಮಿಸಿದೆ, ಎಂದು ಅವರು ವಾದಿಸಿದ್ದಾರೆ. ಉದ್ಯಮಿಗಳಿಗೆ ಬೇಕಾಬಿಟ್ಟಿ ಸಾಲಗಳನ್ನು ನೀಡಿ ಬ್ಯಾಂಕುಗಳು ದಿವಾಳಿಯಾದರೆ ಅದರ ಹೊಡೆತ ಬೀಳುವುದು ಜನಸಾಮಾನ್ಯರಿಗೆ; ಆದ್ದರಿಂದ ಅಮೆರಿಕಾದ ಬ್ಯಾಂಕುಗಳ ನೀತಿಯು ನಮಗೆ ಸ್ವಾಗತಾರ್ಹವಲ್ಲ, ಎಂದು ಅವರು ನಿದರ್ಶನಗಳ ಸಮೇತ ಪ್ರತಿಪಾದಿಸಿದ್ದಾರೆ. ಈಗಿರುವುದಕ್ಕಿಂತಲೂ ಹೆಚ್ಚಿನ ವಿದೇಶಿ ಬಂಡವಾಳದ ಹೂಡಿಕೆಯು ನಮ್ಮ ದೇಶಕ್ಕೆ ಹೇಗೆ ಭಾರಿ ಅಪಘಾತವನ್ನುಂಟುಮಾಡುತ್ತದೆಂದು ರೆಡ್ಡಿಯವರು ವಿವರಣೆ ನೀಡಿದ್ದಾರೆ. ಹಣಕಾಸಿನ ಜಾಗತೀಕರಣವೇ ಬೇರೆ, ವ್ಯಾಪಾರ - ವಹಿವಾಟುಗಳ ಜಾಗತೀಕರಣವೇ ಬೇರೆಯೆಂದು ಎಚ್ಚರಿಸಿ ಹಣಕಾಸಿನ ಜಾಗತೀಕರಣದ ಸುಳಿಯಲ್ಲಿ ನಮ್ಮ ದೇಶವು ಸಿಲುಕಿಕೊಂಡರೆ ನಾವು ಮುಳುಗಿ ಹೋಗುತ್ತೇವೆಂಬ ಆತಂಕವನ್ನು ವ್ಯಕ್ತಪಡಿಸಿದ್ದಾರೆ. ಇದನ್ನೆಲ್ಲಾ ಮನಮೋಹನ ಸಿಂಗರು ಮನನ ಮಾಡಿಕೊಳ್ಳಬೇಕೆಂದು ಅವರಲ್ಲಿ ವಿನಂತಿಸಿಕೊಳ್ಳುವ ಅಗತ್ಯವಿದೆ.

* * *

ಬೆಂಗಳೂರಿನಲ್ಲಿ ಹತ್ತಾರು ವಿಧದ ತಿಮಿಂಗಿಲಗಳಿವೆ. 'ಸೇವೆ' ಎಂದು ಕರೆಯಲಾಗುವ ಐ.ಎ.ಎಸ್. ಮತ್ತು ಐ.ಪಿ.ಎಸ್.ಗಳನ್ನು ಪಾಸು ಮಾಡಿಕೊಂಡು ಅಧಿಕಾರದಲ್ಲಿರುವವರಲ್ಲಿ ಒಂದು ದೊಡ್ಡ ಬಣವು ಅಂತಹ ಒಂದು ತಿಮಿಂಗಿಲ. ಸಮಾಜದ ಬೇರೆ ಬೇರೆ ಗುಂಪುಗಳ ಮೇಲೆ ಈ ತಿಮಿಂಗಿಲಗಳ ಪ್ರಹಾರ ಅಗಾಧವಾದ್ದು. ಜನರನ್ನು ಗೌರವಿಸುವ ಅಧಿಕಾರಿಗಳು ಅಲ್ಪಸಂಖ್ಯೆಯವರಾದ್ದರಿಂದ ಅವರಿಗೂ ಈ ತಿಮಿಂಗಿಲಗಳನ್ನು ತಡೆಹಿಡಿಯಲು ಈವರೆಗೆ ಸಾಧ್ಯವಾಗಿಲ್ಲ. ಮಂತ್ರಿಗಳಿಗೆ ಆಜ್ಞೆ ನೀಡುವ ಅಧಿಕಾರಿಗಳು ಇದ್ದಾರೆನ್ನುತ್ತಾರೆ; ಆದರೆ ಒಳಹೊಕ್ಕು ಅದನ್ನು ನೋಡಲು ಶ್ರೀಸಾಮಾನ್ಯನಿಗೆ ಸಾಧ್ಯವಿಲ್ಲ.

ಇತ್ತೀಚಿನ ಒಂದು ಪ್ರಹಾರವು ರೈತರನ್ನು ರೊಚ್ಚಿಗೇಳಿಸಿ ಅವರು ತೀವ್ರವಾದಿಗಳಾಗುವಂತೆ ಮಾಡಿದರೆ ಆಶ್ಚರ್ಯವಿಲ್ಲ. ಸರ್ಕಾರವು ರೈತರಿಂದ ''ಸಾರ್ವಜನಿಕ ಉಪಯೋಗ''ಕ್ಕಾಗಿ ಆಗಾಗ್ಗೆ ಭೂಮಿಯನ್ನು ಕಸಿದುಕೊಳ್ಳುವುದು ರೂಢಿಯಾಗಿಬಿಟ್ಟಿದೆ. ಒಂದು ನಿವೇಶನ ಇರುವವರು ಇನ್ನೊಂದು, ಮತ್ತೊಂದು, ನಿವೇಶನ ಪಡೆಯಲು ಅನುಕೂಲವಾಗುವಂತೆ ನಗರಾಭಿವೃದ್ಧಿ ಪ್ರಾಧಿಕಾರವು ಹೊಸಹೊಸ ಬಡಾವಣೆಗಳನ್ನು ಮಾಡುತ್ತಿರುತ್ತದೆ. (ಅದರಲ್ಲಿ ಗುಳುಂ ಮಾಡಲು ಹೇರಳ ಅವಕಾಶವಿದೆ, ಆದ್ದರಿಂದಲೇ ಬಡಾವಣೆಗಳು ಹುಟ್ಟಿಕೊಳ್ಳುತ್ತವೆ.) ನಿವೇಶನ ಪಡೆಯಲು ಆರ್ಥಿಕ ಚೈತನ್ಯ ಉಳ್ಳವರು ಈಗಾಗಲೇ ಪಡೆದಿದ್ದಾರೆ; ಹೊಸ ನಿವೇಶನಗಳನ್ನು ಪಡೆಯುವವರೂ ಬಹುತೇಕ ಅವರೇ ಆಗಿರುತ್ತಾರೆ. ಹಿಂದೊಮ್ಮೆ ಅರ್ಕಾವತಿ ಬಡಾವಣೆ ನಿರ್ಮಿಸಲು ನೂರಾರು ಎಕರೆ ಜಮೀನನ್ನು ರೈತರಿಂದ ಕಿತ್ತುಕೊಳ್ಳಲಾಗಿತ್ತು. ರೈತರಿಗೆ ನೀಡಿದ ಹಣವು ಮಾರುಕಟ್ಟೆ ಬೆಲೆಗೆ ಸಮನಾಗಿರಲಿಲ್ಲ. ಏನೋ ವಿವಾದದಿಂದಾಗಿ ಬಡಾವಣೆ ಇನ್ನೂ ಅಸ್ತಿತ್ವಕ್ಕೆ ಬಂದಿಲ್ಲ. ಆ ಜಮೀನಿನ ಮೇಲೆ ಐ.ಎ.ಎಸ್. - ಐ.ಪಿ.ಎಸ್. ತಿಮಿಂಗಿಲಗಳ ಕಣ್ಣುಬಿದ್ದಿದೆ. ಅವರವರೇ ಇರುವಂತಹ ಗೃಹನಿರ್ಮಾಣ ಸಂಘವನ್ನು ರಚಿಸಿಕೊಂಡು ಅತ್ಯಂತ ಕಡಿಮೆ ಬೆಲೆಗೆ ಅರ್ಕಾವತಿ ಬಡಾವಣೆಗಾಗಿ ಪಡೆಯಲಾದ ಭೂಮಿಯ ಒಂದು ದೊಡ್ಡ ಭಾಗವನ್ನು ಕಬಳಿಸುವ ಅಸಹ್ಯ ಯತ್ನ ನಡೆದಿದೆ. ಗೃಹನಿರ್ಮಾಣ ಸಂಘಗಳವರು ಮಾರುಕಟ್ಟೆಯ ಬೆಲೆಯನ್ನು ಕೊಟ್ಟು ಭೂಮಿಯನ್ನು ಪಡೆಯುವುದು ರೂಢಿ. ಆದರೆ ಜನರ ''ಸೇವೆ'' ಮಾಡುವ ಅಧಿಕಾರಿಗಳು, ಪಾಪ, ಕಡುಬಡವರು, ಆದ್ದರಿಂದ ರೈತರ ಹೊಟ್ಟೆ ಬಗೆದು ಇವರು ಭೂಮಿ ಪಡೆದು ಐದನೆಯದೋ ಆರನೆಯದೋ ನಿವೇಶನ ಮಾಡಿಕೊಳ್ಳಬೇಕು! ಇದಕ್ಕೆ ಸರ್ಕಾರದ ಮಹಾಮಂತ್ರಿಗಳ ಸಮ್ಮತಿ ಇದೆ. ಇದನ್ನು ವರದಿ ಮಾಡಿದ ಪತ್ರಿಕೆಯು ಮುಂದಿನ ಬೆಳವಣಿಗೆಯನ್ನು ದಾಖಲಿಸಿಲ್ಲ. ಕಾನೂನು ಸಮರದಿಂದ ರೈತರಿಗೆ ಪರಿಹಾರವು ದೊರೆಯುವುದು ದೂರದ ಮಾತು; ಏಕೆಂದರೆ, ಈ ಅಧಿಕಾರಿಗಳಿಗೆ ತಿಳಿಯದ ಕಾನೂನು ಯಾವುದೂ ಇಲ್ಲ. ರೈತರಿಗೆ ಅವರ ಭೂಮಿಯನ್ನು ಹಿಂದಿರುಗಿಸಬೇಕು, ಇಲ್ಲವೆ ಅವರಿಗೆ ಒಪ್ಪಿಗೆಯಾಗುವ ಮಾರುಕಟ್ಟೆ ಬೆಲೆಯನ್ನು ನೀಡಿ ತಿಮಿಂಗಿಲಗಳು ಭೂಮಿಯನ್ನು ಅರಗಿಸಿಕೊಳ್ಳಬೇಕು. ಅದನ್ನು ಮಾಡದಿದ್ದರೆ ರೈತರು ಕಾನೂನನ್ನು ಕೈಬಿಟ್ಟು ಸ್ವತಂತ್ರ ಮಾರ್ಗಗಳನ್ನು ಹುಡುಕಿಕೊಳ್ಳುತ್ತಾರೆ. ಆಗ ಅವರನ್ನು ಬಗ್ಗುಬಡಿಯಲು ಇದೇ ಅಧಿಕಾರಿಗಳಿರುತ್ತಾರೆ!

ಅಂದರೆ, ತಿಮಿಂಗಿಲಗಳನ್ನು ಅಟ್ಟಲು ರೈತರು ತೀವ್ರಗಾಮಿಗಳಾಗ ಬೇಕ ? ನಾಗರಿಕ ಸಮಾಜವು ಇದಕ್ಕೆ ಉತ್ತರ ಕೊಡಲು ಬದ್ಧವಾಗಿದೆ.

*   *   *

ವಿಶ್ವವಿದ್ಯಾನಿಲಯವೆಂದು ಹೆಸರು ಪಡೆಯಲು ಒಂದು ಸಂಸ್ಥೆಯು ಸರ್ವಾಂಗೀಣ ಚಿಂತನೆಯ ಕ್ಷೇತ್ರವಾಗಿರಬೇಕೆಂಬ ನಿರೀಕ್ಷೆಯು ಸಾರ್ವಕಾಲಿಕವಾದ್ದು. ಏಕಮುಖದ ದೃಷ್ಟಿಯು ಅದಕ್ಕೆ ಶೋಭಿಸುವುದಿಲ್ಲ. ಎಲ್ಲ ನಿಟ್ಟಿನಿಂದಲೂ ವಿಮರ್ಶೆಯು ಸಾಧ್ಯವಾಗುವುದು ವಿಶ್ವವಿದ್ಯಾನಿಲಯದ ಉದಾರವಾದಿ ನಿಲುವಿನಿಂದ. ಅಲ್ಲಿಯೂ ಶ್ರೀರಾಮಸೇನೆಯ ಪ್ರವೇಶವಾಗಿ, ಅಭಿಪ್ರಾಯ ಮತ್ತು ವಿಮರ್ಶೆಗಳಿಗೆ ಲಗಾಮು ಹಾಕಿ, ಉಪಕುಲಪತಿಗಳು ಕುದುರೆಗೆ ಕಣ್ಣಟ್ಟು ಕಟ್ಟಿ ಓಡಿಸುವುದಾದರೆ ಅದು ವಿಶ್ವವಿದ್ಯಾನಿಲಯದ ಪ್ರಾಥಮಿಕ ಲಕ್ಷಣಗಳನ್ನು ಕಳೆದುಕೊಳ್ಳುತ್ತದೆ. ವೈದ್ಯಕೀಯದಲ್ಲಿ ನಿಷ್ಣಾತರಾದ ಎನ್. ಪ್ರಭುದೇವ ಅವರು ಈಗ ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳು. ಶಸ್ತ್ರಕ್ರಿಯೆಯಲ್ಲಿ ಅವರದ್ದು ಎತ್ತಿದ ಕೈ ಎನ್ನುತ್ತಾರೆ. ಆದರೆ ವೈದ್ಯಕೀಯ ಶಿಸ್ತಿನ ಅಧ್ಯಯನವೇ ಇಲ್ಲದ ವಿಶ್ವವಿದ್ಯಾನಿಲಯಕ್ಕೆ ಅವರು ಬಂದಿದ್ದಾರೆ. ಅವರ ಶಸ್ತ್ರಕ್ರಿಯೆಯಿಂದ ಬೆಂಗಳೂರು ವಿಶ್ವವಿದ್ಯಾನಿಲಯವು ಗುಣಮುಖವಾಗುವುದೋ ಅಥವಾ ಮರಣಿಸುತ್ತದೋ ಎಂಬ ಶಂಕೆಯು ಬಾಧಿಸು ವಂತಾಗಿದೆ. ಮಾನ್ಯ ಪ್ರಭುದೇವ ಅವರಿಗೆ ವಿಶ್ವವಿದ್ಯಾನಿಲಯ ಮತ್ತು ಉಪಕುಲಪತಿತ್ವ ಎಂದರೆ ಹೆಮ್ಮೆಯಂತೆ; ಆದ್ದರಿಂದ ಯಾರೂ ಅಲ್ಲಿಯ ಕ್ರಿಯಾಚರಣೆಯನ್ನು ಟೀಕಿಸಬಾರದಂತೆ ! ಟೀಕಿಸದಿದ್ದಾಗೆಲ್ಲಾ ಶ್ರೇಷ್ಠತೆಯು ನೆಲೆಗೊಂಡಿರುತ್ತದೆಂಬ ಮೂರ್ಖತನವು ಅವರನ್ನಾವರಿಸಿದೆ. ೨೦೦೯ರ ಏಪ್ರಿಲ್ ೬ರಂದು ಪ್ರಭುಗಳು ಎಲ್ಲ ವಿಭಾಗಗಳಿಗೂ ಪತ್ರ ಬರೆದು ಆಜ್ಞಾರೂಪದ ಸೂಚನೆಯನ್ನು ಹೊರಡಿಸಿದ್ದಾರೆ: ''ಹಲವು ವಿಭಾಗಗಳು ನಡೆಸುವ ಕಾರ್ಯಕ್ರಮಗಳಲ್ಲಿ ಹೊರಗಿನವರು ಬಂದು ವಿಶ್ವವಿದ್ಯಾನಿಲಯದ ಬಗ್ಗೆ ಅನುಚಿತವಾದ ಮಾತುಗಳನ್ನಾಡುತ್ತಾರೆ ಮತ್ತು ನಿಂದನೆಯನ್ನೂ ಮಾಡುತ್ತಾರೆಂಬುದು ನನ್ನ ಗಮನಕ್ಕೆ ಬಂದಿದೆ. ನ್ಯೂನತೆಗಳನ್ನು ನಾವೆಲ್ಲಾ ಒಟ್ಟಾಗಿ ಸರಿಪಡಿಸೋಣ. ಅನುಚಿತ ಮತ್ತು ನಿಂದನೆಯ ಮಾತನ್ನಾಡುವವರನ್ನು ಕಾರ್ಯಕ್ರಮಗಳಿಗೆ ಕರೆಯದಿರೋಣ... ಇನ್ನು ಮುಂದೆ ಕಾರ್ಯಕ್ರಮಗಳನ್ನು ಆಯೋಜಿಸುವ ಮುನ್ನ ಎಲ್ಲ ವಿಭಾಗಗಳವರೂ ಸಂಬಂಧಪಟ್ಟ ಅಧಿಕಾರಿಗಳೊಡನೆ ಚರ್ಚಿಸಬೇಕೆಂದು ಸೂಚಿಸುತ್ತೇನೆ. ಯಾರನ್ನು ಕರೆಯಲು ಉದ್ದೇಶಿಸಲಾಗಿದೆ ಎಂಬುದನ್ನು ಮೊದಲೇ ತಿಳಿಸಬೇಕು... ಹೊರಗಡೆಯವರು ನಮ್ಮನ್ನು ನಿಂದಿಸದಿರುವಂತೆ ಕ್ರಮ ತೆಗೆದುಕೊಳ್ಳುವುದು ಅಗತ್ಯ.''

ಆಶ್ಚರ್ಯ ಮತ್ತು ಆತಂಕದ ಸಂಗತಿಯೆಂದರೆ ವಿಶ್ವವಿದ್ಯಾನಿಲಯವೊಂದು ಬಾಗಿಲುಗಳನ್ನು ಮುಚ್ಚಿಕೊಂಡು ಕೂತರೆ ತನ್ನೊಳಗಿನ ಹುಳುಕು ಇಲ್ಲವಾಗುವುದಿಲ್ಲವೆಂಬ ಪರಿಜ್ಞಾನವಿಲ್ಲದಿರುವುದು. ಇಲ್ಲಿಯ ಅಧ್ಯಾಪಕರು ಈವರೆಗೂ ಈ ಸೂಚನೆಗೆ ಪ್ರತಿಭಟಿಸಿಲ್ಲದಿರುವುದೂ ಆತಂಕದ ವಿಷಯವೇ. ಯಾರನ್ನು ಕರೆಯಬೇಕು ಮತ್ತು ಅವರು ಏನನ್ನು ಹೇಳಬೇಕು ಎಂಬುದನ್ನು ನಿಗದಿಗೊಳಿಸಬೇಕೆ ? ಟೀಕೆಯು ಅಷ್ಟು ಅಪಥ್ಯವೆ ? ಹುರುಳಿಲ್ಲದ ಆರೋಪ ಕೂಡದೆನ್ನುವುದು ಬೇರೆ, ಸಕಾರಣವಾಗಿಯೂ ಟೀಕಿಸಕೂಡದೆಂಬುದು ಬೇರೆ. ಉದಾಹರಣೆಗೆ, ವಿಶ್ವವಿದ್ಯಾನಿಲಯದ ಘಟಿಕೋತ್ಸವ ನಡೆಯಿತು. ಒಂದಷ್ಟು ಸ್ವಾಮಿಗಳಿಗೆ, ಮಹಾಜನಗಳಿಗೆ, ಈರುಳ್ಳಿ ವ್ಯಾಪಾರಗಾರರಿಗೆ ಗೌರವ ಡಾಕ್ಟರೇಟ್ ನೀಡಲಾಯಿತು. ಪಾಪ, ಡಾ|| ಎಂ. ಷಡಕ್ಷರಸ್ವಾಮಿಗಳನ್ನು ಅವರೊಡನೆ ಕುಳ್ಳಿರಿಸಲಾಯಿತು. ಗೌರವ ಪದವಿಗೆ ಅರ್ಹತೆಯೇನು, ಮಾನದಂಡವೇನು ? ಊಹುಂ, ಅದನ್ನೆಲ್ಲಾ ಕೇಳಕೂಡದು, ಕೇಳುವವರನ್ನು ಒಳಗೆ ಬಿಡಬಾರದು ! ಹೋಗಲಿ, ಘಟಿಕೋತ್ಸವ ನಡೆದು ತಿಂಗಳಾಯಿತು. ಪದವಿ ಪ್ರಮಾಣಪತ್ರಗಳನ್ನು ಕಾಲೇಜುಗಳಿಗೆ ಕಳಿಸಲಾಗಿದೆಯೆ ? ಅದನ್ನೂ ಕೇಳಬಾರದು ! ಇವತ್ತು ಇಂತಹ ಸೂಚನೆ, ನಾಳೆ ಇನ್ನೇನೋ ಸೂಚನೆ : ಪಾಠ ಮಾಡುವಾಗ ಮುರಳಿ ಮನೋಹರ ಜೋಶಿ ಶೈಲಿಯ ವಿಜ್ಞಾನ, ಇತಿಹಾಸ, ಬೋಧಿಸಬೇಕು; ಪಠ್ಯ ಪುಸ್ತಕಗಳು 'ಕೇಶವಕೃಪ' ಎಂಬ ''ಉನ್ನತ ಸಂಸ್ಕೃತಿ ಕೇಂದ್ರ''ದಲ್ಲಿ ಸಿದ್ಧವಾಗಬೇಕು ಅಥವಾ ಪರಿಷ್ಕರಿಸಲ್ಪಡಬೇಕು ಇತ್ಯಾದಿ. ಪ್ರಭುಗಳನ್ನು ಸಿದ್ಧಗಂಗೆಯ ಸ್ವಾಮಿಗಳು ಉಪಕುಲಪತಿ ಸ್ಥಾನಕ್ಕೆ ಶಿಫಾರಸ್ಸು ಮಾಡಿದ್ದು ಇಂತಹ ಕುಕೃತ್ಯಗಳನ್ನೆಸಗಿ ಪ್ರಜಾಪ್ರಭುತ್ವದ ಕ್ರಮಗಳನ್ನು ಬದಿಗೆ ಸರಿಸಲೆಂದೆ ? ಪ್ರಭುದೇವರು ಒಳ್ಳೆಯ ಶಸ್ತ್ರಚಿಕಿತ್ಸೆ ಮಾಡುವವರಿರಬಹುದು, ಆದರೆ ಯಾವ ಮೇಧಾವಿಯೂ ಫ್ಯಾಸಿಸ್ಟ್ ಪ್ರವೃತ್ತಿಗಳಿಗೆ ಉತ್ತೇಜನ ನೀಡುವ ಮಹಾಪರಾಧ ಎಸಗಕೂಡದು. ವಿಶ್ವವಿದ್ಯಾನಿಲಯವು ಫ್ಯಾಸಿಸಂನ ಪ್ರಯೋಗ ಕೇಂದ್ರವಲ್ಲ.

ಇನ್ನೊಂದು ಅಕ್ರಮ ವಿಕ್ರಮವೂ ಪ್ರಭುದೇವರ ನಾಯಕತ್ವದಲ್ಲಿ ನಡೆದು ಹೋಗಿದೆ. ಹೊಸ ಕಾಲೇಜುಗಳನ್ನು ಸ್ಥಾಪಿಸಲಿಚ್ಛಿಸುವ ಅಭ್ಯರ್ಥಿಗಳನ್ನು ಮೊದಲು ಖಾಸಗಿ ಸಂಸ್ಥೆಯೊಂದು ಪರಿಶೀಲಿಸಿ ಶಿಫಾರಸು ಮಾಡಬೇಕಂತೆ. ಆಮೇಲೆ ವಿಶ್ವವಿದ್ಯಾನಿಲಯದ ಪರಿಣತರ ಸಮಿತಿ ಹೋಗುತ್ತದಂತೆ. ಹೀಗೆ ಖಾಸಗಿಯಾಗಿ ನೇಮಕಗೊಳ್ಳುವ ವ್ಯಕ್ತಿ ಅಥವಾ ಸಂಸ್ಥೆಗೆ ವಿಶ್ವವಿದ್ಯಾನಿಲಯದ ಶಾಸನದಲ್ಲಿ ಸ್ಥಾನ ಎಲ್ಲಿದೆ ? ಹೊಸ ನಿಯಮವು ಯಾವ ಏಜೆಂಟರ ಲಾಭಕ್ಕಾಗಿ ? ಒಬಾಮಾ ''ಔಟ್‌ಸೋರ್ಸಿಂಗ್'' ಬೇಡವೆನ್ನುತ್ತಾನೆ, ಆದರೆ ಅದೇ ಪ್ರಭುದೇವರಿಗೆ ಆಪ್ಯಾಯಮಾನವಾದ್ದು. ಸಿಂಡಿಕೇಟೆಂಬ ಅಂಗಸಂಸ್ಥೆಯು ಇದಕ್ಕೆ ಒಪ್ಪಿಗೆ ನೀಡಿದ್ದು ಹೇಗೆಂಬುದು ನಿಗೂಢವಾಗಿ ಉಳಿದಿದೆ. ಬಹುಶಃ ರಾಜ್ಯದ ಉನ್ನತ ಶಿಕ್ಷಣ ಸಚಿವರ ಅಪೇಕ್ಷೆಯಂತೆ ಇದೆಲ್ಲಾ ನಡೆದಿದೆಯೆಂಬ ಮಾತು ಕೇಳಿಬಂದಿದೆ. ಅದಕ್ಕೆ ಎನ್. ಪ್ರಭುದೇವ್ ಏನು ಹೇಳುತ್ತಾರೆ?

*   *   *

ಚುನಾವಣೆಯ ನಂತರ ಎಣಿಕೆಯಾಗುವವರೆಗೆ ಇಲೆಕ್ಟ್ರಾನಿಕ್ ಯಂತ್ರಗಳನ್ನು ಕಾಲೇಜುಗಳಲ್ಲಿ ಇರಿಸಲಾಗಿತ್ತು. ವಿದ್ಯಾರ್ಥಿಗಳಿಗೆ ಒಂದು ತಿಂಗಳು ಪಾಠ-ಪ್ರವಚನ ಗಳಿಲ್ಲ. ಎಲ್ಲೆಡೆ ಪೊಲೀಸ್ ಕಾವಲು. ಆದರೆ ಈ ವಿದ್ಯಾರ್ಥಿಗಳು ಬೇರೆಯವರಂತೆ ಪರೀಕ್ಷೆಗೆ ಹೋಗಬೇಕು. ಅವರಿಗೆ ಪಾಠವೇ ಆಗಿರುವುದಿಲ್ಲ. ಚುನಾವಣಾ ಸಾಮಗ್ರಿಗಳನ್ನು ಸುಭದ್ರವಾಗಿಡಲು ಒಂದು ಸದೃಢ ಕಟ್ಟಡವನ್ನು ಕಟ್ಟಿಕೊಳ್ಳುವುದು ಚುನಾವಣಾ ಆಯೋಗದ ಕರ್ತವ್ಯ. ಕಾಲೇಜುಗಳನ್ನು ಬಳಸಿಕೊಂಡು ವಿದ್ಯಾರ್ಥಿ ಗಳನ್ನು ಬೌದ್ಧಿಕವಾಗಿ ಕೊಲ್ಲುವುದು ಸರ್ವಥಾ ಯೋಗ್ಯವಲ್ಲ. ಇದರ ಬಗೆಗೆ ಪ್ರೊಫೆಸರ್ ಎನ್. ಪ್ರಭುದೇವ ಅವರು ಸೂಚನೆ ನೀಡಿದ್ದರೆ ಒಳಿತಿರುತ್ತಿತ್ತು. ಹೊಸ ಕಟ್ಟಡ ಕಟ್ಟಲಾಗದಿದ್ದರೆ ಚುನಾವಣಾ ಆಯೋಗವು ವಿದ್ಯಾರ್ಥಿಗಳಿಗೆ ತರಗತಿಗಳನ್ನು ನಡೆಸಲು ಬೇರಾವುದಾದರೂ ಜಾಗವನ್ನು ಕೊಡಬೇಕು ಇಲ್ಲವೆ ಕೊಡಿಸಬೇಕು.

*   *   *

ಹೀಗೊಂದು ಕತೆ : ಒಂದು ರಾಜ್ಯವಿದೆ. ಅಲ್ಲಿ ಚುನಾವಣೆ ನಡೆಯಲಿದೆ. ಒಂದು ಬಲಿಷ್ಠ ಪಕ್ಷಕ್ಕೆ ಚುನಾವಣಾ ಕಚೇರಿಗಾಗಿ ಒಂದು ದೊಡ್ಡ (ಮೂರಂತಸ್ತಿನ) ಕಟ್ಟಡ ಬೇಕು. ಬೆಂಗಳೂರಿನಂತಹ ಊರಿನಲ್ಲಾದರೆ ಅದು ಮಲ್ಲೇಶ್ವರದಂತಹ ಕಡೆ ಇರಬೇಕು. ಪಕ್ಷದ ವರಿಷ್ಠರೊಬ್ಬರು ಹಂಗಾಮಿಯಾಗಿ ಒಂದು ದೊಡ್ಡ ಕಟ್ಟಡವನ್ನು ಬಿಟ್ಟುಕೊಡುತ್ತಾರೆ. ಅವರು ಸಂಪುಟ ಸಚಿವರೂ ಆಗಿರುತ್ತಾರೆ. ''ಚುನಾವಣೆ ಮುಗಿಯಿತು, ಕಟ್ಟಡ ಖಾಲಿ ಮಾಡಿ''ಎನ್ನುತ್ತಾರೆ. ಅವರಿಗೆ ಉನ್ನತ ಸ್ಥಾನದ ಮಹನೀಯರೊಬ್ಬರು ಆದೇಶ ಕಳಿಸುತ್ತಾರೆ, ''ಸಚಿವ ಸ್ಥಾನದಲ್ಲಿ ಮುಂದುವರಿಯಬೇಕೋ ಅಥವಾ ಕಟ್ಟಡ ಬೇಕೋ'' ಎಂದು. ಸಚಿವ ಸ್ಥಾನವನ್ನು ಆಯ್ದುಕೊಂಡು ಕಟ್ಟಡವನ್ನು ದೊಡ್ಡ ಮಹನೀಯರ ಮಗನ ಹೆಸರಿಗೆ ವರ್ಗಾಯಿಸುತ್ತಾರೆ. ಹೇಗಿದೆ ವ್ಯವಹಾರ ?

ಇದು ಬೆಂಗಳೂರಿನ ಕತೆಯೂ ಆಗಬಹುದು, ಭೋಪಾಲ್‌ನ ಕತೆಯೂ ಆಗಬಹುದು ! ರಾಜಕೀಯವನ್ನು ಎಷ್ಟು ಘೋರವನ್ನಾಗಿಸಿದ್ದಾರೆ !!

*   *   *

ನಮ್ಮ ರಾಜ್ಯದ ಪ್ರಾಥಮಿಕ ಶಿಕ್ಷಣದಲ್ಲಿ ಮಾತೃಭಾಷಾ ಮಾಧ್ಯಮಕ್ಕೆ ಶನಿಕಾಟ ತಪ್ಪಿದ್ದಲ್ಲ. ಯಾವ ಭಾಷೆಯನ್ನಾದರೂ ಆಯ್ಕೆ ಮಾಡಿಕೊಳ್ಳುವುದು ಪೋಷಕರ ಮೂಲಭೂತ ಹಕ್ಕು. ಬೇರೆ ರಾಜ್ಯಗಳಿಗೇ ಒಂದು ನಿಯಮ, ನಮ್ಮ ರಾಜ್ಯಕ್ಕೆ ಬೇರೆಯೇ ನಿಯಮ. ಸರ್ವೋಚ್ಚ ನ್ಯಾಯಾಲಯ ಕೂಡ ಇದನ್ನು ಅಸಡ್ಡೆಯಿಂದ ಕಾಣುತ್ತದೆ. ರಾಜ್ಯ ಸರ್ಕಾರವು ತನ್ನದಲ್ಲದ ಮತ್ತು ತಾನೊಲ್ಲದ ತಲೆಹರಟೆ ಮಕ್ಕಳನ್ನು ಸಾಕುವ ಜವಾಬ್ದಾರಿ ಹೊರಬೇಕೆಂದು ನ್ಯಾಯಾಲಯವು ಭಾವಿಸಿದಂತಿದೆ. ಭಾಷಾ ಮಾಧ್ಯಮ ಹಾಗೂ ಕಾವೇರಿ ನೀರಿನ ಹಂಚಿಕೆಯ ಬಗ್ಗೆ ವಿವಾದ ಬಂದಾಗಲೆಲ್ಲಾ ಭಾರತೀಯ ಜನತಾ ಪಕ್ಷವು ಕಾಂಗ್ರೆಸ್ ಸರ್ಕಾರವನ್ನು ಛೇಡಿಸುತ್ತಿತ್ತು ''ನ್ಯಾಯಾಲಯದಲ್ಲಿ ವಾದವನ್ನು ಚೆನ್ನಾಗಿ ಮಂಡಿಸಲಿಲ್ಲ'', ಎಂದು. ಈಗ ತಾನು ವಾದ ಮಂಡಿಸಬೇಕಾಗಿದೆ. ಅದರ ಪ್ರಖರತೆಯನ್ನು ಕಾದು ನೋಡೋಣ. ಅವರ ಪಕ್ಷದಿಂದ ರಾಜ್ಯಸಭೆಗೆ ಆಯ್ಕೆ ಗೊಂಡಿರುವ ನ್ಯಾಯಮೂರ್ತಿ ಎಂ. ರಾಮಾಜೋಯಿಸರ ಸಲಹೆಗಳು ಉಪಯುಕ್ತವಾದಾವೇ ? ನೋಡೋಣವಂತೆ. ಆದರೆ ಸಾಮಾನ್ಯವಾಗಿ ದನಿಯೆತ್ತುತ್ತಿದ್ದ ಅನೇಕ ಧೀಮಂತ ಕನ್ನಡ ವೀರರ ನಾಲಿಗೆ ಬಾತುಕೊಂಡಿದೆಯೆ ?




## ಕಸಬನಿಗೆ ಒಂದು ಪತ್ರ

ಅಯ್ಯಾ ನೀನೊಬ್ಬ ಕೊಲೆಗಡುಕ ಕಸಬುದಾರ -
ಎನ್ನಲು, ನಿನ್ನ ಕೊರಳಲ್ಲಿ ತೂಗುತ್ತಿದೆ ರುಂಡಮಾಲೆ !
ಅದನ್ನೇ ಎಳೆದು ಕೊನೆಯುಸಿರಿಗೇರಿಸಲು ಕಾಯ್ದಿದೆ
ಇನ್ನೂ ಬದುಕಿರುವ ನಿಷ್ಕರುಣೆಯಲ್ಲಿ ಜನತೆ !
ನೀನಿನ್ನೂ ತರುಣ: ಯೌವನದೆರಡು ಹೆಜ್ಜೆಯಿಟ್ಟ
ಕುದುರೆ ಮರಿ. ಚೆನ್ನಾಗಿ ಕುಡಿಸಿ ನಾಗರಿಕ ಹಾದಿಗೆ
ಹಚ್ಚಿ ನಿಲ್ಲಿಸಿ ರೇಸಿನ ಗುರಿಯೊಂದನ್ನೆ ಕಾಣಿಸಿ
ಲಗಾಮು ಸಡಿಲಬಿಟ್ಟಿದೆ ನಿನ್ನ ದಿಟ್ಟ ಸಮಾಜ !

ಕೂಗಿ ಹೇಳುವುದಕ್ಕೆ ನಿನಗೂ ಇದೆ ಹಕ್ಕುಬಾಧ್ಯತೆ
ಅದಕ್ಕೇ ಕೊರಗುತ್ತೇನೆ; ಕೆಂಡದ ಮೇಲೆ ಕುದಿಯುವ
ಹಾಲಾಗಿ ಮರುಗುತ್ತೇನೆ; ನನ್ನ ನಂಬಿಕೆ ಕರಗಿ
ಚಿಂತೆಯ ಗೂಗಿ ಕತ್ತಲಿನಲ್ಲಿ ಕಾಯುತ್ತಲಿದೆ
ನನ್ನ ಉದ್ಗಾರಕ್ಕೆ ನಿನ್ನ ಎಚ್ಚರಿಕೆಯ ಕರೆ ಬಂದು
ನಿನ್ನುಸಿರ ಕೊನೆಯಲ್ಲಿ ಸ್ವಾತಂತ್ರ್ಯ ಚಿಗುರಲಿ ಎಂದು.

ಬೆಂಗಳೂರು **ಕ. ವೆಂ. ರಾಜಗೋಪಾಲ**

## ತಂದೆಯ ಕನಸು

ಅಪ್ಪ ಕಂಡಿದ್ದ
ಸಮತೆಯ ಕನಸೊಂದ
ಅವನ ನರನಾಡಿಗಳಲ್ಲಿ
ಹರಿದಿತ್ತು ಸಮತಾವಾದದ ತೇರು.

ಅವನ ಬಾಯಲ್ಲಿ
ಕಟ್ಟಿತ್ತು ದಲಿತರ ಕೂಗು
ಅವನು ಬರೆದಿದ್ದ ದಲಿತರ ಕಥೆ
ಹೊಲೆಮಾದಿಗರ ಹಾಡು ಹಾಡಿ
ಕೆಂಪು ಸೂರ್ಯನೇ ಅವನ ಮುಂದೆ ಕಪ್ಪಾಗಿದ್ದ.

ಕಮ್ಯೂನಿಸಂನ ಸಾರಿದ್ದ.
ಮಕ್ಕಳಲ್ಲಿ ಅದನ್ನೇ ಬಿತ್ತಿದ್ದ.
ಮಾರ್ಕ್ಸ್‌ರ ತತ್ವಗಳನ್ನು ಹೇಳಿದ್ದ.

ಅವನ ಬದುಕು-ಬರಹ
ಬಾಡಿ ಬತ್ತಿ ಹೋಯಿತು.
ಅವನು ಕಣ್ಣು ಮುಚ್ಚಿದ

ಕತ್ತಲಾಗಿರಲಿಲ್ಲ,
ಹಕ್ಕಿಗಳ ಕಲರವ ಕಟ್ಟಿತ್ತು.
ಅವನು ಮಣ್ಣಾಗಲಿಲ್ಲ.
ನಮ್ಮ ಎದೆಯಲ್ಲಿ ಮುಚ್ಚಿ ಹೋದ
ಶಾಶ್ವತವಾಗಿ.

ಬೆಳಗಾವಿ **ಸಂಗ್ರಾಮ ಎಸ್. ಹಿರೇಮಠ**

## ಮೇ ಸಂಚಿಕೆ

ಮೇ ಸಂಚಿಕೆಯ ಕವಿತೆಗಳು ತುಂಬ ಅರ್ಥವತ್ತಾಗಿವೆ. ವಿಶೇಷವಾಗಿ 'ವಸಂತ ದಹನ' ತುಂಬ ಮಾರ್ಮಿಕ ಕವಿತೆ. ಪುರುಷ ಪರಿವರ್ತನೆಯ ಮೂಲವಾದ ಸ್ತ್ರೀ ವಾದದ ಮೊಸಳೆಕಣ್ಣೀರಿಗೆ ತಕ್ಕುದಾದ ಉತ್ತರ ಕೊಡುವ ಸ್ತ್ರೀಪ್ರಜ್ಞೆ ತುಂಬ ಜಾಗೃತವಾಗಿದೆ. ಜೀವನ ನಾಟಕದಲ್ಲಿ ತನ್ನ ತೀಟೆ ತೀರಿಸಿಕೊಳ್ಳುವ ಪುರುಷ ವ್ಯಭಿಚಾರದ ದಾರಿ ಬಿಟ್ಟು ಮಾನವೀಯ ದಾರಿಯ ಚಾರಿತ್ರ್ಯ ಹುಡುಕ ಬೇಕಾಗಿದೆ. ಈ ಕುರಿತ ಸ್ತ್ರೀ ಕಳಕಳಿ ಪುರುಷನಲ್ಲಿ ಇಟ್ಟಿರುವುದು ಕೇವಲ ತನ್ನ ಹಸಿವು ತೀರಿಸಿಕೊಳ್ಳುವ ಚಪಲದ್ದೆನ್ನುವುದು ಹೆಣ್ಣು ತಿಳಿಯಬೇಕಾಗಿದೆ. ತಿಳಿದೂ ತಿಳಿಯದಂತಿರುವುದಕ್ಕೆ ಅವಳ ಚಪಲವೂ ಕಾರಣ ವೆನ್ನುವುದು ಸುಳ್ಳಲ್ಲ. ಕಾಮ ಪ್ರಕೃತಿದತ್ತವಾದ್ದು.




ಇದರಲ್ಲಿ ನಾಟಕ ಮಾಡುವ ಬದುಕೇ ನಿಜವಾಗಿ ಅಸಹ್ಯ. ಬದುಕನ್ನು ಬಿಚ್ಚಿಡುವುದಕ್ಕಿಂತಲೂ ಬಚ್ಚಿಡುವುದೇ ಅಧಿಕವಾಗಿದೆ. ಈ ಹೆಚ್ಚಾದ ತೃಷೆಗೆ ಮಾನವರ ಹಿಡಿತ ಸಾಧ್ಯವಾಗಬೇಕಾಗಿದೆಯೆನ್ನುವ ಸತ್ಯ ಕಾವ್ಯದ ಅಂತರಂಗವಾಗಿದೆ.

ಜಮಖಂಡಿ **ಅರ್ಜುನ ಕೋರಟಕರ**

## ಅಧಿಕಾರ ವಿಕೇಂದ್ರೀಕರಣವಾಗಲಿ

ಮಂಜುನಾಥ ಡಿ. ಡೊಳ್ಳಿನ ಅವರ 'ಪ್ರತ್ಯೇಕತೆಯ ಕೂಗಿಗೆ ಪರಿಹಾರವೇನು ?' ಲೇಖನ ಮೇ ಸಂಚಿಕೆಯ ಗಮನಾರ್ಹ ಲೇಖನವಾಗಿದೆ. ಕನ್ನಡಿಗರ ಹಿತಾಸಕ್ತಿ ಗಳನ್ನು ಗಮನದಲ್ಲಿಟ್ಟುಕೊಂಡು ಆಯೋಗ ಮತ್ತು ಸಮಿತಿಗಳನ್ನು ರಚಿಸಿ, ಅವು ನೀಡಿದ ವರದಿಗಳನ್ನು ನಿರ್ಲಕ್ಷಿಸುವ ಕೆಲಸವನ್ನು ಇದುವರೆವಿಗೆ ಎಲ್ಲಾ ಸರ್ಕಾರಗಳೂ ಮಾಡಿಕೊಂಡೇ ಬಂದಿವೆ. ಬೆಂಗಳೂರಿನ ಹವಾಗುಣ ಚೆನ್ನಾಗಿದೆಯೆಂದು ಭಾವಿಸಿಕೊಂಡು ಅಧಿಕಾರಿ ವರ್ಗದವರು ಬೆಂಗಳೂರಿನಲ್ಲೇ ಠಿಕಾಣಿ ಹೂಡಲನುವಾಗುವಂತೆ ಬಹುತೇಕ ಎಲ್ಲ ಕಚೇರಿ ಗಳನ್ನು ಬೆಂಗಳೂರಿನಲ್ಲೇ ಇರಿಸಿಕೊಳ್ಳಲಾಗಿದೆ. ಇದು ಏಕೆ ಬೇಕು ? ಕರ್ನಾಟಕದ ಎಲ್ಲ ಜನರಿಗೂ ನಿಲುಕುವಂತೆ ಪ್ರಮುಖ ಕಚೇರಿಗಳನ್ನು ದಾವಣಗೆರೆ ಯಂತಹ ನಗರಗಳಿಗೇಕೆ ವರ್ಗಾಯಿಸಬಾರದು ? ಜಿಲ್ಲೆಯ ಸಂಪತ್ತನ್ನು ಲೂಟಿ ಹೊಡೆಯುವವರು ಆ ಜಿಲ್ಲೆಗೆ ಹೆಚ್ಚಿನ ಸೌಲಭ್ಯಗಳನ್ನೊದಗಿಸಲು ಮುಂದಾಗ ಬಾರದೇಕೆ ? ಪ್ರಾರಂಭದಿಂದಲೂ ಅಡ್ಡಿ ಆತಂಕ ವೆದುರಿಸುತ್ತಿರುವ ಉತ್ತರ ಕರ್ನಾಟಕದ ನೀರಾವರಿ ಯೋಜನೆಗಳು ಇನ್ನೂ ಪೂರ್ಣವಾಗಿಲ್ಲವೇಕೆ.

ಬೆಂಗಳೂರು - ಮೈಸೂರು - ಮಂಗಳೂರನ್ನು ಬಿಟ್ಟು ಬೇರೆಡೆಗೆ ದೃಷ್ಟಿ ಹಾಯಿಸುವ ಸಾಮಾನ್ಯ ಪ್ರಜ್ಞೆ ನಮ್ಮನ್ನಾಳುವ ಸರ್ಕಾರಗಳಿಗೆ ಬೇಕು !

ಮೈಸೂರು **ಕೊ. ಸು. ನರಸಿಂಹಮೂರ್ತಿ**

## ಡಾ॥ ಎಂ. ಎಂ. ಕಲಬುರ್ಗಿ

''ಸಂಶೋಧಕ ತಪ್ಪು ಹೇಳಿರಬಹುದು, ಸುಳ್ಳು ಹೇಳಿರಲಾರ'' ಎಂಬ ಮಾತನ್ನು ಕಟ್ಟಿ ಸಂಶೋಧನೆಗೆ ಒಂದು ಶಕ್ತಿಯನ್ನೂ ದಿಟ್ಟತನವನ್ನೂ ತಂದುಕೊಟ್ಟ ಡಾ॥ ಎಂ. ಎಂ. ಕಲಬುರ್ಗಿಯವರು ಒಂದು ತುಂಬಿದ ಕೊಡ. ಗರ್ವದ ಒಂದೆಳೆಯೂ ಇಲ್ಲದೆ ಸಂಶೋಧನೆಯನ್ನೇ ಉಟ್ಟುಂಡ ತಪಸ್ವಿ ಅವರು. ಶ್ರೀ ಪ್ರಕಾಶ ಗಿರಿಮಲ್ಲನವರ ಅವರು ತಮ್ಮ ಲೇಖನದಲ್ಲಿ ಕಲಬುರ್ಗಿಯವರ ಬರಹದಂತೆಯೇ ಒಂದು ಗುಂಜಿ ಕಡಿಮೆಯಿಲ್ಲದ, ಒಂದು ಗುಂಜಿ ಹೆಚ್ಚಲ್ಲದ ರೀತಿಯಲ್ಲಿ ಬಹಳ ತೂಕಬದ್ಧವಾಗಿ ಅವರ ವ್ಯಕ್ತಿತ್ವವನ್ನು ಸೆರೆಹಿಡಿದಿದ್ದಾರೆ. ಲೇಖನ ಕಲಬುರ್ಗಿಯವರ ವ್ಯಕ್ತಿತ್ವದ ಸಮಗ್ರತೆಗೆ ಹಿಡಿದ ಪುಟ್ಟ ಕನ್ನಡಿಯಾಗಿದೆ. ಅವರಿಗೂ, 'ಹೊಸತು' ಪತ್ರಿಕೆಗೂ ಧನ್ಯವಾದಗಳು.

ಮಡಿಕೇರಿ **ಮಾರುತಿ ದಾಸಣ್ಣವರ**

## ಏಪ್ರಿಲ್ ಸಂಚಿಕೆ

ಏಪ್ರಿಲ್ ೨೦೦೮ರ ಸಂಚಿಕೆಯಲ್ಲಿ ಪ್ರಕಟವಾದ ಡಾ॥ ಎಂ. ಮಹದೇವಪ್ಪ ಮತ್ತು ಪ್ರೊ॥ ಬಿ. ವಿ. ವೆಂಕಟರಾವ್ ಅವರ ಸಂದರ್ಶನ ಲೇಖನವು ಕೃಷಿ ಗ್ರಾಮೀಣ ಅಭಿವೃದ್ಧಿಯಿಂದ ಜಾಗತಿಕ ಹಣಕಾಸು ಮುಗ್ಗಟ್ಟನ್ನು ಎದುರಿಸುವ ಬಗೆಗಿನ ಚಿಂತನೆಯ ಲೇಖನ ಎಂಬುದನ್ನು ಗಮನಿಸಬೇಕೆಂದು ವಿನಂತಿ.

ಬೆಂಗಳೂರು **— ಸಂಪಾದಕ**



# ೨೦೦೯ರ ಲೋಕಸಭೆ ಚುನಾವಣಾ ಫಲಿತಾಂಶ : ಒಂದು ನೋಟ

೨೦೦೯ರ ಲೋಕಸಭಾ ಚುನಾವಣೆಯು ಅನೇಕ ದೃಷ್ಟಿಯಿಂದ ಮಹತ್ವ ಪಡೆದಿದೆ. ಅತಂತ್ರ ಲೋಕಸಭೆಯ ನಿರೀಕ್ಷೆಯಲ್ಲಿ ಹಗ್ಗ ಜಗ್ಗಾಟಕ್ಕೆ ಸಿದ್ಧವಾಗಿಯೇ ಚುನಾವಣೆಗಿಳಿದ ಪಕ್ಷಗಳಿಗೆ ನಿರಾಶೆಯಾಗಿದೆ. ನಿರೀಕ್ಷೆ ಮೀರಿ ಬೆಂಬಲ ಗಳಿಸಿದ ಕಾಂಗ್ರೆಸ್‌ಗೆ ಸಂಭ್ರಮವೆನಿಸಿದೆ. ಪ್ರಧಾನಿ ಹುದ್ದೆಗೆ ಮೇಕಪ್ ಮಾಡಿಕೊಳ್ಳುತ್ತಿದ್ದ ಕೆಲವು ನಾಯಕರು ಯು.ಪಿ.ಎ. ಮೈತ್ರಿಕೂಟಕ್ಕೆ ಬೆಂಬಲವೆಂದು ಹೇಳಲು ತೋರಿದ ತರಾತುರಿ ಒಡೆದು ಕಂಡಿದೆ. ಅತಂತ್ರ ಸ್ಥಿತಿಯಲ್ಲಿ ಕಾಂಗ್ರೆಸ್ ನಿಯೋಜಿತ ಪ್ರಧಾನಿ ಅಭ್ಯರ್ಥಿ ಮನಮೋಹನ ಸಿಂಗ್ ಬದಲಾವಣೆ ಅನಿವಾರ್ಯವಾದರೆ ಒಂದು 'ಕೈ' ನೋಡಲು ಒಳಗೊಳಗೇ ಕಾತುರರಾಗಿದ್ದ ಒಂದಿಬ್ಬರು ಕಾಂಗ್ರೆಸ್ ನಾಯಕರು ಸುಖಾಸುಮ್ಮನೆ ಸಂತೋಷ ತೋರುತ್ತಿದ್ದಾರೆ. ತೃತೀಯ ರಂಗದ ಕನಸಿನಲ್ಲಿ ಸರ್ಕಾರ ರಚನೆ ಮಾಡುತ್ತೇವೆಂದು ಭಾವಿಸಿದ್ದ ಅಥವಾ ಭ್ರಮಿಸಿದ್ದ ಎಡಪಕ್ಷಗಳು ತಬ್ಬಿಬ್ಬಾಗಿವೆ. 'ಉಕ್ಕಿನ ಮನುಷ್ಯ'ನೆಂದು ಬಿಂಬಿತವಾದ ಎಲ್. ಕೆ. ಅಡ್ವಾನಿಯವರು ಅದನ್ನು ತಮಗೆ ತಾವೇ ನಂಬಿ ಮನಮೋಹನ ಸಿಂಗ್ ಅವರನ್ನು ಅತ್ಯಂತ ದುರ್ಬಲ ಪ್ರಧಾನಿ ಎಂದು ಬಿಂಬಿಸಲು ಹರಸಾಹಸ ಮಾಡಿ ತಾವೇ ದುರ್ಬಲವಾಗಿದ್ದಾರೆ. ಭಾರತೀಯ ಜನತಾ ಪಕ್ಷವು ತನ್ನ ಸೋಲಿಗೆ ಕಾರಣ ಹುಡುಕಲು ಹೋಗಿ ದುಃಸ್ವಪ್ನದಿಂದ ಧೃತಿಗೆಟ್ಟು ಕೂತಂತೆ ಕಾಣುತ್ತದೆ. ಈ ಎಲ್ಲದರ ಮಧ್ಯೆ ಆತುರಾತುರದಲ್ಲಿ ರಾಹುಲ್ ಗಾಂಧಿಯವರನ್ನು ಸಚಿವ ಸಂಪುಟಕ್ಕೆ ಆಹ್ವಾನಿಸಿದ ಮನಮೋಹನ ಸಿಂಗ್ ಅವರು ಸದ್ಯ, ಪ್ರಮಾಣ ವಚನ ಸ್ವೀಕಾರಕ್ಕೆ ಜಾರ್ಜ್ ಬುಷ್ ಅವರನ್ನು ಆಹ್ವಾನಿಸಿಲ್ಲವೆಂದು ಸಮಾಧಾನಪಟ್ಟುಕೊಳ್ಳಬಹುದಾಗಿದೆ !

ಅದೇನೇ ಇರಲಿ, ಕಾಂಗ್ರೆಸ್ ಪಕ್ಷವು ೨೦೬ ಸ್ಥಾನಗಳನ್ನು ಪಡೆದದ್ದು ಮತ್ತು ಚುನಾವಣಾಪೂರ್ವ ಹೊಂದಾಣಿಕೆಯ ಪಕ್ಷಗಳೊಂದಿಗೆ ಒಟ್ಟು ೨೬೨ ಸ್ಥಾನಗಳನ್ನು ಕ್ರೋಢೀಕರಿಸಿಕೊಂಡದ್ದನ್ನು ಮುಖ್ಯ ಮುನ್ನಡೆಯೆಂದು ಹೇಳಲೇಬೇಕು. ಯಾಕೆಂದರೆ, ೨೦೦೪ರಿಂದ ೨೦೦೯ರ ಚುನಾವಣಾ ಘೋಷಣೆಯ ದಿನದವರೆಗೆ ಯು.ಪಿ.ಎ.ಯಲ್ಲಿದ್ದ ಲಾಲೂ ಅವರ ಆರ್.ಜೆ.ಡಿ., ಪಾಸ್ವಾನರ ಎಲ್.ಜೆ.ಪಿ., ಶರದ್ ಪವಾರರ ಎನ್.ಸಿ.ಪಿ. – ಇಂತಹ ಪಕ್ಷಗಳು ಕಾಂಗ್ರೆಸ್ ಜೊತೆ ಇರಲಿಲ್ಲ. ಪವಾರ್ ಅವರು ಮಹಾರಾಷ್ಟ್ರದಲ್ಲಿ ಅನಿವಾರ್ಯವಾಗಿ ಕಾಂಗ್ರೆಸ್ ಜೊತೆ ಇದ್ದರೂ ಒರಿಸ್ಸ, ಸಿಕ್ಕಿಂಗಳಲ್ಲಿ ಬೇರೆ ರೀತಿಯ ಹೊಂದಾಣಿಕೆಯಲ್ಲಿದ್ದರು. ಲಾಲೂ ಮತ್ತು ಪಾಸ್ವಾನ್ ಅವರು ಕಾಂಗ್ರೆಸ್‌ಗೆ 'ನಾವು ಕೊಟ್ಟಷ್ಟು ಸ್ಥಾನಕ್ಕೆ ಅಭ್ಯರ್ಥಿ ಹಾಕಿ (ಕೇವಲ ೩ ಸ್ಥಾನ)' ಎಂದು ಹೇಳುವ ಮೂಲಕ ದೂರಮಾಡಿ, ಮುಲಾಯಂ ಜೊತೆ ಒಂದಾದರು. ಬಿ.ಜೆ.ಪಿ.ಯು ಅಧಿಕಾರಕ್ಕೆ ಬರುವುದಕ್ಕೆ ಸಿದ್ಧವಾದಂತೆ ತನ್ನದು ಮಾತ್ರ ದೊಡ್ಡದಾದ ಚುನಾವಣಾಪೂರ್ವ ರಂಗವೆಂದು ಬಿಂಬಿಸಲು ಪಂಜಾಬ್‌ನ ಲೂಧಿಯಾನದಲ್ಲಿ ಎಲ್ಲ ಎನ್.ಡಿ.ಎ. ಅಂಗಪಕ್ಷಗಳೊಂದಿಗೆ ಬೃಹತ್ ಸಮಾವೇಶ ಮಾಡಿತು. ನರೇಂದ್ರ ಮೋದಿಯವರ ಜೊತೆ ವೇದಿಕೆ ಹಂಚಿಕೊಳ್ಳುವುದಿಲ್ಲವೆಂದು ಘೋಷಿಸಿದ್ದ ಬಿಹಾರ್‌ನ ಮುಖ್ಯಮಂತ್ರಿ ನಿತೀಶ್ ಕುಮಾರ್ ಅವರು ಈ ಸಮಾವೇಶಕ್ಕೆ ಬಂದು ಮೋದಿಯವರ ಕೈಕುಲುಕಿದರು. ಟಿ.ಆರ್.ಎಸ್.ನ ಚಂದ್ರಶೇಖರರಾವ್ ಅವರು ತೃತೀಯ ರಂಗ ಮತ್ತು ತೆಲುಗುದೇಶಂ ನಂಟನ್ನು ಬಿಟ್ಟು (ಆಗ ಆಂಧ್ರದ ಚುನಾವಣೆ ಮುಗಿದಿತ್ತು) ಎನ್.ಡಿ.ಎ. ಸಮಾವೇಶಕ್ಕೆ ಬಂದು ಬೀಗುತ್ತ ನಿಂತರು. ಇತ್ತ ರಾಹುಲ್ ಗಾಂಧಿಯವರು ತಮ್ಮ ಮಾಧ್ಯಮ ಗೋಷ್ಠಿಯಲ್ಲಿ 'ನಿತೀಶ್ ಕುಮಾರ್ ಒಳ್ಳೆ ಕೆಲಸ ಮಾಡಿದವರೂ ಇದ್ದಾರೆ' ಎಂದು ಒಂದು ವಾಕ್ಯ ಹೇಳಿ ವಿವಿಧ ವ್ಯಾಖ್ಯಾನಕ್ಕೆ ಕಾರಣರಾದರು. ಅಂದರೆ, ಎಲ್ಲ ಪಕ್ಷಗಳೂ ಮೇಲ್ನೋಟಕ್ಕೆ ಆತ್ಮವಿಶ್ವಾಸವನ್ನು ಪ್ರದರ್ಶಿಸುತ್ತ ಒಳಗಿದ್ದ ಅಳುಕಿಗೆ ಅಭಿವ್ಯಕ್ತಿ ಕೊಡುವುದನ್ನು ಮುಚ್ಚಿಟ್ಟುಕೊಳ್ಳಲಾಗದ ಸ್ಥಿತಿಗೆ ತಲುಪಿದ್ದವು. ಯಾವೊಂದು ಪಕ್ಷದ ನಡೆಯೂ ಸೈದ್ಧಾಂತಿಕವಾಗಿರಲಿಲ್ಲ. ನೇರ, ನಿಷ್ಠುರ ನಡವಳಿಕೆಯನ್ನು ತೋರಲಿಲ್ಲ. ಇದಕ್ಕೆ ಎಡಪಕ್ಷಗಳೂ ಹೊರತಾಗಿರಲಿಲ್ಲ.

೨೦೦೪ರಿಂದ ಅಧಿಕಾರಕ್ಕೆ ಬಂದ ಯು.ಪಿ.ಎ. ಸರ್ಕಾರವು ಕೈಗೊಂಡ ಕೆಲವು ಜನಪರ ಕೆಲಸಗಳ ಹಿಂದೆ ಎಡಪಕ್ಷಗಳ ಒತ್ತಡವಿದ್ದುದು ನಿಜ. ಆಗ ೬೧ ಜನ ಸಂಸದರನ್ನು ಹೊಂದಿದ್ದ ಎಡರಂಗವು ಸರ್ಕಾರದೊಳಗೆ ಸೇರಿ ಮತ್ತಷ್ಟು ಜನಮುಖಿ ಯೋಜನೆಗಳಿಗೆ

ಪ್ರೊ॥ ಬರಗೂರು ರಾಮಚಂದ್ರಪ್ಪ

ಕಾಂಗ್ರೆಸ್ ನೇತೃತ್ವದ ಯು.ಪಿ.ಎ. ಸರ್ಕಾರವನ್ನು ಅಧಿಕಾರಕ್ಕೆ ತಂದಿದ್ದಾರೆ. ಯಾಕೆ ತಮ್ಮನ್ನು ಅಧಿಕಾರಕ್ಕೆ ತಂದರು ಎಂಬ ಬಗ್ಗೆ ಯು.ಪಿ.ಎ. ಆತ್ಮಾವಲೋಕನ ಮಾಡಿಕೊಳ್ಳಬೇಕು. ಯಾಕೆ ತನ್ನನ್ನು ಸೋಲಿಸಿದರು ಎಂದು ಎನ್.ಡಿ.ಎ. ಆತ್ಮಾವಲೋಕನ ಮಾಡಿಕೊಳ್ಳಬೇಕು. ಈ ಎರಡು ವಿಭಿನ್ನ ಆತ್ಮಾವಲೋಕನಗಳಿಂದ ಅವರ ಆತ್ಮಗಳನ್ನು ಹುಡುಕಿಕೊಂಡಂತಾಗುತ್ತದೆ. ದೇಶಕ್ಕೂ ಆತ್ಮವಿದೆಯೆಂದು ಅರಿವಾಗುತ್ತದೆ. ಅರಿವೇ ಗುರುವಾಗಿ ಜನರಿಗೆ ಒಳ್ಳೆಯದಾಗುತ್ತದೆ.

ಕಾರಣವಾಗಬಹುದಿತ್ತು ಎಂದು ಹೇಳುವವರಲ್ಲಿ ನಾನೂ ಒಬ್ಬ. ಸಂಸದೀಯ ಪ್ರಜಾಪ್ರಭುತ್ವವನ್ನು ಒಪ್ಪಿದ ಮೇಲೆ ಆಯಾ ಸಂದರ್ಭದಲ್ಲಿ ಒದಗಿಬರುವ ಸವಾಲುಗಳನ್ನು 'ಸಂಸದೀಯ ವಿಧಾನ'ದಲ್ಲೇ ಎದುರಿಸುವುದು ಸೂಕ್ತ. ಅದೇನೇ ಇರಲಿ, ಎಡಪಕ್ಷಗಳಿಗೆ ಹೊರಗಿನ ನಮ್ಮಂಥವರಿಗೆ ಅರಿವಾಗದ ಕೆಲವು ಆತಂಕಗಳಿರಬಹುದು. ಆದರೆ ೨೦೦೯ರ ಈ ಚುನಾವಣೆಯಲ್ಲಿ ತೃತೀಯರಂಗದ ಹೆಸರಿನಲ್ಲಿ ಎಡಪಕ್ಷಗಳು ಯಾವ್ಯಾವ ಪಕ್ಷಗಳ ಜೊತೆ ಹೊಂದಾಣಿಕೆ ಮಾಡಿಕೊಂಡವು ಎನ್ನುವುದನ್ನು ನೋಡಿದಾಗ ತೀರಾ ವಿಷಾದವಾಗುತ್ತದೆ. ಅಣು ಒಪ್ಪಂದದ ವಿಷಯದಲ್ಲಿ ಯು.ಪಿ.ಎ. ಸರ್ಕಾರದ ವಿರುದ್ಧ ಮತ ಚಲಾಯಿಸಿದ್ದಕ್ಕೆ ಎಡಪಕ್ಷಗಳಿಗೆ ಸೂಕ್ತ ಸೈದ್ಧಾಂತಿಕ ಕಾರಣಗಳು ಇರಬಹುದು. ಆದರೆ ತೃತೀಯರಂಗದ ಹೆಸರಿನಲ್ಲಿ ಕಂಡಕಂಡವರ ಮನೆಬಾಗಿಲು ತಟ್ಟಲು ಸೂಕ್ತ ಸೈದ್ಧಾಂತಿಕ ಕಾರಣಗಳಿಲ್ಲ. ಇಲ್ಲಿ ಕುರುಡು ಕಾಂಗ್ರೆಸ್ ವಿರೋಧವಷ್ಟೇ ಮುಖ್ಯವಾದಂತೆ ಕಾಣುತ್ತದೆ. ಕಾಂಗ್ರೆಸ್ಸನ್ನು ವಿರೋಧಿಸುವುದಕ್ಕೆ ಎಡಪಕ್ಷಗಳಿಗೆ ನೈಜ ಸೈದ್ಧಾಂತಿಕ ನೆಲೆಗಳಿರುವುದು ನಿಜ. ಆದರೆ ಎಡಪಕ್ಷಗಳು ಎಡತಾಕಿದ ಯಾವ ಪಕ್ಷವೂ ಕಾಂಗ್ರೆಸ್‌ಗಿಂತ ಉತ್ತಮ ಸೈದ್ಧಾಂತಿಕ ಹಿನ್ನೆಲೆಯನ್ನು ಪಡೆದಿಲ್ಲ. ಕಾಂಗ್ರೆಸ್‌ಗಾದರೂ ಜಾತ್ಯತೀತ ಪರಂಪರೆಯಿದೆ. ಹಾಗೆಂದು ಎಡಪಕ್ಷಗಳು ಕಾಂಗ್ರೆಸ್ ಜೊತೆ ಚುನಾವಣೆ ಹೊಂದಾಣಿಕೆ ಮಾಡಿಕೊಳ್ಳುವುದು ಸಾಧ್ಯವಿಲ್ಲ. ಯಾಕೆಂದರೆ ಪಶ್ಚಿಮ ಬಂಗಾಳ ಮತ್ತು ಕೇರಳದಲ್ಲಿ ಕಾಂಗ್ರೆಸ್ ಪಕ್ಷವು ಎಡರಂಗಕ್ಕೆ ವಿರೋಧಿ. ಜೊತೆಗೆ, ನಾಲ್ಕೂವರೆ ವರ್ಷಗಳ ಕಾಲ ಸರ್ಕಾರ ನಡೆಸಲು ಬೆಂಬಲ ಪಡೆದ ಮನಮೋಹನ ಸಿಂಗ್ ಅವರು 'ಇಷ್ಟವಿಲ್ಲದಿದ್ದರೆ ಬಿಟ್ಟು ಹೋಗಿ' ಎಂದು 'ಬುಷ್' ಎಂದು ಬಾಯಿ ಮಾಡಿದ್ದನ್ನು ಸಹಿಸಿಕೊಂಡು ಕಾಂಗ್ರೆಸ್ ಜೊತೆ ಇರಬೇಕಾಗಿರಲಿಲ್ಲ. ಆದರೆ ಹನ್ನೊಂದು ವರ್ಷಗಳ ಕಾಲ ಬಿ.ಜೆ.ಪಿ. ಜೊತೆಗಿದ್ದ ಒರಿಸ್ಸಾದ ನವೀನ್ ಪಟ್ನಾಯಕ್ ಜೊತೆ ಯಾಕೆ ಹೋಗಬೇಕಿತ್ತು? ಇವರ ಆಡಳಿತಾವಧಿಯಲ್ಲೇ ಒರಿಸ್ಸದಲ್ಲಿ ಕ್ರೈಸ್ತಪಾದ್ರಿಯನ್ನು, ಸನ್ಯಾಸಿನಿಯರನ್ನು ಸುಟ್ಟದ್ದು. ಇದಕ್ಕೆ ಬಿ.ಜೆ.ಪಿ. ಕಾರಣ, ನವೀನ್ ಪಟ್ನಾಯಕ್ ಅಲ್ಲ ಎಂದು ಹೇಳಿದರೆ ಯಾರು ನಂಬುತ್ತಾರೆ? ಕೋಮುವಾದದ ಕಟ್ಟಾ ವಿರೋಧಿಗಳಾದ ಎಡಪಕ್ಷಗಳು ಸ್ನೇಹ ಬೆಳೆಸಿದ್ದು ಕೋಮುವಾದಿ ಪಕ್ಷದ ಸ್ನೇಹಿತರೊಂದಿಗೆ ಎನ್ನುವುದು ಒಡೆದು ಕಾಣುತ್ತದೆ. ಒರಿಸ್ಸಾದ ಬಿ.ಜೆ.ಡಿ., ಆಂಧ್ರದ ತೆಲುಗುದೇಶಂ, ತಮಿಳು ನಾಡಿನ ಅಣ್ಣಾ ಡಿ.ಎಂ.ಕೆ., ಕರ್ನಾಟಕದ ಜಾತ್ಯತೀತ ಜನತಾದಳ, ಉತ್ತರ ಪ್ರದೇಶದ ಬಿ.ಎಸ್.ಪಿ. – ಎಡಪಕ್ಷಗಳು ತಮ್ಮ 'ತೃತೀಯರಂಗಕ್ಕೆ' ಸೇರಿಸಿಕೊಂಡ ಈ ಎಲ್ಲ ಪಕ್ಷಗಳೂ ವಿವಿಧ ಪ್ರಮಾಣ ಮತ್ತು ವಿವಿಧ ವಿಧಾನಗಳಲ್ಲಿ ಕೋಮುವಾದಿ ಬಿ.ಜೆ.ಪಿ.ಯ ಜೊತೆಗಿದ್ದ ಪಕ್ಷಗಳು. ಇವರ ಜೊತೆ ಮುಗಿಬಿದ್ದು ಸೇರುವಾಗ ಕೋಮುವಾದ ವಿರೋಧಿ ಸಿದ್ಧಾಂತ ಎಲ್ಲಿ ಹೋಯಿತು? ನಿಜ. ಬಿ.ಜೆ.ಪಿ. ಜೊತೆಗಿದ್ದ ಕೆಲವು ಪಕ್ಷಗಳಿಗೆ ಈಗ ಪಶ್ಚಾತ್ತಾಪವಾಗಿರಬಹುದು. ಜಾತ್ಯತೀತ ಜನತಾದಳದ ನಾಯಕರು ಪಶ್ಚಾತ್ತಾಪದ ಮಾತಾಡಿದ್ದಾರೆಂದು ಕೇಳಿದ್ದೇನೆ. ಆದರೆ ಸದಾ ಕೋಮುವಾದವನ್ನು ಕಟಿಬದ್ಧವಾಗಿ ವಿರೋಧಿಸುತ್ತ ಬಂದ ಎಡಪಕ್ಷಗಳು ಬಿ.ಜೆ.ಪಿ. ಸ್ನೇಹಿತರಾಗಿದ್ದ ಪಕ್ಷಗಳ ಜೊತೆ ಸಂಭ್ರಮದಿಂದ ಸ್ನೇಹ ಬೆಳೆಸಿದ್ದು ಸಮರ್ಥನೀಯವೆಂದು ಅನ್ನಿಸುವುದಿಲ್ಲ. ಯಾಕೆಂದರೆ ಇವರು ಸ್ನೇಹ ಬೆಳೆಸಿದ ಪಕ್ಷಗಳಿಗೆ ಇವರಿಗಿರುವಂತೆ ಸೈದ್ಧಾಂತಿಕ ಬದ್ಧತೆಯಿಲ್ಲ. ಜಯಲಲಿತಾ ಅವರನ್ನೇ ನೋಡಿ. ಅವರು ಯಾವಾಗ ಎಲ್ಲಿ ಗುರುತಿಸಿಕೊಳ್ಳುತ್ತಾರೆಂದು ಹೇಳಲು ಸಾಧ್ಯವೆ? ಜಾತ್ಯತೀತ ಜನತಾದಳ 'ಜಾತ್ಯತೀತ' ಕಾರಣ ಹೇಳಿ ಎಲ್ಲರಿಗಿಂತ ಮುಂಚೆ ಯು.ಪಿ.ಎ.ಗೆ ಬೆಂಬಲ ಕೊಟ್ಟಿಲ್ಲವೇ? ಬಿ.ಎಸ್.ಪಿ.ಯ ಮಾಯಾವತಿ, ಮುಲಾಯಂ ಅವರ ಎಸ್.ಪಿ.ಯೊಂದಿಗೆ ಸ್ಪರ್ಧೆಗಿಳಿದಂತೆ ಯು.ಪಿ.ಎ.ಗೆ ಬಾಹ್ಯ ಬೆಂಬಲ ಘೋಷಿಸಲಿಲ್ಲವೇ? ಇವೆಲ್ಲವನ್ನೂ ಮುಂಚೆಯೇ ಅರ್ಥ ಮಾಡಿಕೊಳ್ಳಲು ಸಾಧ್ಯವಾಗಿಲ್ಲವೆಂದರೆ ಅದು ಎಡರಂಗದ ನಾಯಕರ ರಾಜಕೀಯ ತಿಳುವಳಿಕೆಯ ತೆಳುತನವನ್ನು ತೋರಿಸುತ್ತದೆ. ಹೀಗೆ ಸಾಂದರ್ಭಿಕ ರಾಜಕೀಯ ಹೊಂದಾಣಿಕೆ ಮತ್ತು ಸೈದ್ಧಾಂತಿಕತೆ – ಎರಡೂ ನೆಲೆಗಳಲ್ಲಿ ತಪ್ಪು ಹೆಜ್ಜೆಯಿಟ್ಟು ಎಡರಂಗ ತನ್ನ ಶಕ್ತಿಯನ್ನು ಸಾಕಷ್ಟು ಕಳೆದುಕೊಂಡು ರಾಷ್ಟ್ರ ರಾಜಕಾರಣದಲ್ಲಿ ವಹಿಸಬಹುದಾಗಿದ್ದ ಪ್ರಮುಖ ಪಾತ್ರದಿಂದ ವಂಚಿತವಾಗಿದೆ.




ಕಾಂಗ್ರೆಸ್ ಜೊತೆ ಚುನಾವಣಾ ಹೊಂದಾಣಿಕೆ ಸಾಧ್ಯವಿಲ್ಲದ ಎಡಪಕ್ಷಗಳು, ಕೋಮುವಾದಿಪಕ್ಷದ ಸ್ನೇಹಿತರೊಂದಿಗೂ ಹೊಂದಾಣಿಕೆ ಮಾಡಿಕೊಳ್ಳದೆ ಸ್ವತಂತ್ರವಾಗಿ ಸ್ಪರ್ಧಿಸಬೇಕಿತ್ತು. ತೃತೀಯರಂಗವನ್ನು ರೂಪಿಸುವಲ್ಲಿ ಜಿದ್ದಿನಿಂದ ಮುಂದಾಗಿ ಈಗ ನಿಜವಾದ ಅರ್ಥದಲ್ಲಿ ತೃತೀಯರಂಗವೆನ್ನುವುದು ಇರಲಿಲ್ಲವೆಂದು ಹೇಳಿಕೆ ಕೊಡುವುದು ಅರ್ಥವಿಲ್ಲದ ಮಾತು. ಈಗ ನೋಡಿ, ಯು.ಪಿ.ಎ. ಸರ್ಕಾರವು ಲಂಗುಲಂಗಾಮಿಲ್ಲದೆ ತನ್ನ ಆರ್ಥಿಕ ನೀತಿಯನ್ನು – ಕ್ಷಮಿಸಿ – ಅಮೆರಿಕಾ ಆರ್ಥಿಕ ನೀತಿಯನ್ನು ತೀವ್ರಗತಿಯಲ್ಲಿ ಜಾರಿಗೊಳಿಸಿದರೆ ನಿಯಂತ್ರಿಸುವವರು ಯಾರು? ಅವರ ನೀತಿಯನ್ನು ವಿರೋಧಿಸಬಹುದು. ಆದರೆ ವಿರೋಧ ನಿಯಂತ್ರಣವಲ್ಲ.

ಈ ಸಾರಿಯ ಚುನಾವಣಾ ಫಲಿತಾಂಶವು ಒಂದು ದೃಷ್ಟಿಯಿಂದ ಬಹಳ ಮುಖ್ಯವಾದುದು. ಕಾಂಗ್ರೆಸ್ ನೇತೃತ್ವದ ಯು.ಪಿ.ಎ. ಬಹುಮತದ ಸಮೀಪ ಬಂದಿದೆ ಎನ್ನುವ ಕಾರಣಕ್ಕಿಂತ ಮುಖ್ಯವಾಗಿ ಹಾರ್ಡ್‌ಕೋರ್ ಹಿಂದುತ್ವವಾದವನ್ನು – ಒಟ್ಟಾರೆ ಕೋಮುವಾದವನ್ನು – ನಮ್ಮ ದೇಶದ ಮತದಾರರು ಬಹು ದೊಡ್ಡ ಬಹುಮತದಿಂದ ನಿರಾಕರಿಸಿದ್ದಾರೆ ಎನ್ನುವುದು ಬಹು ಮುಖ್ಯವಾದುದು. ಈಗ ಯು.ಪಿ.ಎ.ಗೆ ಬೆಂಬಲ ಘೋಷಿಸಿರುವ ೩೨೨ ಜನ ಸಂಸದರು ಪ್ರತಿನಿಧಿಸುವ ಪಕ್ಷಗಳಲ್ಲಿ ಹಿಂದೆ ಬಿ.ಜೆ.ಪಿ. ಸಹವಾಸ ಮಾಡಿದ ಬಿ.ಎಸ್.ಪಿ.ಯಂತಹ ಪಕ್ಷಗಳೂ ಇರಬಹುದು. ಆದರೆ ಇಂತಹ ಪಕ್ಷಗಳು ಸಹ ಹಾರ್ಡ್‌ಕೋರ್ ಹಿಂದುತ್ವವಾದವನ್ನು ಒಪ್ಪಿರಲಿಲ್ಲ. ಬಿ.ಜೆ.ಪಿಯೊಂದಿಗೆ ಅಧಿಕಾರ ಹಂಚಿಕೊಳ್ಳದೆ ಸ್ವತಂತ್ರವಾಗಿ ಇರುವ ಸ್ಪಷ್ಟ ಸಿದ್ಧಾಂತವಿಲ್ಲದೆ ಅಧಿಕಾರಕ್ಕಾಗಿ ಯಾರಾದರೂ ಸರಿ ಎಂಬ 'ನೀತಿ' ಅನುಸರಿಸಿದ್ದರೂ ಇವರನ್ನು, ಇವರ ಪಕ್ಷಗಳನ್ನು ಕೋಮುವಾದಿ ಎನ್ನುವಂತಿಲ್ಲ. ಎಡಪಕ್ಷಗಳಂತೂ ಸದಾ ಕೋಮುವಾದದ ವಿರೋಧಿಗಳು. ತಾಂತ್ರಿಕವಾಗಿ ಈಗಲೂ ಎನ್.ಡಿ.ಎ. ಜೊತೆಯಿರುವ ಬಿಹಾರದ ಮುಖ್ಯಮಂತ್ರಿ ನಿತೀಶ್ ಕುಮಾರ್ ಮತ್ತು ಶರದ್ ಯಾದವ್ ಅವರು ಹಾರ್ಡ್‌ಕೋರ್ ಹಿಂದುತ್ವವಾದಿಗಳಲ್ಲ. ಅಂದರೆ ಈ ಚುನಾವಣಾ ಫಲಿತಾಂಶವು ದೊಡ್ಡ ಪ್ರಮಾಣದಲ್ಲಿ ಹಾರ್ಡ್‌ಕೋರ್ ಎನ್ನಬಹುದಾದ ಹಿಂದುತ್ವವಾದಕ್ಕೆ ವಿರುದ್ಧವಾಗಿದೆಯೆನ್ನುವುದು ಒಂದು ಚಾರಿತ್ರಿಕ ಸಂಗತಿಯಾಗಿದೆ.

(ಹಾರ್ಡ್‌ಕೋರ್ ಹಿಂದುತ್ವವಾದಿಗಳಲ್ಲವೆಂದೇ ಈ ಪಕ್ಷಗಳೊಂದಿಗೆ ತೃತೀಯರಂಗ ರಚಿಸಲು ಎಡಪಕ್ಷಗಳು ಹೊಂದಾಣಿಕೆ ಮಾಡಿಕೊಂಡವು ಎಂದು ನನ್ನ ತರ್ಕವನ್ನು ನನಗೇ ತಿರುಗಿಸಲು ಕೆಲವರು ಪ್ರಯತ್ನಿಸಬಹುದು. ಆದರೆ ನವೀನ್ ಪಟ್ನಾಯಕ್, ಜಯಲಲಿತಾರಂಥವರು ಇದಕ್ಕೆ ಹೊರತಾದವರು ಮತ್ತು ಬಿಜೆಪಿಯೊಂದಿಗೆ ಸೇರಿದ ಎಲ್ಲ ಪಕ್ಷಗಳೂ ತಂತಮ್ಮ ರಾಜಕೀಯಲಾಭವನ್ನು ಮುಖ್ಯ ಮಾಡಿಕೊಂಡಿದ್ದವು ಎನ್ನುವುದನ್ನು ಮರೆಯಬಾರದು. ಅದು ಅವರಿಗೆ ಸ್ವಾಭಾವಿಕವಾದುದು. ಎಡಪಕ್ಷಗಳಿಗೆ ಇಂತಹ ರಾಜಕೀಯ ಸ್ವಾಭಾವಿಕವಾಗಬೇಕಿಲ್ಲ).

ಈ ಚುನಾವಣೆಯಲ್ಲಿ ಸ್ಥಳೀಯ ರಾಜಕೀಯ ಸನ್ನಿವೇಶಗಳು ಸಹ ಕೆಲಸಮಾಡಿವೆ. ಈಗ ಒರಿಸ್ಸ ರಾಜ್ಯವನ್ನೇ ನೋಡಿ. ಹನ್ನೊಂದು ವರ್ಷ ಬಿಜೆಪಿಯ ಜೊತೆಗೆ ಅಧಿಕಾರ ಹಂಚಿಕೊಂಡ ಬಿಜೆಡಿ ನವೀನ್ ಪಟ್ನಾಯಕ್ ಕೋಮುದಳ್ಳುರಿಯನ್ನು ತಡೆಯಲಾಗಲಿಲ್ಲ. ಬುಡಕಟ್ಟು, ಹಿಂದುಳಿದ ಮತ್ತು ಅಲ್ಪಸಂಖ್ಯಾತ ಜನಾಂಗಗಳು ಅಭದ್ರತೆ ಮತ್ತು ಪರಕೀಯತೆಯಿಂದ ನರಳತೊಡಗಿದ್ದವು. ತಮ್ಮ ಸರ್ಕಾರಕ್ಕೆ ವಿರುದ್ಧವಾದ ಅಭಿಮತ ಮೂಡುತ್ತಿರುವುದನ್ನು ಅರಿತ ನವೀನ್ ಪಟ್ನಾಯಕ್ ಬಿ.ಜೆ.ಪಿ.ಗೆ ಸ್ವಯಂಪ್ರೇರಿತ ವಿಚ್ಛೇದನ ನೀಡಿದರು. ಕೋಮುದ್ವೇಷದ ಪರಿಣಾಮಗಳಿಗೆ ಪ್ರಾಯಶ್ಚಿತ್ತ ಮಾಡಿಕೊಂಡಂತೆ ಕಾಣಿಸಿಕೊಂಡರು. ಒರಿಸ್ಸದಲ್ಲಿ ಕಾಂಗ್ರೆಸ್‌ಗೆ ಪರ್ಯಾಯವಾಗುವ ಶಕ್ತಿಯಿರಲಿಲ್ಲ. ನವೀನ್ ಪಟ್ನಾಯಕ್ ದೊಡ್ಡ ಹಗರಣಗಳಲ್ಲಿ ವಿಜೃಂಭಿಸಿರಲಿಲ್ಲ. ಹೀಗಾಗಿ ಒರಿಯಾ ಭಾಷೆಯನ್ನು ಓದಲು, ಬರೆಯಲು ಸಮರ್ಥರಲ್ಲದ ನವೀನ್ ಪಟ್ನಾಯಕ್ ಅವರನ್ನೇ ಒರಿಯಾ ಜನ ಮತ್ತೆ ಆರಿಸಿದರು. ಲೋಕಸಭೆಗೂ ಹೆಚ್ಚು ಸ್ಥಾನ ನೀಡಿದರು. ಪ್ರಾದೇಶಿಕ ಪಕ್ಷವೆಂದರೆ ನಾಡು-ನುಡಿಗೆ ಆದ್ಯತೆಯೆಂದು ಬಿಂಬಿಸುತ್ತಿರುವ ದಕ್ಷಿಣದ ರಾಜ್ಯಗಳ ಎದುರು ಭಾಷೆಯನ್ನೂ ಮೀರಿ ನಾಯಕನನ್ನು ಆಯ್ಕೆಮಾಡಿದ ಒರಿಸ್ಸ ಒಂದು ವಿಸ್ಮಯವೇ ಸರಿ.

ಒರಿಸ್ಸದಂತೆಯೇ ಲೋಕಸಭೆ ಮತ್ತು ವಿಧಾನಸಭೆಗಳಿಗೆ ಒಟ್ಟಾಗಿ ಚುನಾವಣೆ ನಡೆದ ರಾಜ್ಯ ಆಂಧ್ರಪ್ರದೇಶ. ಜಾತಿವಾರು ಪರಿಗಣನೆ ಮತ್ತು ಆಡಳಿತ ವಿರೋಧಿ ಅಂಶಗಳ ಲೆಕ್ಕಾಚಾರಗಳ ನಡುವೆಯೂ ಕಾಂಗ್ರೆಸ್ ಮತ್ತೆ ಅಧಿಕಾರಕ್ಕೆ ಬಂದಿದೆ. ರಾಜಶೇಖರ ರೆಡ್ಡಿಯವರ ನೇತೃತ್ವದ ಕಾಂಗ್ರೆಸ್ ಸರ್ಕಾರವು ಗ್ರಾಮೀಣ ಜನರಿಗೆ ಉಪಯುಕ್ತವಾದ ಕೆಲವು ಯೋಜನೆಗಳನ್ನು ರೂಪಿಸಿ ಅನುಷ್ಠಾನಕ್ಕೆ ತಂದಿದೆ. ಹೀಗಾಗಿ ಈ ಒಳ್ಳೆಯ ಕೆಲಸಗಳು, ಕೆಟ್ಟ ಕೆಲಸಗಳಿಗೆ ಕ್ಷಮೆ ನೀಡಿರಬಹುದಾದ್ದು ಒಂದು ಅಂಶವಾದರೆ, ಮೆಗಾಸ್ಟಾರ್ ಚಿರಂಜೀವಿಯವರ ಪ್ರಜಾರಾಜ್ಯ ಪಡೆದ ಮತಗಳು ಯಾವುವು ಎಂಬ ಇನ್ನೊಂದು ಅಂಶವೂ ಇಲ್ಲಿ ಮುಖ್ಯ. ರೆಡ್ಡಿ, ಕಮ್ಮ ಜನಾಂಗಗಳ ಪ್ರಾಬಲ್ಯವನ್ನು ಕ್ರಮವಾಗಿ ಮೆರೆಯುವ ಕಾಂಗ್ರೆಸ್ ಮತ್ತು ತೆಲುಗುದೇಶಂ ಪಕ್ಷಗಳ ಎದುರು ಕಾಪು ಜನಾಂಗಕ್ಕೆ ರಾಜಕೀಯ ಪ್ರಾಧಾನ್ಯ ನೀಡುತ್ತಾರೆಂದು ಭಾವಿಸಲಾದ ಚಿರಂಜೀವಿಯವರು ನಿರೀಕ್ಷಿಸಿದಷ್ಟು ಯಶ ಪಡೆಯಲಿಲ್ಲ. ಆದರೆ ತೆಲುಗುದೇಶಂಗೆ ಹೋಗುತ್ತಿದ್ದ ಆಡಳಿತ ವಿರೋಧಿ ಮತಗಳ ವಿಭಜನೆಗೆ ಕಾರಣರಾದರು. ಕಾಂಗ್ರೆಸ್ ವಿರೋಧಿ ಮತಗಳನ್ನು ತೆಲುಗು ದೇಶಂನೊಂದಿಗೆ ಹಂಚಿಕೊಂಡರು. ಕಾಂಗ್ರೆಸ್ ಶಕ್ತಿ ಕ್ಷೀಣಿಸಿದರೂ ಬಹುಮತ ಪಡೆಯಿತು. ಅಧಿಕಾರದ ಚುಕ್ಕಾಣಿ ಹಿಡಿಯುವ ತೆಲುಗುದೇಶಂ ಕನಸು ಭಗ್ನವಾಯಿತು. ಎನ್.ಟಿ.ಆರ್. ಕಾಲ ಬೇರೆ, ಚಿರಂಜೀವಿ ಕಾಲ ಬೇರೆ ಎಂದು ಸಾಬೀತಾಯಿತು. ಎನ್.ಟಿ.ಆರ್. ಅವರು ರಾಜಕೀಯಕ್ಕೆ ಬಂದಾಗ ತೆಲುಗರ ಸ್ವಾಭಿಮಾನದ ಪ್ರಶ್ನೆಯನ್ನು ಮುಂದುಮಾಡಿದರು. ಕಾಂಗ್ರೆಸ್ ಮತ್ತೆ ಮತ್ತೆ ಮುಖ್ಯಮಂತ್ರಿಗಳನ್ನು ಬದಲಾಯಿಸಿದ್ದಲ್ಲದೆ, ಸಂಜಯ ಗಾಂಧಿ ಮುಖ್ಯಮಂತ್ರಿ ಅಂಜಯ್ಯನವರನ್ನು ಅವಮಾನಿಸಿದ್ದರು. ಮುಖ್ಯಮಂತ್ರಿಗಾದ ಅವಮಾನವನ್ನು ತೆಲುಗರ ಸ್ವಾಭಿಮಾನದ ಪ್ರಶ್ನೆಯನ್ನಾಗಿ ರೂಪಿಸುವ ಶಕ್ತಿ ಎನ್.ಟಿ.ಆರ್. ಅವರಿಗಿತ್ತು. ಸಿನಿಮಾದ ತಾರಾಮೌಲ್ಯ ಪೂರಕವಾಯಿತು. ಚಿರಂಜೀವಿಯವರಿಗಿದ್ದ ಸನ್ನಿವೇಶ ಬೇರೆ. ತೆಲುಗು ದೇಶಂನಲ್ಲೂ ಜೂನಿಯರ್ ಎನ್.ಟಿ.ಆರ್., ಬಾಲಕೃಷ್ಣ ಮುಂತಾದ ಸ್ಟಾರ್‌ಗಳಿದ್ದರು. ಇಡೀ ಜನಸಮುದಾಯವನ್ನು ಬಡಿದೇಳಿಸುವಂತಹ ವಿಷಯಗಳಿರಲಿಲ್ಲ. ಒಟ್ಟಿನಲ್ಲಿ ಕಾಂಗ್ರೆಸ್ ಮತ್ತೆ ಬಂತು.

ತಮಿಳು ನಾಡು ನೋಡಿ. ಡಿ.ಎಂ.ಕೆ.ಯ ಬಲ ತುಂಬಾ ಕ್ಷೀಣವಾಗುತ್ತದೆಯೆಂದು ಭಾವಿಸಲಾಗಿದ್ದ ರಾಜ್ಯವಿದು. ಆದರೆ ತುಂಬಾ ಕ್ಷೀಣವಾದದ್ದು ಕರುಣಾನಿಧಿಯವರ ಬಲ; ಡಿ.ಎಂ.ಕೆ. ಬಲವಲ್ಲ. ಕರುಣಾನಿಧಿ ವೈಯಕ್ತಿಕವಾಗಿ ಬಲಹೀನರಾಗಿದ್ದರೂ ಡಿ.ಎಂ.ಕೆ.ಯನ್ನು ಉಳಿಸುವಲ್ಲಿ ಶಕ್ತರಾದರು. ಬಲಹೀನ ಸ್ಥಿತಿಯಲ್ಲಿ ಶ್ರೀಲಂಕಾ ತಮಿಳರ ರಕ್ಷಣೆಗಾಗಿ ದಿಢೀರ್ ಉಪವಾಸ ಸತ್ಯಾಗ್ರಹ ಮಾಡಿದರು. ಚುನಾವಣೆಯ ಸಂದರ್ಭದಲ್ಲಿ ಆಸ್ಪತ್ರೆಯನ್ನೂ ಸೇರಿದರು. ಸಹಾನೂಭೂತಿಗೆ ಇನ್ನೇನು ಬೇಕು ? ಎಲ್ಲರಿಗಿಂತ ಮುಂಚೆ ಶ್ರೀಲಂಕಾ ತಮಿಳರು ಮತ್ತು ಎಲ್.ಟಿ.ಟಿ.ಇ. ವಿಷಯವನ್ನು ಚುನಾವಣಾ ವಿಷಯ ಮಾಡಿದ ಜಯಲಲಿತಾರ ತಂತ್ರವನ್ನು ಕರುಣಾನಿಧಿಯವರು ತಮ್ಮ ಪ್ರತಿ ತಂತ್ರದಿಂದ ಹಿಮ್ಮೆಟ್ಟಿಸಿದರು. ಆಡಳಿತವಿರೋಧಿ ಅಂಶಗಳು ಪ್ರಬಲವಾಗದಂತೆ ನೋಡಿಕೊಂಡರು. ಜೊತೆಗೆ ಚುನಾವಣೆಗೆ ತನ್ನ ಪಕ್ಷದ ಅಭ್ಯರ್ಥಿಗಳನ್ನು ಕಣಕ್ಕಿಳಿಸಿದ್ದ ಸಿನಿಮಾ ಸ್ಟಾರ್ 'ವಿಜಯಕಾಂತ್' ಅವರು ಜಯಲಲಿತಾ ನೇತೃತ್ವದ ಅಣ್ಣಾ ಡಿ.ಎಂ.ಕೆ.ಯ ಸ್ವಲ್ಪ ಮತಗಳನ್ನು ಸೆಳೆದರು. ಡಿ.ಎಂ.ಕೆ ಮತ್ತು ಕಾಂಗ್ರೆಸ್‌ಗೆ ಸ್ವಲ್ಪ ಮಟ್ಟಿಗೆ ಇದು ಸಹಾಯಕವಾಯಿತು.

ಮಹಾರಾಷ್ಟ್ರದಲ್ಲಿ ಕಾಂಗ್ರೆಸ್ ಮತ್ತು ಎನ್.ಸಿ.ಪಿ. ಮೈತ್ರಿ ಮಾಡಿಕೊಂಡಿದ್ದವು. ರಾಜ್ಯ ಸರ್ಕಾರವನ್ನು ಈ ಪಕ್ಷಗಳ ಮೈತ್ರಿಕೂಟವೇ ನಡೆಸುತ್ತಿದೆ. ಈ ಸಾರಿ ಶರದ್ ಪವಾರ್ ಮಹತ್ವಾಕಾಂಕ್ಷೆಯಿಂದ ಎಲ್ಲಾ ಕಡೆ ಸಲುವ 'ಜಾಣತನ'ಕ್ಕೆ ಜೋತುಬಿದ್ದು ಈಗ ಕಾಂಗ್ರೆಸ್‌ಗಷ್ಟೇ ಜೋತು ಜೀಳುವಂತಾಗಿದೆ. ಯು.ಪಿ.ಎ.ಯ ಅಧಿಕೃತ ಅಂಗ ಪಕ್ಷವೆಂದು ಹೇಳಿಕೊಳ್ಳುತ್ತ, ಅದರಂತೆ ಮೈತ್ರಿ ಮಾಡಿಕೊಳ್ಳುತ್ತಲೇ ಒರಿಸ್ಸದಲ್ಲಿ ನವೀನ್ ಪಟ್ನಾಯಕ್‌ರ ಬಿ.ಜೆ.ಡಿ. ಜೊತೆ ಸೇರಿದರು. ವಿವಿಧ ರಾಜಕೀಯ ಪಕ್ಷಗಳ ಮುಖಂಡರ ಜೊತೆ ಸದಾ ಸಂಪರ್ಕ ಇಟ್ಟುಕೊಂಡು ಪ್ರಧಾನಿ ಅಭ್ಯರ್ಥಿಯಾಗುವ ಹವಣಿಕೆಯಲ್ಲಿದ್ದರು. ಆದರೆ ಫಲಿತಾಂಶ ಬಂದಾಗ ಕಾಂಗ್ರೆಸ್ ಮೇಲುಗೈ ಸಾಧಿಸಿತ್ತು. ಮುಂಬೈ ಭಯೋತ್ಪಾದನೆಯ ನಂತರ ಕಾಂಗ್ರೆಸ್ ತನ್ನ ಮುಖ್ಯ ಮಂತ್ರಿ ವಿಲಾಸ್‌ರಾವ್ ದೇಶಮುಖ್ ಅವರ ಸ್ಥಾನ ಪಲ್ಲಟಮಾಡಿತ್ತು. ಮುಂಬೈ ಜನರು ಭಯೋತ್ಪಾದನೆಯನ್ನು ಚುನಾವಣೆಯ ವಿಷಯವಾಗಿ ನೋಡಲಿಲ್ಲ ಎನ್ನುವುದು ಒಂದು ಕಡೆಯಾದರೆ ಮತ ವಿಭಜನೆಯಲ್ಲಿ ರಾಜ್ ಠಾಕ್ರೆಯವರ ಎಂ.ಎನ್.ಎಸ್. ವಹಿಸಿದ ಪಾತ್ರ ಇನ್ನೊಂದು ಕಡೆ – ಎರಡೂ ಸೇರಿ ಕಾಂಗ್ರೆಸ್ ಮುಂಬೈನಗರದ ಆರು ಕ್ಷೇತ್ರಗಳನ್ನೂ ತನ್ನದಾಗಿಸಿಕೊಂಡಿತು. ಎಂ.ಎನ್.ಎಸ್. ತನ್ನದಾಗಿಸಿಕೊಂಡ ಮತಗಳು ಶಿವಸೇನೆ, ಬಿ.ಜೆ.ಪಿ.ಯ ಮೂಲ ಮತಗಳೆನ್ನುವುದನ್ನು ಗಮನಿಸಬೇಕು. ಮುಂಬೈ ಆಚೆಗಿನ ಮಹಾರಾಷ್ಟ್ರದಲ್ಲಿ ಬಿಜೆಪಿ– ಶಿವಸೇನೆ ಮತ್ತು ಎನ್.ಸಿ.ಪಿ.ಗಳು ಎದೆನಡುಗಿಸುವ ಸಂಖ್ಯಾಬಲವನ್ನೇನೂ ಪಡೆಯಲಿಲ್ಲ. ಸಾಂಪ್ರದಾಯಿಕ ಮತಗಳು ವಿಭಜನೆಗೊಳ್ಳುತ್ತಿರುವ ಪ್ರಕ್ರಿಯೆಯನ್ನು ಮಹಾರಾಷ್ಟ್ರದ ಕೆಲವು ಕಡೆ ಕಾಣಬಹುದು.

ಬಿಹಾರದಲ್ಲಿ ಈ ಸಾರಿ ಲಾಲೂ ಜಾದು ನಡೆಯಲಿಲ್ಲ. ಲಾಲೂ ಪ್ರಸಾದ್ ಯಾದವ್ ಅವರು ಹಿಂದುಳಿದವರ, ಅಲ್ಪಸಂಖ್ಯಾತರ ನೇತಾರರಾಗಿ ಮತ್ತು ರಾಮವಿಲಾಸ್ ಪಾಸ್ವಾನ್ ಅವರು ದಲಿತರ ನೇತಾರರಾಗಿ ಹೊರಹೊಮ್ಮಲು ಚಾರಿತ್ರಿಕ ಕಾರಣಗಳಿವೆ. ಸ್ವಾತಂತ್ರ್ಯೋತ್ತರ ಭಾರತದ ಬಿಹಾರದಲ್ಲಿ ಮೇಲ್‌ಜಾತಿ ಮತ್ತು ವರ್ಗದವರ ಕೈಯ್ಯಲ್ಲಿದ್ದ ಕಾಂಗ್ರೆಸ್ ಹಿಂದುಳಿದವರನ್ನೂ ಕ್ರಮೇಣ ದಲಿತರನ್ನೂ, ರಾಜಕೀಯ ನಾಯಕತ್ವದಿಂದ ದೂರವೇ ಉಳಿಸಿತು. ಇದರ ಫಲವಾಗಿ ಮುಂದೆ ಕರ್ಪೂರಿ ಠಾಕೂರ್‌ರಂಥ ಅತ್ಯಂತ ಹಿಂದುಳಿದ ಜನಾಂಗದ ನಾಯಕರು ಹೊರಮೊಹೊಮ್ಮಿದರು; ಮುಖ್ಯ ಮಂತ್ರಿಯಾದರು. ಉತ್ತಮ ಕೆಲಸ ಮಾಡಿದರು. ಆನಂತರ ಸಾಮೂಹಿಕವಾಗಿ ಹಿಂದುಳಿದವರಿಗೆ, ಅಲ್ಪಸಂಖ್ಯಾತರಿಗೆ ಆತ್ಮವಿಶ್ವಾಸ ತುಂಬಿದವರು ಲಾಲೂ ಪ್ರಸಾದ್ ಯಾದವ್. ಬಿಹಾರದಲ್ಲಿ ಬಹುಸಂಖ್ಯಾತರಾದ ಹಿಂದುಳಿದವರು, ಅಲ್ಪಸಂಖ್ಯಾತರು ಮತ್ತು ದಲಿತರು ಲಾಲೂ ಮತ್ತು ಪಾಸ್ವಾನ್ ಅವರಲ್ಲಿ ತಮ್ಮ ನಾಯಕತ್ವವನ್ನು ಗುರುತಿಸಿದ್ದು ಒಂದು ಚಾರಿತ್ರಿಕ ಬೆಳವಣಿಗೆ. ಆದರೆ ಅಭಿವೃದ್ಧಿಯತ್ತ ಹೆಚ್ಚು ಗಮನ ಹರಿಸಲಿಲ್ಲವೆಂಬ ಆಕ್ಷೇಪದ ಜೊತೆಗೆ ಭ್ರಷ್ಟಾಚಾರದ ಆರೋಪ ಹೊತ್ತ ಲಾಲೂ ಯಾದವೇತರ ಹಿಂದುಳಿದವರನ್ನು ನಿರ್ಲಕ್ಷಿಸಿದ್ದು ಅವರಿಗೆ ಮುಳುವಾಯಿತು. ಯಾದವೇತರ ಹಿಂದುಳಿದ ನಾಯಕರಾಗಿ ನಿತೀಶ್ ಕುಮಾರ್ ಹೊರಹೊಮ್ಮಿದರು. ನಡವಳಿಕೆಯಿಂದ ಸಹ ಲಾಲೂ ಅವರಿಗಿಂತ ಸರಳ, ಸೌಜನ್ಯಗಳನ್ನು ಪಡೆದಿದ್ದ ನಿತೀಶ್ ಬಹು ಜನಪ್ರಿಯ ನೆಲೆಯನ್ನು ತಲುಪಿದರು. ಈ ನೆಲಮೂಲ ವಾಸ್ತವಗಳನ್ನು ಕಡೆಗಣಿಸಿದ ಲಾಲೂ ಮತ್ತು ಪಾಸ್ವಾನ್ ಕಾಂಗ್ರೆಸ್‌ಗೂ ಕೈ ಕೊಟ್ಟು ಉತ್ತರ ಪ್ರದೇಶದ ಮುಲಾಯಂ ಸಿಂಗ್ ಯಾದವ್ ಜೊತೆ ಸೇರಿದರು. ಮೂವರೂ ಚುನಾವಣೆಯ ನಂತರ ದಾಳ ಎಸೆಯಬಹುದೆಂದು ಭಾವಿಸಿ ಭ್ರಮನಿರಸನಗೊಂಡರು.

ಉತ್ತರಪ್ರದೇಶದಲ್ಲೂ ಹಿಂದೆ ಬಿಹಾರದ ಸ್ಥಿತಿಯೇ ಇತ್ತು. ಕಾಂಗ್ರೆಸ್ ಮೇಲ್‌ಜಾತಿ ಮತ್ತು ವರ್ಗದವರ ಕೈಯಲ್ಲಿತ್ತು. ಹಿಂದುಳಿದವರು ಮತ್ತು ದಲಿತರು ರಾಜಕೀಯ ನಾಯಕತ್ವದ ಸಂದರ್ಭದಲ್ಲಿ ನಿರ್ಲಕ್ಷಿತರಾಗುತ್ತ ಬಂದರು. ಹೀಗಾಗಿ ಮುಲಾಯಂ ಸಿಂಗ್ ಮತ್ತು ಕಾನ್ಶಿರಾಂ ಉದಯ ಚಾರಿತ್ರಿಕವಾಯಿತು. ಎಸ್.ಪಿ. ಮತ್ತು ಬಿ.ಎಸ್.ಪಿ.ಗಳು ಶೋಷಿತ ವರ್ಗಗಳ ಪರವಾದ ದನಿಯಾಗಿ ಹುಟ್ಟಿದರೂ ಮುಂದೆ ಪರಸ್ಪರ ಎದುರುಬದುರಾದವು. ಸದಾಕಾಲವೂ ಬದ್ಧವೈರಿಗಳಂತೆ ವರ್ತಿಸತೊಡಗಿದವು. ಉತ್ತಮ ಉದ್ದೇಶವುಳ್ಳ ಪಕ್ಷಗಳು ಕಾಲಾನುಕ್ರಮದಲ್ಲಿ ಹಾದಿ ತಪ್ಪಿದ ನಡವಳಿಕೆಗಳಿಗೆ ಕಾರಣವಾದರೆ ನಷ್ಟವಾಗುವುದು ಕೇವಲ ಪಕ್ಷಗಳಿಗಲ್ಲ. ಈ ಪಕ್ಷಗಳನ್ನು ನಂಬಿದ ಮುಗ್ಧ ಜನರಿಗೆ ಮಾಯಾವತಿಯವರು ಮೇಲ್ ಜಾತಿಯವರಿಗೂ ಮೀಸಲಾತಿ ಎಂಬ ಘೋಷಣೆಯೊಂದಿಗೆ ದಲಿತರು ಮತ್ತು ಬ್ರಾಹ್ಮಣರನ್ನು ಬೆಸೆದಂತೆ ಮಾಡಿ ಮುಖ್ಯಮಂತ್ರಿಯಾದರು. ದಲಿತರ ಪರವಾಗಿರುವುದೆಂದರೆ ಮೇಲ್ ಜಾತಿ ದ್ವೇಷವಲ್ಲ ಎಂದು ತೋರಿಸಿದರು. ಆದರೆ ಒಂದು ಮಾತನ್ನು ಇಲ್ಲಿ ಹೇಳಬೇಕು. 'ಮೇಲ್ ಜಾತಿ ಬಡವರಿಗೂ ಮೀಸಲಾತಿ' ಎಂಬುದನ್ನು ದೇವರಾಜ ಅರಸು ಅವರು ಕರ್ನಾಟಕದಲ್ಲಿ ಜಾರಿಗೆ ತಂದಿದ್ದರು. ಹಾವನೂರು ವರದಿಯನ್ನು ಜಾರಿಗೆ ತರುವಾಗ, ಈ ವರದಿಯಲ್ಲಿ ಇಲ್ಲದ 'ಮೇಲ್ ಜಾತಿ ಬಡವರಿಗೆ ಮೀಸಲಾತಿ' ಎಂಬ ಅಂಶವನ್ನು ತಾವೇ

## ಗೂಡು

ರಕ್ತಬೀಜ
ಮೊಟ್ಟೆ ಇಡಲು
ಗೂಡು ಕಟ್ಟಿ
ಕೊಡುವ ನಾವು
ಪರಿಸ್ಥಿತಿ ಕೈಮೀರಿದಾಗ
ಚಾಮುಂಡಿಯನ್ನು
ನೆನೆದು ಏನು ಫಲ ?

ಡಿ. ವಿ. ಬಡಿಗೇರ
ತೆಗ್ಗಿನ ಪೇಟೆ ಓಣಿ
ಗದಗ - ಬೆಟಗೇರಿ - ೫೮೨ ೧೦೨

ಹೊಸದಾಗಿ ರೂಪಿಸಿ 'ಬ್ಯಾಕ್‌ವರ್ಡ್' ಸ್ಪೆಷಲ್ ಗ್ರೂಪ್' ಎಂಬ ವಿಶೇಷ ವಿಭಾಗ ಮಾಡಿ ಶೇ. ೧೫ರಷ್ಟು ಮೀಸಲಾತಿ ಇಟ್ಟರು. ಅಂದರೆ ಈ ಪ್ರಯೋಗ ಕರ್ನಾಟಕದಲ್ಲಿ ತನ್ನದೇ ವಿಧಾನದಲ್ಲಿ ಆರಂಭವಾಗಿತ್ತು. ಇರಲಿ; ಈಗ ಚುನಾವಣೆಗೆ ಬರೋಣ. ಪರಸ್ಪರ ವಿರೋಧದ ವೈಪರೀತ್ಯ ಮತ್ತು ಅತಿರೇಕಗಳ ನಡುವೆ ಕಾಂಗ್ರೆಸ್ ತನ್ನ ಪಾಲು ಪಡೆಯಲು ಮುಂದಾಯಿತು. ಸ್ವತಂತ್ರವಾಗಿಯೇ ಸ್ಪರ್ಧಿಸಬೇಕೆಂದು ಪ್ರತಿಪಾದಿಸಿದ ರಾಹುಲ್ ಗಾಂಧಿ ವ್ಯಾಪಕ ಪ್ರಚಾರ ಕೈಗೊಂಡರು. ಹೈಟೆಕ್‌ನಂತೆಯೂ ಕಂಡರು. ಮಧ್ಯಮವರ್ಗದವರಿಗೂ ಪ್ರಿಯವಾಗತೊಡಗಿದರು. ದಲಿತರ ಮನೆಗಳಿಗೂ ಹೋದರು; ಜೊತೆಯಲ್ಲಿ ಉಂಡರು. ಬಿ.ಎಸ್.ಪಿ. ಮತ್ತು ಎಸ್.ಪಿ.ಗಳಿಂದ ಬೇರೆಯದಾದ ಪರ್ಯಾಯ ಇದೆ ಎಂಬುದನ್ನು ಕಾಂಗ್ರೆಸ್ ತೋರಿಸಲು ಸಾಧ್ಯವಾದದ್ದರಿಂದ ೨೦ ಸ್ಥಾನಗಳನ್ನು ಗೆದ್ದಿತು. ನಿಜ. ಅದರ ದಾರಿ ಇನ್ನೂ ದೂರವಿದೆ. ಆದರೆ ಎಸ್.ಪಿ. ಮತ್ತು ಬಿ.ಎಸ್.ಪಿ.ಗಳಿಗೆ ಇದೊಂದು ಪಾಠ . ವಿಚಿತ್ರವೆಂದರೆ ಎಸ್.ಪಿ. ಮತ್ತು ಬಿ.ಎಸ್.ಪಿ.ಗಳೆರಡೂ ಈಗಿನ ಯು.ಪಿ.ಎ.ಗೆ ಅಧಿಕೃತ ಬೆಂಬಲ ಘೋಷಿಸಿವೆ. ಸಚಿವಸ್ಥಾನ ಸಿಗುವುದಿಲ್ಲವೆಂದು ಗೊತ್ತಾಗಿದ್ದರೂ ಬೆಂಬಲ ನೀಡುವುದರಲ್ಲಿ ತೋರಿದ ಸ್ಪರ್ಧೆಯ ಗುಟ್ಟು ಬೇರೆಯೇ ಇದ್ದೀತು !

ಹರಿಯಾಣ ಮತ್ತು ದೆಹಲಿ ರಾಜ್ಯಗಳಲ್ಲಿ ಕಾಂಗ್ರೆಸ್ ಮೇಲುಗೈ ಸಾಧಿಸಿದ್ದು ನಿರೀಕ್ಷಿತ. ಇದ್ದ ಎಲ್ಲಾ ಸ್ಥಾನಗಳೂ ಇಲ್ಲಿ ಕಾಂಗ್ರೆಸ್ ಪಾಲಾಗಿವೆ. ಆದರೆ ಚುನಾವಣೆಯ ಕೊನೇ ಹಂತದಲ್ಲಿ ಪಂಜಾಬ್‌ನ ಲೂಧಿಯಾನದಲ್ಲಿ ನಿತೀಶ್ ಕುಮಾರ್, ಶರದ್ ಯಾದವ್, ಚಂದ್ರಶೇಖರರಾವ್ (ಟಿ.ಆರ್. ಎಸ್.) ಅವರನ್ನೆಲ್ಲ ಕರೆಸಿಕೊಂಡು ಬೃಹತ್ ಸಮಾವೇಶದ ಮೂಲಕ ಒಗ್ಗಟ್ಟು ಪ್ರದರ್ಶಿಸಿದ್ದ ಎನ್.ಡಿ.ಎ. ರಾಷ್ಟ್ರ ಮಟ್ಟದಲ್ಲಷ್ಟೇ ಅಲ್ಲ ಪಂಜಾಬ್‌ನಲ್ಲೂ ಹಿನ್ನಡೆ ಅನುಭವಿಸಿತು. ಕಾಂಗ್ರೆಸ್‌ನ ಮಾಜಿ ಮುಖ್ಯಮಂತ್ರಿ ಅಮರಿಂದ್ರ ಸಿಂಗ್ ಮೇಲೆ ಇದ್ದ ಭ್ರಷ್ಟಾಚಾರದ ಕೇಸುಗಳು ಲೆಕ್ಕಕ್ಕೆ ಬರಲಿಲ್ಲ. ಯಾಕೆಂದರೆ ಹಾಲಿ ಮುಖ್ಯಮಂತ್ರಿಯವರ ಮೇಲೂ ಅನೇಕ ಆರೋಪಗಳಿವೆ. ಇಲ್ಲಿ ಶಿರೋಮಣಿ ಅಕಾಲಿದಳ ಮತ್ತು ಬಿಜೆಪಿ ಹೆಚ್ಚು ಸ್ಥಾನಗಳಿಸಬಹುದೆಂಬ ಅನೇಕರ ಊಹೆ (ಆಸೆ ?) ಸುಳ್ಳಾಯಿತು. ಮನಮೋಹನ್ ಸಿಂಗ್ ಅವರನ್ನು ಪ್ರಧಾನ ಮಂತ್ರಿಯಾಗಿ ಬಿಂಬಿಸಿದ್ದು ಮತ್ತು ಎಲ್ಲೂ ಬಾರದ ಅವರು ಪಂಜಾಬ್‌ನಲ್ಲಿ ಬಹಿರಂಗ ಸಭೆ ನಡೆಸಿದ್ದು ಒಂದು ತಿರುವನ್ನು ನೀಡಿದೆಯೆನ್ನಬಹುದು.

ಪಶ್ಚಿಮ ಬಂಗಾಳ ಮತ್ತು ಕೇರಳ ರಾಜ್ಯಗಳಲ್ಲಿ ಎಡರಂಗದ ಸರ್ಕಾರಗಳಿದ್ದವು. ಕೇರಳದಲ್ಲಿ ಸಾಮಾನ್ಯವಾಗಿ ಪ್ರತಿಸಾರಿಯೂ ಪರ್ಯಾಯವನ್ನು ಹುಡುಕುವ ಮತದಾರರಿದ್ದಾರೆ. ಎಡಪಕ್ಷಗಳ ಎಲ್.ಡಿ.ಎಫ್. ಒಮ್ಮೆ ಬಂದರೆ ಮತ್ತೊಮ್ಮೆ ಯು.ಡಿ.ಎಫ್.(ಕಾಂಗ್ರೆ ನೇತೃತ್ವ) ಬರುತ್ತದೆ. ಇದು ವಿಧಾನಸಭೆಯ ಚುನಾವಣೆಗೆ ಸಂಬಂಧಿಸಿದ ಅಂಶವಾದರೂ ಲೋಕಸಭಾ ಚುನಾವಣೆಯಲ್ಲೂ ತನ್ನ ಪಾತ್ರ ವಹಿಸುತ್ತದೆ. ಕೇರಳದಲ್ಲಿ ಎಡರಂಗದ ಎಲ್.ಡಿ.ಎಫ್. ಅಧಿಕಾರದಲ್ಲಿದೆ. ಮತದಾರ ಪರ್ಯಾಯವಾಗಿ ಕಾಂಗ್ರೆಸ್‌ನ ಯು.ಡಿ.ಎಫ್. ಕಡೆ ವಾಲುತ್ತಾನೆಂದರೂ ಎಲ್. ಡಿ. ಎಫ್. ನಾಲ್ಕು ಸ್ಥಾನಗಳಿಗೆ ಸೀಮಿತವಾಗಬೇಕಾಗಿ ಬಂದದ್ದು ಒಂದು ಪಾಠವೇ ಸರಿ. ಇಂತಹ ಫಲಿತಾಂಶಕ್ಕೆ ಸಿ.ಪಿ.ಎಂ.ನಲ್ಲಿ ಮುಖ್ಯಮಂತ್ರಿ ಅಚ್ಯುತಾನಂದನ್ ಮತ್ತು ವಿಜಯನ್ ಅವರ ನಡುವೆ ಇದ್ದ ಭಿನ್ನಾಭಿಪ್ರಾಯವನ್ನು ಒಂದು ಕಾರಣವಾಗಿ ನೀಡುವವರೂ ಉಂಟು. ಆದರೆ ಯು.ಡಿ.ಎಫ್.ಗೆ ಸಮಬಲದಲ್ಲೂ ನಿಲ್ಲದೆ ಹೋದದ್ದಕ್ಕೆ ಒಳಜಗಳವನ್ನೂ ಒಳಗೊಂಡಂತೆ, ಅದನ್ನು ಮೀರಿದ ಕಾರಣಗಳೂ ಇರುತ್ತವೆ. ಪಶ್ಚಿಮ ಬಂಗಾಳವನ್ನು ನೋಡಿ. 'ನನ್ನ ಜೀವಾತಾವಧಿಯಲ್ಲಿ ಅತ್ಯಂತ ಹೀನಾಯ ಸೋಲನ್ನು ಕಂಡೆ' ಎಂದು ಜ್ಯೋತಿ ಬಸು ಅವರು ವ್ಯಾಕುಲಗೊಳ್ಳುವಷ್ಟು ಎಡಪಕ್ಷಗಳ ಶಕ್ತಿ ಕುಗ್ಗಿ ಹೋಗಿತ್ತು. ೩೨ ವರ್ಷಗಳಲ್ಲಿ ಕಂಡ ಅತ್ಯಂತ ಹೀನಾಯ ಸೋಲು ಎಂದು ಇದನ್ನು ಹೇಳಲಾಗುತ್ತದೆ. ನಂದಿಗ್ರಾಮದ ಗಲಭೆ, ಸಿಂಗೂರ್‌ನ ನ್ಯಾನೊ ಕಾರಿನ ಕಾರ್ಖಾನೆಯ ವಿವಾದಗಳ ನೆರಳು ಭೂತದಂತೆ ಕಾಡಿಸಿರುವುದರ ಜೊತೆಗೆ ಜನರಿಗೆ ಇನ್ನೊಂದು ಪರ್ಯಾಯ ಕಾಣಿಸಿದೆ. ಪರಸ್ಪರ ವಿರುದ್ಧವಾಗಿದ್ದ ಕಾಂಗ್ರೆಸ್ ಮತ್ತು ತೃಣಮೂಲ ಕಾಂಗ್ರೆಸ್ ಒಂದಾಗಿ ಪರ್ಯಾಯವನ್ನು ನೀಡಲು ಸಿದ್ಧವಾದಾಗ ತಟಸ್ಥ ಮತದಾರರು, ಒಂದಷ್ಟು ಅಲ್ಪಸಂಖ್ಯಾತರು ಈ ಕಡೆ ಒಲಿದಿದ್ದಾರೆ. ಕೇರಳ ಮತ್ತು ಪಶ್ಚಿಮ ಬಂಗಾಳದಲ್ಲಿ ಸ್ಥಳೀಯ ಕಾರಣಗಳ ಜೊತೆಗೆ ಎಡಪಕ್ಷಗಳ ವಿಶ್ವಾಸಾರ್ಹತೆಯೂ ಅನುಮಾನಗಳನ್ನು ಹುಟ್ಟು ಹಾಕಿದೆ. ಇದಕ್ಕೆ 'ದೂರದೃಷ್ಟಿ ಮತ್ತು ದರ್ಶನಾತ್ಮಕತೆಯಿಂದ ದೂರವಾದ ನಾಯಕತ್ವ'ವೂ ಒಂದು ಕಾರಣವಾಗಿದೆ.

ರಾಜಸ್ಥಾನದಲ್ಲಿ ಕಾಂಗ್ರೆಸ್ ಸರ್ಕಾರವಿದ್ದು, ಅದಕ್ಕೆ ಆಡಳಿತ ವಿರೋಧಿ ಅಲೆಯೂ ಕಡಿಮೆ ಇದ್ದುದರಿಂದ ಬಿಜೆಪಿಗಿಂತ ಕಾಂಗ್ರೆಸ್ ಹೆಚ್ಚು ಸ್ಥಾನಗಳನ್ನು ಗಳಿಸಿತು. ಮಧ್ಯಪ್ರದೇಶದಲ್ಲಿ ಬಿ.ಜೆ.ಪಿ. ಸರ್ಕಾರವಿದ್ದರೂ ಕಾಂಗ್ರೆಸ್ ಸಾಕಷ್ಟು ಸ್ಪರ್ಧೆ ನೀಡಿತು. ಹೀಗಾಗಿ ಬಿ.ಜೆ.ಪಿ.ಯು 'ತುಂಬಾ' ಮುನ್ನಡೆ ಸಾಧಿಸಲಾಗಲಿಲ್ಲ. ನಿರೀಕ್ಷಿಸಿದಂತೆ ಗುಜರಾತ್ ಮುನ್ನಡೆ ನೀಡಿದ್ದರೂ ಬಿ.ಜೆ.ಪಿ.ಯವರು ಅಂದುಕೊಂಡಂತೆ ಕಾಂಗ್ರೆಸ್ ಕುಗ್ಗಿಹೋಗಲಿಲ್ಲ. 'ಮೋದಿ ಮೋಡಿ' ಎನ್ನುವುದು ಕಳೆದ ಸಾರಿಗಿಂತ ಒಂದು ಸ್ಥಾನವನ್ನಷ್ಟೇ ಹೆಚ್ಚು ಮಾಡಿತು (೧೫) ಕಾಂಗ್ರೆಸ್ ಕಳೆದ ಸಾರಿಗಿಂತ ಒಂದು ಸ್ಥಾನವನ್ನು ಕಳೆದುಕೊಂಡಿತು (೧೧).

ಕರ್ನಾಟಕವೂ ಗುಜರಾತ್‌ಗಿಂತ ಹೆಚ್ಚೇನೂ ವ್ಯತ್ಯಾಸ ಮಾಡಲಿಲ್ಲ. ಮೋದಿಯವರನ್ನು 'ಮಾಡೆಲ್' ಮಾಡಿಕೊಂಡ ಯಡ್ಯೂರಪ್ಪನವರು ಮೋದಿಯವರಂತೆಯೇ ಒಂದು ಸ್ಥಾನ ಹೆಚ್ಚಿಗೆ ಗಳಿಸಿಕೊಟ್ಟರು (೧೯). ದೇವೇಗೌಡರು, ಕುಮಾರಸ್ವಾಮಿಯವರು ಸೇರಿ ಕಳೆದ ಬಾರಿಗಿಂತ ಒಂದು ಸ್ಥಾನ ಹಚ್ಚು ಗಳಿಸಿದರು (೩) ಕಳೆದ ಸಾರಿಗಿಂತ ಸ್ವಲ್ಪವಾದರೂ ಹೆಚ್ಚು ಸ್ಥಾನ ಗಳಿಸುತ್ತೇವೆಂದುಕೊಂಡಿದ್ದ ಕಾಂಗ್ರೆಸ್ ಎರಡು ಸ್ಥಾನ ಕಡಿಮೆ ಗಳಿಸಿ ತನ್ನ ಪರಂಪರೆಯನ್ನು ಕಾಯ್ದುಕೊಂಡಿತು (೬). ಕರ್ನಾಟಕದಿಂದ ಹೆಚ್ಚು ಜನರನ್ನು




ಆಯ್ಕೆ ಮಾಡಿಸಿ ಎಲ್. ಕೆ. ಅಡ್ವಾನಿಯವರನ್ನು ಪ್ರಧಾನಿ ಪಟ್ಟದಲ್ಲಿ ಕಾಣಬೇಕೆಂದು ಕನಸಿದ್ದ ಯಡ್ಯೂರಪ್ಪನವರು ಹೆಚ್ಚು ಸ್ಥಾನ ಗೆಲ್ಲುವಷ್ಟಕ್ಕೇ ಸಮಾಧಾನ ಪಡಬೇಕಾಯಿತು. ಕರ್ನಾಟಕ ಕಂಡ ಅತ್ಯಂತ ಭ್ರಷ್ಟ ಚುನಾವಣೆಯೆಂಬ ಕುಖ್ಯಾತಿಯನ್ನೂ ನಮ್ಮ ರಾಜ್ಯ ಗಳಿಸಬೇಕಾಯಿತು. ಕರ್ನಾಟಕವು ಕೊಟ್ಟಿರುವ ಲೋಕಸಭಾ ಚುನಾವಣೆಯ ಫಲಿತಾಂಶವು ಒಂದು ಆಘಾತಕರ ಅಂಶವನ್ನು ಒಳಗೊಂಡಿದೆ. ಮೂರೂ ಪಕ್ಷಗಳಿಂದ ಗೆದ್ದಿರುವ ಅಭ್ಯರ್ಥಿಗಳು ಯಾವ್ಯಾವ ಸಾಮಾಜಿಕ ನೆಲೆಗೆ ಸೇರಿದವರೆಂಬುದನ್ನು ಒಮ್ಮೆ ಗಮನಿಸಿ. ಬಿ.ಜೆ.ಪಿ.ಯಲ್ಲಿ ಗೆದ್ದು ಬಂದಿರುವವರಲ್ಲಿ ಮೀಸಲು ಕ್ಷೇತ್ರಗಳನ್ನು ಹೊರತು ಪಡಿಸಿದರೆ ಉಳಿದಂತೆ ಪ್ರಧಾನವಾಗಿ ಲಿಂಗಾಯತರು, ಅನಂತರದಲ್ಲಿ ಬ್ರಾಹ್ಮಣರು ಇದ್ದಾರೆ. ಜಾತ್ಯತೀತ ಜನತಾದಳದ ಮೂವರೂ ಒಕ್ಕಲಿಗರಾಗಿದ್ದಾರೆ. ಕಾಂಗ್ರೆಸ್‌ನಲ್ಲಿ ಗೆದ್ದವರು ದಲಿತರು ಮತ್ತು ಹಿಂದುಳಿದವರು ಮಾತ್ರ. ಯಾವುದೇ ಒಂದು ಜಾತಿಯವರು ನೂರಕ್ಕೆ ನೂರು ಒಂದೇ ಪಕ್ಷವನ್ನು ಬೆಂಬಲಿಸುತ್ತಾರೆಂದು ಹೇಳಿದರೆ ಆಯಾ ಜಾತಿಗೆ ಸೇರಿದ ಪ್ರಜ್ಞಾವಂತರಿಗೆ ಅವಮಾನ ಮಾಡಿದಂತಾಗುತ್ತದೆ. ಆದರೆ ಒಂದು ಜಾತಿಯ 'ಬಹುಸಂಖ್ಯಾತರು' ತಂತಮ್ಮ ಜಾತಿಮೋಹಕ್ಕೆ ಕಟಿಬದ್ಧರಾದಾಗ ಕರ್ನಾಟಕದಲ್ಲಿ ಬಂದಿರುವಂತಹ ಫಲಿತಾಂಶ ಬರುತ್ತದೆ. ಆಗ ಆಯಾ ಜಾತಿಯಲ್ಲಿರುವ 'ಅಲ್ಪ ಸಂಖ್ಯಾತರು' ಅನಾಥ ಪ್ರಜ್ಞೆಗೆ ಒಳಗಾಗಿ ನರಳಬಹುದು. ಮುಂದೊಂದು ದಿನ ಉಳಿದವರಂತೆಯೇ ಆಗುವ ಅನಿವಾರ್ಯ ಬರಬಹುದು. ಹಾಗೇನಾದರೂ ಆದರೆ ಎಂಥ ದುರಂತ ! ಈಗಲೇ ಒಂದು ದುರಂತ ಕಣ್ಣೆದುರಿಗಿದೆ. ಪ್ರಬಲ ಜನಾಂಗಗಳ ಧ್ರುವೀಕರಣ ನಡೆಯುತ್ತಿದೆ. ಹಿಂದುಳಿದವರು, ದಲಿತರು ಮತ್ತು ಅಲ್ಪಸಂಖ್ಯಾತರಿಂದ ವಿಶೇಷ ಶಕ್ತಿ ಪಡೆದು ಪ್ರಬಲ ಕೋಮುಗಳನ್ನೂ ಉಳಿಸಿಕೊಳ್ಳುತ್ತ ಬಂದು ಸಮತೋಲನ ಸಾಧಿಸಿದ್ದ ಕಾಂಗ್ರೆಸ್‌ಗೆ ಈಗ ಲಭ್ಯವಾದ ಫಲಿತಾಂಶ 'ಕೈ' ಎಲ್ಲಿದೆ ಮತ್ತು ಯಾರು 'ಕೈ' ಹಿಡಿದಿದ್ದಾರೆ ಎಂಬುದರ ಸಂಕೇತವಾಗಿದೆ. ಇತ್ತೀಚಿನ ವರ್ಷಗಳಲ್ಲಿ ಕೇಂದ್ರದ ಕಾಂಗ್ರೆಸ್ ಸರ್ಕಾರ ಪ್ರತಿಪಾದಿಸುತ್ತ ಬಂದ ಆರ್ಥಿಕ ನೀತಿಗಳ ಬಗ್ಗೆ ಭಿನ್ನಾಭಿಪ್ರಾಯವಿದ್ದರೂ ಸಾಮಾಜಿಕವಾಗಿ ಅದು ಎಲ್ಲ ವಲಯಗಳ ಪ್ರಾತಿನಿಧ್ಯವನ್ನು ಸಾಕಷ್ಟು ಒಳಗೊಂಡ ಪಕ್ಷವಾಗಿದೆಯೆಂಬುದನ್ನು ಅಲ್ಲಗಳೆಯಲಾಗದು. ಕರ್ನಾಟಕದ ಮಟ್ಟಿಗೆ ಈ ಮಾತು ಇನ್ನಷ್ಟು ನಿಜ.

ಡಾ|| ಮನಮೋಹನ್ ಸಿಂಗ್ ನೇತೃತ್ವದ, ಕಾಂಗ್ರೆಸ್ ಪ್ರಾಬಲ್ಯವಿರುವ ಯು.ಪಿ.ಎ. ಸರ್ಕಾರ ಈಗ ಅಸ್ತಿತ್ವಕ್ಕೆ ಬಂದಿದೆ. ಆರ್ಥಿಕ ಸುಧಾರಣೆಯ ಹೆಸರಿನಲ್ಲಿ ಬಡವರ ಬದುಕನ್ನು ಮರೆತರೆ ಕಾಂಗ್ರೆಸ್ ಪಕ್ಷವು ತನ್ನ 'ಕೈ' ಹಿಡಿದವರನ್ನು ಕೈ ಬಿಟ್ಟಂತಾಗುತ್ತದೆ. ಸಮಾನತೆ ಮತ್ತು ಸಾಮರಸ್ಯಕ್ಕೆ ಧಕ್ಕೆ ತರುವ ಯಾವುದೇ ಸುಧಾರಣೆ, ನಿಜವಾದ ಅರ್ಥದಲ್ಲಿ ಸುಧಾರಣೆಯಾಗಿರುವುದಿಲ್ಲ. ಸಜ್ಜನಿಕೆ, ಸಂಭಾವಿತ ನಡೆ-ನುಡಿಗಳಿಂದ ಪ್ರಿಯರಾಗಿರುವ ಮನಮೋಹನ ಸಿಂಗ್ ಅವರು ಜನಸಾಮಾನ್ಯರ ಪ್ರತಿನಿಧಿಯಂತೆ ಕೆಲಸ ಮಾಡಿದರೆ ಕಾಂಗ್ರೆಸ್‌ಗೂ ಒಳ್ಳೆಯದು, ದೇಶಕ್ಕೂ ಒಳ್ಳೆಯದು. ಮನಮೋಹನ ಸಿಂಗ್ ಸರ್ಕಾರವು ಈ ಸಾರಿಯ ಫಲಿತಾಂಶವನ್ನು ಸರಿಯಾಗಿ ಗ್ರಹಿಸಿದರೆ ಸರಿಯಾದ ದಾರಿಯಲ್ಲಿ ಹೋಗುತ್ತದೆ.

ಈಗ ನೋಡಿ : ಮನಮೋಹನ್ ಸಿಂಗ್ ಸರ್ಕಾರದ ಬಹು ಮುಖ್ಯ ಸಾಧನೆಯೆಂದು ಬಿಂಬಿತವಾಗಿದ್ದ ಅಮೇರಿಕ ಜೊತೆಗಿನ ಅಣು ಒಪ್ಪಂದವನ್ನು ಸ್ವತಃ ಕಾಂಗ್ರೆಸ್ ಪಕ್ಷವೇ ತನ್ನ ಪ್ರಣಾಳಿಕೆಯಲ್ಲಿ ಮತ್ತು ಪ್ರಚಾರದಲ್ಲಿ ದೊಡ್ಡದಾಗಿ ಬಿಂಬಿಸಲಿಲ್ಲ. ರೈತರ ಸಾಲಮನ್ನಾ ಯೋಜನೆ, ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ, ಬಡವರಿಗೆ ಮೂರು ರೂಪಾಯಿಗೆ ಒಂದು ಕೆ. ಜಿ. ಅಕ್ಕಿ ಕೊಡುವ ಆಶ್ವಾಸನೆ, ಐದುವರ್ಷ ಹಗರಣ ರಹಿತ ಆಡಳಿತ ನಡೆಸಿದ ಸಾಧನೆ – ಇವೇ ಮುಂತಾದವು ಮುಂಚೂಣಿಯಲ್ಲಿದ್ದವು. ಆರ್ಥಿಕ ಸುಧಾರಣೆಯ ಹೆಸರಿನಲ್ಲಿ ಮಾಡಿದ ಯಾವ 'ಸಾಧನೆ'ಗಳೂ ಮತದಾರರ ಮುಂದಿರಲಿಲ್ಲ. ಈ ಕಟುವಾಸ್ತವವನ್ನು ಅರ್ಥಮಾಡಿಕೊಂಡರೆ ಆರ್ಥಿಕ ಸುಧಾರಣೆಯನ್ನು ಬಂಡವಾಳಗಾರರ ಬೆಲೆವೆಣ್ಣು ಮಾಡುವ ಬದಲು ಜನಸಾಮಾನ್ಯರ ಜೀವಶಕ್ತಿಯಾಗಿಸುವುದು ಹೇಗೆಂದು ಚಿಂತಿಸಲು ಸಾಧ್ಯವಾಗುತ್ತದೆ.

ಮನಮೋಹನ್ ಸಿಂಗ್ ಅವರು ಚುನಾವಣೆಗಳು ಪ್ರಾರಂಭವಾದಾಗ ಪ್ರಾದೇಶಿಕ ಪಕ್ಷಗಳು ರಾಷ್ಟ್ರಕ್ಕೆ ಮಾರಕ ಎಂಬಂತೆ ಮಾತಾಡಿದರು. ಅನಂತರ ತಿದ್ದಿಕೊಂಡು 'ಪ್ರಾದೇಶಿಕ ಪಕ್ಷಗಳು ಇಂದಿನ ವಾಸ್ತವ' ಎಂದರು. ಈ ಚುನಾವಣೆಯ ಫಲಿತಾಂಶದಿಂದ ಪ್ರಾದೇಶಿಕ ಪಕ್ಷಗಳೆಂದು ಪ್ರತಿನಿಧಿಸಿಕೊಂಡಿದ್ದವರ ಶಕ್ತಿ ಕ್ಷೀಣವಾಗಿದೆಯೆಂದು ಮನಮೋಹನ್ ಸಿಂಗ್ ಸರ್ಕಾರ ಮೈದುಂಬಬಾರದು. ನನಗನ್ನಿಸಿದಂತೆ ಇಲ್ಲೀವರೆಗೆ ಯಾವ ಪಕ್ಷಗಳೂ ಪ್ರಾದೇಶಿಕತೆಯನ್ನು ಸಮರ್ಥವಾಗಿ ಪ್ರತಿನಿಧಿಸಿಲ್ಲ. ನಮ್ಮ ಸಂವಿಧಾನವು ಒಕ್ಕೂಟ ವ್ಯವಸ್ಥೆಯನ್ನು ನೀಡಿದೆ. ರಾಷ್ಟ್ರಮಟ್ಟದಲ್ಲಿ 'ಸಂಯುಕ್ತ ಸರ್ಕಾರ' ಇರುತ್ತದೆಯೇ ಹೊರತು ರೂಢಿಯಲ್ಲಿ ಕರೆಯುವಂತೆ ಕೇಂದ್ರ ಸರ್ಕಾರವಲ್ಲ. ಒಕ್ಕೂಟ ವ್ಯವಸ್ಥೆಯಲ್ಲಿ ರಾಜ್ಯಗಳಿಗೆ ತಮ್ಮದೇ ಆದ ಅಸ್ತಿತ್ವವಿರುತ್ತದೆ. ಅವು 'ಕೇಂದ್ರ'ದ ಅಡಿಯಾಳಲ್ಲ. ಪ್ರಾದೇಶಿಕತೆ ಎನ್ನುವುದು ಸಾಮಾಜಿಕ, ಸಾಂಸ್ಕೃತಿಕ ವೈಶಿಷ್ಟ್ಯಗಳಿಗೂ ಸಂಬಂಧಿಸಿದ್ದು, ಆಡಳಿತಾತ್ಮಕ ಮತ್ತು ಆರ್ಥಿಕ ವಿಷಯಗಳಿಗೂ ಸಂಬಂಧಿಸಿದ್ದು ಪ್ರಾದೇಶಿಕತೆ ರಾಷ್ಟ್ರೀಯತೆಗೆ ವಿರುದ್ಧವಾಗಬೇಕಿಲ್ಲ. ಯಾಕೆಂದರೆ ಅದೂ ಒಂದು ರಾಷ್ಟ್ರೀಯತೆ. ಬಹುರೂಪತೆಯೇ ಭಾರತೀಯತೆ. ಏಕರೂಪತೆ ಅಲ್ಲ. ಈ ಸೈದ್ಧಾಂತಿಕತೆಯ ಮೇಲೆ ಕಟ್ಟಿದರೆ ಅದು ಪ್ರಾದೇಶಿಕ ಪಕ್ಷ. ಆದರೆ ನಮ್ಮ 'ಪ್ರಾದೇಶಿಕ ಪಕ್ಷ'ಗಳು 'ಕೇಂದ್ರ ಸರ್ಕಾರ'ದ ಕೈ ಕೆಳಗೆ ಇರುತ್ತವೆ, ಇಲ್ಲವೆ ಚೌಕಾಶಿ ರಾಜಕೀಯದಲ್ಲಿ ತೊಡಗುತ್ತವೆ. 'ಕೇಂದ್ರ ಸರ್ಕಾರ'ವು ತಮ್ಮ ಪಕ್ಷವನ್ನು ಅವಲಂಬಿಸಬೇಕಾಗಿ ಬಂದಾಗ ಚೌಕಾಶಿ ರಾಜಕೀಯ ಜಾಸ್ತಿಯಾಗುತ್ತದೆ. ಇದನ್ನು ಪ್ರಾದೇಶಿಕ ಪಕ್ಷಗಳ ಜಯ ಎಂದು ಬಿಂಬಿಸಲಾಗುತ್ತದೆ ! ವಾಸ್ತವ ಬೇರೆಯೇ ಇರುತ್ತದೆ.

ಈಗ ಬಂದಿರುವ ಯು.ಪಿ.ಎ. ಸರ್ಕಾರವು ಒಕ್ಕೂಟ ವ್ಯವಸ್ಥೆಯನ್ನು ಸರಿಯಾಗಿ ಗ್ರಹಿಸಿ ಆಡಳಿತ ನಡೆಸಬೇಕು. ವಿವಿಧ ಪ್ರಾದೇಶಿಕ ಅಗತ್ಯಗಳನ್ನು ನಿರ್ಲಕ್ಷ್ಯ ಮಾಡಬಾರದು. ರಾಷ್ಟ್ರ ಮಟ್ಟದಲ್ಲಿ ಪ್ರಾದೇಶಿಕ ಅಸಮತೋಲನಕ್ಕೆ ಅವಕಾಶವಿರಬಾರದು.

ಈ ಸಾರಿಯ ಚುನಾವಣೆಯಲ್ಲಿ ಬಿ.ಜೆ.ಪಿ.ಯು ಭಯೋತ್ಪಾದನೆಯ ವಿಷಯವನ್ನು ಮುಂದುಮಾಡಿತು. ಮನಮೋಹನ್ ಸಿಂಗ್ ಅವರನ್ನು 'ದುರ್ಬಲ' ಎಂದು ಜರೆದು 'ಉಕ್ಕಿನ ಮನುಷ್ಯ'ನನ್ನು ಪರ್ಯಾಯವಾಗಿ ಮುಂದೆ ತಂದಿತು. ಸ್ವಿಸ್ ಬ್ಯಾಂಕ್‌ನಿಂದ ಕಪ್ಪು ಹಣ ವಾಪಸ್ ತರುತ್ತೇವೆಂದಿತು. ಕೈ ಕತ್ತರಿಸಬೇಕೆಂದು ಭಾಷಿಕ ಹಿಂಸಾಚಾರಕ್ಕೆ ನಾಂದಿಹಾಡಿದ ವರುಣ ಗಾಂಧಿಯವರನ್ನೂ ಮುಂಚೂಣಿ ಪ್ರಚಾರಕರನ್ನಾಗಿಸಿತು. ಆದರೆ ಆದದ್ದೇನು ? ನಿರೀಕ್ಷೆಯಂತೆ ಕರ್ನಾಟಕ ಮತ್ತು ಗುಜರಾತ್ ಬಿಟ್ಟರೆ ಬೇರೆಲ್ಲೂ ಬಹು ಜನರು ಕಿವಿಗೊಡಲಿಲ್ಲ. ಭಯೋತ್ಪಾದನೆಯ ಸಮಸ್ಯೆಯನ್ನು ಒಂದು ಪಕ್ಷದ ತಲೆಗೆ ಕಟ್ಟುವುದು ಜನರಿಗೆ ಇಷ್ಟವಾಗಲಿಲ್ಲ. ಸಜ್ಜನ ಪ್ರಧಾನ ಮಂತ್ರಿಯನ್ನು 'ದುರ್ಬಲ' ಎಂದು ಒಂದೇ ಸಮ ಜರೆದದ್ದು ಪಥ್ಯವಾಗಲಿಲ್ಲ. ಎದುರಿಗೇ ಕಪ್ಪು ಹಣದ ಖದೀಮರು ಇರುವಾಗ ಸ್ವಿಸ್ ಬ್ಯಾಂಕ್ ಬಹುದೂರ ಎನ್ನಿಸಿ ಮನಸ್ಸಿಗೆ ತಟ್ಟಲಿಲ್ಲ. ಹೊಡಿ ಬಡಿ ಎಂದವರು ಯಾವುದೇ ಪಕ್ಷದವರಾದರೂ ಸರಿ ಅನ್ನಿಸಲಿಲ್ಲ. (ವರುಣ ಗಾಂಧಿ ಗೆದ್ದದ್ದು ಬೇರೆ. ಆದರೆ ಆತ ಪ್ರಚಾರ ಮಾಡಿದ ಕಡೆಯೆಲ್ಲಾ ಗೆಲ್ಲಲಿಲ್ಲ.) ಹೀಗೆ ಬಹುಜನರು ಬೇರೆಯೇ ರೀತಿಯಲ್ಲಿ ಯೋಚಿಸಿ ಕಾಂಗ್ರೆಸ್ ನೇತೃತ್ವದ ಯು.ಪಿ.ಎ. ಸರ್ಕಾರವನ್ನು ಅಧಿಕಾರಕ್ಕೆ ತಂದಿದ್ದಾರೆ. ಯಾಕೆ ತಮ್ಮನ್ನು ಅಧಿಕಾರಕ್ಕೆ ತಂದರು ಎಂಬ ಬಗ್ಗೆ ಯು.ಪಿ.ಎ. ಆತ್ಮಾವಲೋಕನ ಮಾಡಿಕೊಳ್ಳಬೇಕು. ಯಾಕೆ ತನ್ನನ್ನು ಸೋಲಿಸಿದರು ಎಂದು ಎನ್.ಡಿ.ಎ. ಆತ್ಮಾವಲೋಕನ ಮಾಡಿಕೊಳ್ಳಬೇಕು. ಈ ಎರಡು ಭಿನ್ನ ಆತ್ಮಾವಲೋಕನಗಳಿಂದ ಅವರ ಆತ್ಮಗಳನ್ನು ಹುಡುಕಿಕೊಂಡಂತಾಗುತ್ತದೆ. ದೇಶಕ್ಕೂ ಆತ್ಮವಿದೆಯೆಂದು ಅರಿವಾಗುತ್ತದೆ. ಅರಿವೇ ಗುರುವಾಗಿ ಜನರಿಗೆ ಒಳ್ಳೆಯದಾಗುತ್ತದೆ.

**ಪ್ರೊ|| ಬರಗೂರು ರಾಮಚಂದ್ರಪ್ಪ**
'ಸಂವೇದನೆ', ೨೭೫, ೧೧ 'ಬಿ' ಕ್ರಾಸ್, ೧೪ನೇ ಮುಖ್ಯರಸ್ತೆ, ಜೆ. ಪಿ. ನಗರ ೨ನೇ ಹಂತ
ಬೆಂಗಳೂರು - ೫೬೦ ೦೭೮



ನಭಾವಲೋಕನ

# ಬುಧ ಗ್ರಹದ ವೀಕ್ಷಣೆಯ ಅವಕಾಶ

**ಈ** ತಿಂಗಳಲ್ಲಿ ಸಂಜೆ ಕಾಣುವ ಗ್ರಹ ಶನಿ ಒಂದೇ. ಅದೂ ಬಹಳ ಮಂಕಾಗಿದೆ. ಆದ್ದರಿಂದ ಆಕಾಶದಲ್ಲಿ ಬಹಳ ಆಕರ್ಷಕ ಎನ್ನಿಸುವ ಯಾವುದೇ ಕಾಯ ಇಲ್ಲವಲ್ಲ ಎನ್ನಿಸಬಹುದು. ಆದರೆ ಉತ್ತರದ ಸಪ್ತರ್ಷಿ ಮಂಡಲ ಈ ಕೊರತೆಯನ್ನು ತುಂಬುತ್ತದೆ. ದಕ್ಷಿಣದಲ್ಲಿ ತ್ರಿಶಂಕು ಮತ್ತು ಕಿನ್ನರಗಳು ಮಾಲೆಯ ಹಾಗೆ ಕಂಗೊಳಿಸುವುವು. ತ್ರಿಶಂಕು ಎಂಬುದು ಶಿಲುಬೆ ಆಕಾರದಲ್ಲಿರುವುದರಿಂದ ಗುರುತಿಸುವುದು ಸುಲಭ; ಅದರ ಪಕ್ಕದ ಎರಡು ಪ್ರಕಾಶಮಾನ ನಕ್ಷತ್ರಗಳೇ ಕಿನ್ನರ ಪುಂಜದ ಪ್ರಥಮ ಮತ್ತು ದ್ವಿತೀಯ ನಕ್ಷತ್ರಗಳು. ಆಲ್ಫಾ ಮತ್ತು ಬೀಟಾ ಸೆಂಟಾರಿ ಎಂದು ಪರಿಚಿತ. ಆಲ್ಫಾ ಎಂಬುದು ನಮ್ಮ ಸೌರಮಂಡಲಕ್ಕೆ ಅತಿ ಸಮೀಪದ ನಕ್ಷತ್ರ. ನೆತ್ತಿಯ ಮೇಲೆ ಕಾಣುವ ಪುಂಜ ಸಿಂಹ; ಶನಿ ಅದೇ ಪುಂಜದಲ್ಲಿದೆ. ನೆತ್ತಿಯಲ್ಲಿ ಕಾಣುವ ಇನ್ನೆರಡು ಪ್ರಕಾಶಮಾನ ನಕ್ಷತ್ರಗಳು ಚಿತ್ರಾ ಮತ್ತು ಸ್ವಾತಿ. ಇವೆರಡರ ಬಣ್ಣದ ವ್ಯತ್ಯಾಸವನ್ನು ಗುರುತಿಸಲು ಇದು ಒಳ್ಳೆಯ ಅವಕಾಶ. ಪೂರ್ವದ ಅಂಚಿಗೆ (ಆಗ್ನೇಯ ಎನ್ನಬಹುದು) ಕಾಣುವ ವೃಶ್ಚಿಕರಾಶಿಯ ಸೊಬಗು ಗಮನೀಯ. ಮುಂದಿನ ತಿಂಗಳುಗಳಲ್ಲಿ ಇದು ಇನ್ನೂ ಮೇಲೇರಿ ಚೆನ್ನಾಗಿ ಕಾಣುವ ಸಾಧ್ಯತೆ ಇದೆ ಯಾದರೂ ಮೋಡದ ಅಡಚಣೆ ಉಂಟು. ಈಗ ಇನ್ನೂ ಮಳೆಯ ಆರಂಭ. ಹುಣ್ಣಿಮೆಯ ಚಂದ್ರ ಜ್ಯೇಷ್ಠಾ ಪಕ್ಕದಲ್ಲೇ ಕಾಣುವುದರಿಂದಲೇ ಇದು ಜ್ಯೇಷ್ಠಮಾಸ ಎಂದಾಗುತ್ತದೆ. ಅಂದು ಜ್ಯೇಷ್ಠಾವನ್ನು ಚಂದ್ರ ಮರೆಮಾಡುವ ಆಚ್ಛಾದನೆ ಇದೆ; ಆದರೆ ನಮಗೆ ಮಾತ್ರ ಎರಡೂ ಸಮೀಪ ಇರುವಂತೆ ಮಾತ್ರ ಕಾಣುತ್ತದೆ.




ಬೆಳಗಿನ ಜಾವ ಬೇಗ ಏಳುವವರಿಗೆ ಈ ತಿಂಗಳಲ್ಲಿ ಒಂದೆರಡು ಒಳ್ಳೆಯ ನೋಟಗಳಿವೆ. ಯಾರ ಸಹಾಯವೂ ಇಲ್ಲದೆ ಸುಲಭವಾಗಿ ಗುರುತಿಸಬಹುದಾದ ಗ್ರಹಗಳು ಗುರು ಮತ್ತು ಶುಕ್ರ – ಇವೆರಡನ್ನೂ ನೋಡಬಹುದು. ಮೊದಲ ವಾರದಿಂದಲೇ ಗಮನಿಸುತ್ತಾ ಬಂದರೆ ಒಂದು ಕೌತುಕ ಕಾಣುವುದು. ಚುಕ್ಕೆಯೊಂದು ಶುಕ್ರವನ್ನು ಸಮೀಪಿಸುವುದು. ಅವೆರಡರ ನಡುವೆ ಜೂಟಾಟ ನಡೆಯುವುದು. ತಿಂಗಳುದ್ದಕ್ಕೂ ಇದನ್ನು ಕಂಡು ಆನಂದಿಸಬಹುದು. ಈ ಚುಕ್ಕೆಯೇ ಮಂಗಳ ಗ್ರಹ. ಇದು ಕ್ರಮೇಣ ಹೆಚ್ಚು ಪ್ರಕಾಶಮಾನವಾಗುವುದನ್ನು ಗಮನಿಸುತ್ತಾ ಬನ್ನಿ. ೧೯ರಂದು ಚಂದ್ರ ಇವುಗಳೊಡನೆ ಜೋಡಿಯಾಗುತ್ತದೆ.

೧೯ರ ಮುಂಜಾವು ಮಂಗಳ, ಶುಕ್ರ, ಚಂದ್ರ

ಇನ್ನೊಂದು ಚುಕ್ಕೆ ದಿಗಂತದಿಂದ ಕ್ರಮೇಣ ಮೇಲೇರತೊಡಗುವುದು. ೧೩ರಂದು ಶುಕ್ರದ ಅರ್ಧದಷ್ಟು ಎತ್ತರದಲ್ಲಿ ಕಾಣುವುದು. ಆಮೇಲೆ ಪುನಃ ಕ್ರಮೇಣ ಕೆಳಗಿಳಿಯತೊಡಗುವುದು. ಅದೇ ಬುಧ ಗ್ರಹ. ೨೧ರ ಹೊತ್ತಿಗೆ ಚಂದ್ರ ಬುಧದ ಸಮೀಪಕ್ಕೆ ಸರಿಯುವುದು. ಆಗ ನೀವು ಕಂಡದ್ದು ಬುಧಗ್ರಹವೇ ಎಂದು ಖಚಿತಪಡಿಸಿಕೊಳ್ಳಬಹುದು. ಈ ತಿಂಗಳ ಹಗಲುಗಳು ದೀರ್ಘ – ಸೆಖೆಯೂ ಹೆಚ್ಚು; ಬೇಸಿಗೆ ಮುಗಿದರೆ ಸಾಕು ಎನಿಸುವುದಲ್ಲವೇ ? ಜೂನ್ ೨೧ಕ್ಕೆ ಸೂರ್ಯನ ಸ್ಥಾನ ಉತ್ತರದ ಗರಿಷ್ಠ ಬಿಂದುವಿನಲ್ಲಿ. ಆ ಮುಂದೆ ಪುನಃ ಸೂರ್ಯ ದಕ್ಷಿಣಕ್ಕೆ ಹೊರಡುತ್ತದೆ. ಆದ್ದರಿಂದ ಅಂದು ದಕ್ಷಿಣಾಯನ.

ಜೂನ್ ತಿಂಗಳಲ್ಲಿ ಕಾಣುವ ಉಲ್ಕಾ ವೃಷ್ಟಿಗೆ ಬೂಟಿಡ್ಸ್ ಎಂಬ ಹೆಸರಿದೆ. ಉಲ್ಕೆಗಳು ಬೂಟೆಸ್ (ಸಹದೇವ) ಪುಂಜದಿಂದ ಹೊರಟಂತೆ ಕಾಣುತ್ತವೆ. ಸ್ವಾತಿ ನಕ್ಷತ್ರ ಇರುವುದು ಸಹದೇವ ಪುಂಜದಲ್ಲಿ (ನಕ್ಷೆ ನೋಡಿ). ಅಂದರೆ ಉಲ್ಕೆಗಳು ಸಂಜೆಯೇ ಕಾಣುತ್ತವೆ. (ಸಾಧಾರಣವಾಗಿ ಉಲ್ಕೆಗಳ ಸಂಖ್ಯೆ ಬೆಳಗಿನ ಜಾವ ಹೆಚ್ಚು). ಈ ವೃಷ್ಟಿಗೆ ಕಾರಣ ಪಾನ್ಸ್-ವಿನ್ನೆಕೆ ಎಂಬ ಹೆಸರಿನ ನಿಯತಕಾಲಿಕ ಧೂಮಕೇತು ಬಿಟ್ಟು ಹೋದ ತುಣುಕುಗಳು. ಈ ಧೂಮಕೇತು, ೧೯೯೮ರಲ್ಲಿ, ೨೦೦೪ರಲ್ಲಿ ಮತ್ತು ೨೦೦೮ರಲ್ಲಿ ಬಂದು ಹೋದಾಗಲೆಲ್ಲ ದೂಳನ್ನು ತನ್ನ ಕಕ್ಷೆಯಲ್ಲಿ ಉಳಿಸಿಹೋಗಿದೆ. ಜೂನ್ ಕೊನೆಯ ವಾರದಲ್ಲಿ ಭೂಮಿ ಈ ದೂಳಿನ ಸಂಗ್ರಹವನ್ನು ಸಮೀಪಿಸುವುದರಿಂದ ಉಲ್ಕಾವೃಷ್ಟಿ ಉಂಟಾಗುತ್ತದೆ. ಜೂನ್ ೨೭ರಂದು ಗರಿಷ್ಠ ಅಂದರೆ ಗಂಟೆಗೆ ೨೦ ಉಲ್ಕೆಗಳು ಬೀಳಬಹುದು. ಕಳೆದ ವರ್ಷ ಇದ್ದಕ್ಕಿದ್ದಂತೆ ೧೦೦ಕ್ಕೂ ಹೆಚ್ಚು ಉಲ್ಕೆಗಳು ಬಿದ್ದವು; ಆದ್ದರಿಂದ ಈ ಬಗ್ಗೆ ಹೆಚ್ಚಿನ ಆಸಕ್ತಿ ಉಂಟಾಗಿದೆ.

**ಖಗೋಳ ದಿನಚರಿ**

೩ ಚಂದ್ರನ ಪಕ್ಕ ಚಿತ್ರಾ ನಕ್ಷತ್ರ
೫ ಶುಕ್ರದ ಗರಿಷ್ಠ ಕೋನೋನ್ನತಿ *
೭ ಹುಣ್ಣಿಮೆ ೨೩:೪೨ಕ್ಕೆ ಚಂದ್ರನ ಪಕ್ಕದ ನಕ್ಷತ್ರ ಜ್ಯೇಷ್ಠಾ
೧೦ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೧೩ ಬುಧದ ಗರಿಷ್ಠ ಕೋನೋನ್ನತಿ *
ಗುರು ಚಂದ್ರ ಜೋಡಿ *
೧೫ ಚಾಂದ್ರಮಾಸದ ಕೊನೆಯ ಪಾದ
೧೯ ಶುಕ್ರ - ಚಂದ್ರ - ಮಂಗಳ ಪುಟ್ಟ ಗುಂಪು *
೨೧ ದಕ್ಷಿಣಾಯನ ೧೧:೧೬ಕ್ಕೆ
ಬುಧ, ರೋಹಿಣಿ, ಚಂದ್ರ ಪುಟ್ಟ ಗುಂಪು *
೨೩ ಅಮಾವಾಸ್ಯೆ ೦೧:೦೫ಕ್ಕೆ
೨೭ ಬೂಟಿಡ್ಸ್ ಉಲ್ಕಾವೃಷ್ಟಿ
೨೮ ಶನಿ ಚಂದ್ರ ಜೋಡಿ *
೨೯ ಚಾಂದ್ರಮಾಸದ ಮೊದಲ ಪಾದ
( * ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

**ಸಿದ್ಧರಾಗಿ**

ಜುಲೈ ೨೨ರಂದು ಪೂರ್ಣ ಸೂರ್ಯಗ್ರಹಣ ಇದೆ. ಭಾರತದ ಸೂರತ್, ಪಾಟ್ನಾ, ವಾರಾಣಸಿ ಈ ನಗರಗಳಿಂದ ಸೂರ್ಯೋದಯವಾದ ಕೆಲವೇ ನಿಮಿಷಗಳಲ್ಲಿ ಸಂಪೂರ್ಣ ಕತ್ತಲು ಕವಿಯುವ ಅಪೂರ್ವ ದೃಶ್ಯ ಅನಾವರಣವಾಗುವುದು. ಈಗಲೇ ನಿಮ್ಮ ಪ್ರಯಾಣಕ್ಕೆ ಸಿದ್ಧತೆ ಮಾಡಿಕೊಳ್ಳಿ. ಭಾರತದ ಉಳಿದ ಪ್ರದೇಶಗಳಿಂದ ಪಾರ್ಶ್ವ ಗ್ರಹಣ ಮಾತ್ರ ಕಾಣಲಿದೆ.

# ಡಾರ್ವಿನ್ – ೨೦೦

ಪ್ರೊ|| ಎಮ್.ಆರ್.ಎನ್. ಮೂರ್ತಿ



**ಭೂ**ಮಿಯಲ್ಲಿ ಜೀವ ಹೇಗೆ ವಿಕಾಸವಾಯಿತೆಂಬ ಜಟಿಲ ಪ್ರಶ್ನೆಗೆ ಆಧಾರ ಸಹಿತ ವಿವರಣೆ ನೀಡಿದ ಚಾರ್ಲ್ಸ್ ಡಾರ್ವಿನ್ ಜನಿಸಿ ೨೦೦ ವರ್ಷಗಳಾದವು. ಡಾರ್ವಿನ್ನರ ವಿಕಾಸವಾದವನ್ನು ಮಂಡಿಸಿದ ಪುಸ್ತಕ 'ಜೀವತಳಿಗಳ ಉಗಮ' (ಆರಿಜಿನ್ ಆಫ್ ಸ್ಪೀಶೀಸ್) ಪ್ರಕಟವಾಗಿ ೧೫೦ ವರ್ಷಗಳಾದವು. ಆದ್ದರಿಂದ ಈ ಮಹಾವಿಜ್ಞಾನಿಯ ವೈಜ್ಞಾನಿಕ ಸಾಧನೆಗಳನ್ನು ಪರಿಚಯಿಸುವ, ವಿಜ್ಞಾನ, ಸಮಾಜ, ಪರಿಸರ ಹಾಗೂ ನಮ್ಮ ಬದುಕಿಗೆ ವಿಕಾಸವಾದದ ಪ್ರಸ್ತುತತೆಯನ್ನು ತಿಳಿಸಿಕೊಡುವ ಸಮ್ಮೇಳನಗಳು ವಿಶ್ವದಾದ್ಯಂತ ನಡೆಯುತ್ತಲಿವೆ. ನಮ್ಮ ವಿದ್ಯಾರ್ಥಿಗಳಿಗೆ ಪ್ರೌಢಶಾಲೆಯಲ್ಲಿರುವಾಗಲೇ ವಿಕಾಸವಾದವನ್ನು ಬೋಧಿಸುತ್ತಾರೆ. ಆದರೆ ಈ ಬೋಧನೆಯಲ್ಲಿ ಎರಡು ಮುಖ್ಯ ದೋಷಗಳಿವೆ: (೧) ವಿಕಾಸವಾದಕ್ಕೆ ಡಾರ್ವಿನ್ನರ ದಶಕಗಳ ಸಂಶೋಧನೆ, ಚಿಂತನೆಗಳ ಆಧಾರವಿದೆ. ಅವರ ಭೂಗರ್ಭಶಾಸ್ತ್ರದ, ಜೀವಶಾಸ್ತ್ರದ ನಿಕಟ ಪರಿಚಯ ವಿಕಾಸವಾದವನ್ನು ಮಂಡಿಸಲು ಸಹಕಾರಿಯಾದವು. ತಮ್ಮ ಆಳ ಅಧ್ಯಯನದಿಂದ ಈ ಶಾಸ್ತ್ರಗಳಲ್ಲಿ ದೊರಕಿದ ಸಹಸ್ರಾರು ಪುರಾವೆಗಳನ್ನು ವಿಕಾಸವಾದ ಬೆಳೆಸುವುದಕ್ಕೆ ಡಾರ್ವಿನ್ನರು ಬಳಸಿಕೊಂಡರು. ವಿಕಾಸವಾದಕ್ಕಿರುವ ಈ ಆಧಾರಗಳಾವುದನ್ನೂ ವಿದ್ಯಾರ್ಥಿಗಳಿಗೆ ಬೋಧಿಸಲಾಗುವುದಿಲ್ಲ. ಇದೊಂದು ಕಟ್ಟುಕತೆ ಎಂಬ ಭಾವನೆ ಬರುವಂತೆ ವಿಕಾಸವಾದವನ್ನು ವಿವರಿಸುತ್ತಾರೆ. (೨) ವಿಶ್ವದಲ್ಲಿ ನಮ್ಮ ಸ್ಥಾನ ತಿಳಿದುಕೊಳ್ಳಲು ವಿಕಾಸವಾದದ ಅವಶ್ಯಕತೆಯಿದೆ. ಈ ವಿಷಯದಲ್ಲಿ ಜೀವಶಾಸ್ತ್ರ ಪರಿಣತ ಸಿಂಸನ್ನರ ಹೇಳಿಕೆ ಗಮನಾರ್ಹ. ''ನಾವು ಏತಕ್ಕಾಗಿ ಹುಟ್ಟಿದ್ದೇವೆ ? ನಮ್ಮ ಜೀವನದ ಉದ್ದೇಶವೇನು ? ನಮಗೆ ಇಚ್ಛಾಶಕ್ತಿ ಇದೆಯೇ ? ಚೇತನ ಎಂದರೇನು ? ಆತ್ಮ ಎನ್ನುವುದಿದೆಯೇ ? ಸಾಮಾಜಿಕ ಪದ್ಧತಿಗಳು ಏಕೆ ಬೆಳೆದುಬಂದವು ? ಇಂತಹ ಪ್ರಶ್ನೆಗಳಿಗೆ ೧೮೫೯ಕ್ಕೂ ಮೊದಲು (ಡಾರ್ವಿನ್ನರ ಪುಸ್ತಕ ಪ್ರಕಟವಾಗುವ ಮುನ್ನ) ಕೊಟ್ಟ ಉತ್ತರಗಳೆಲ್ಲಾ ನಿರರ್ಥಕ. ನಾವು ಅವುಗಳನ್ನು ಮರೆತರೇ ಒಳಿತು.'' ಈ ಹೇಳಿಕೆ ಉತ್ಪ್ರೇಕ್ಷೆಯಿರಬಹುದು. ಆದರೆ ಇದರಲ್ಲಿ ವಿಕಾಸವಾದದ ಪ್ರಾಮುಖ್ಯತೆಯನ್ನು ಎತ್ತಿ ತೋರಿಸುವ ಉದ್ದೇಶವಿದೆ. ನಮ್ಮ ಶಾಲೆಗಳಲ್ಲಿ ನಡೆಯುವ ಬೋಧನೆ ಡಾರ್ವಿನ್ನರ ವಿಕಾಸವಾದದ ಪ್ರಾಮುಖ್ಯತೆಯ ಪರಿಚಯ ಮಾಡಿಸುವುದಿಲ್ಲ. ಡಾರ್ವಿನ್ನನ ವಾದಕ್ಕೂ, ನಮ್ಮ ಪರಿಸರಕ್ಕೂ ಇರುವ ಸಂಬಂಧಗಳನ್ನು ತಿಳಿಸುವುದಿಲ್ಲ. ಆದ್ದರಿಂದ ವಿದ್ಯಾರ್ಥಿಗಳು ಪಡೆಯುವ ವಿಕಾಸವಾದದ ಪರಿಚಯ ಸ್ವಲ್ಪವೂ ಆಳವಿಲ್ಲದ್ದಾಗುತ್ತದೆ.

ವಿಕಾಸವಾದವನ್ನು ಓದಿರುವ ಮಕ್ಕಳಿಗೆ ಅದರ ಬಗ್ಗೆ ಪ್ರಶ್ನಿಸಿದರೆ 'ಮಂಗನಿಂದ ಮಾನವ' ಎಂಬ ಚುಟುಕಿನ ಉತ್ತರ ದೊರೆಯುತ್ತದೆ. ಮೊದಲನೆಯದಾಗಿ, ಈ ವಿವರಣೆ ಸರಿಯಲ್ಲ. ವಿಕಾಸವಾದ ಮಂಗನಿಂದ ಮಾನವ ಹುಟ್ಟಿಬಂದ ಎನ್ನುವುದಿಲ್ಲ. ವಿಕಾಸವಾದದ ಪ್ರಕಾರ ಇಂದಿನ ಚಿಂಪಾಂಜಿಯಂತಹ ವಾನರ ಕುಲ ಮತ್ತು ಮಾನವ ಎರಡೂ ಒಂದೇ ಪ್ರಾಣಿಕುಲದ ಶಿಶುಗಳು. ಅಂದರೆ ಮನುಷ್ಯ ಮತ್ತು ಮಂಗಗಳಲ್ಲಿ ಸೋದರ ಸಂಬಂಧವಿದೆ ಎಂದ ಹಾಗಾಯಿತು. ಹಾಗೆಯೇ ನಾಯಿಯೂ, ಅಶ್ವತ್ಥ ವೃಕ್ಷವೂ ಸೋದರ ಸಂಬಂಧಿಗಳು. ಮನುಷ್ಯನಿಗೂ, ಮಂಗನಿಗೂ ಜನ್ಮವಿತ್ತ ಮೂಲಪ್ರಾಣಿ ಬಹುಶಃ ಹಲವಾರು ನೂರು ಲಕ್ಷ ವರ್ಷಗಳ ಹಿಂದೆ ವಾಸಿಸುತ್ತಿತ್ತು. ಈಗ ಈ ಪ್ರಾಣಿಕುಲ ಉಳಿದಿಲ್ಲ. ಅದರ ಸಂತತಿಗಳು ಮಾತ್ರ ಬದುಕಿವೆ. ಹಾಗೆಯೇ, ಇಂದಿನ ಪ್ರಾಣಿಗಳು ಮತ್ತು ಸಸ್ಯಗಳು ೨೦೦ ಕೋಟಿ ವರ್ಷಗಳ ಹಿಂದೆ ಬದುಕಿದ್ದ ಜೀವತಳಿಯ ಪೀಳಿಗೆಗಳು. ನಮ್ಮ ಭೂಮಿಯಲ್ಲಿ ಬದುಕುತ್ತಿರುವ ಎಲ್ಲ ಜೀವಿಗಳೂ ಈ ಅರ್ಥದಲ್ಲಿ ಸೋದರ ಸಂಬಂಧಿಗಳೇ.

ಭೂಮಿಯಲ್ಲಿರುವ ಸಕಲಜೀವಿಗಳೂ ವಂಶವಾಹಿ ಮಾಹಿತಿಯನ್ನು ಹೊಂದಿವೆ. ಈ ಮಾಹಿತಿಯಿಂದಲೇ ಅವು ನಿರ್ದಿಷ್ಟ ಸ್ವರೂಪ, ಸ್ವಭಾವ ಪಡೆಯುತ್ತವೆ. ವಂಶವಾಹಿ ಮಾಹಿತಿ ಒಂದು ತಲೆಮಾರಿನಿಂದ ಮುಂದಿನ ತಲೆಮಾರಿಗೆ ಹೆಚ್ಚಿನ ಪ್ರಸಂಗಗಳಲ್ಲಿ ಬದಲಾಗದೇ ಹರಿದುಬರುವುದನ್ನು ನಾವು ಸತತ ಕಾಣುತ್ತೇವೆ. ಇದರಿಂದಲೇ ಒಂದು ಕುಲದಲ್ಲಿ ಅದೇ ಜಾತಿಯ ಪ್ರಾಣಿಗಳು ಜನಿಸುತ್ತವೆ. ಸಿಂಹದ ಹೊಟ್ಟೆಯಲ್ಲಿ ಸಿಂಹವೇ ಜನಿಸುತ್ತದೆ. ಪಕ್ಷಿಗಳು ಮೊಟ್ಟೆ ಹಾಕುತ್ತವೆಯೇ ಹೊರತು ಮರಿ ಹಾಕಲಾರವು. ಸ್ತನಿಗಳು ಮೊಟ್ಟೆ ಇಡಲಾರವು. ಈ ವಂಶ ಪಾರಂಪರ್ಯ ಗುಣಗಳು ಒಮ್ಮೆಲೇ ಬದಲಾಗುವುದಿಲ್ಲ. ಅವು ಬದಲಾಗಲು ಲಕ್ಷಾಂತರ ವರ್ಷಗಳೇ ಬೇಕಾಗುತ್ತವೆ. ವಿಕಾಸ ಅತಿ ಮಂದ ನಡಿಗೆ. ಎಲ್ಲ ಜೀವಿಗಳೂ ಅವುಗಳಲ್ಲಿರುವ ವಂಶವಾಹಿ ಮಾಹಿತಿಯನ್ನು, ಎರವಲು ಕೊಂಡ ಸಾಲದಂತೆ ಮುಂದಿನ ಪೀಳಿಗೆಗೆ ರವಾನಿಸುತ್ತವೆ. ಅಪರೂಪಕ್ಕೆ, ಹೊಸದಾಗಿ ಜನಿಸಿದ ಒಂದು

ವಿಜ್ಞಾನವನ್ನೂ, ಮತಧರ್ಮವನ್ನೂ ಹೇಗೆ ಒಂದುಗೂಡಿಸಬೇಕು? ಬೈಬಲ್ಲಿನಲ್ಲಿರುವುದನ್ನು ಅಕ್ಷರಶಃ ಸತ್ಯ ಎಂದು ಭಾವಿಸಬೇಕೇ, ಇಲ್ಲವೇ? ಅದು ಸಾಂಕೇತಿಕವೇ? ಅಲ್ಲಿ ಉಲ್ಲೇಖಿಸಿರುವ ದೇವರ ಒಂದು ದಿನ ನಮ್ಮ ಕೋಟಿ ವರ್ಷಗಳಾಗಬಾರದೇಕೆ? ಬ್ರಹ್ಮನ ನೂರು ವರ್ಷಗಳು ನಾಲ್ಕು ಯುಗಗಳಿಗೆ ಸಮನಾಗಿ, ಬ್ರಹ್ಮ ನೂರು ತಲುಪುತ್ತಿದ್ದಂತೆ ಪ್ರಳಯವಾಗುತ್ತದೆ ಎಂದು ಕೇಳಿದ್ದೇವಲ್ಲ, ಹಾಗೆಯೇ, ದೇವರ ಏಳು ದಿನಗಳು ಭೂಮಿಯ ವಿಕಾಸಕ್ಕೆ ವಿಜ್ಞಾನ ಕೊಡುತ್ತಿರುವ ಮಿತಿಯೇ ಇರಬಹುದಷ್ಟೆ? ಈ ರೀತಿಯ ತರ್ಕದಿಂದ ಕೆಲವರು ಸಮಾಧಾನ ಹೊಂದುತ್ತಾರೆ. ಮತ್ತೆ ಕೆಲವರಿಗೆ ಅಂತಹ ತರ್ಕ ಬೇಕಾಗಿಲ್ಲ, ಇಲ್ಲವೇ ಸಾಕಾಗುವುದಿಲ್ಲ. ಹೇಗಾದರೂ ಮಾಡಿ ವಿಕಾಸವಾದವನ್ನೇ ತಪ್ಪು ಎಂದು ತೋರಿಸಿಬಿಟ್ಟರೆ ಸಮಸ್ಯೆಯೇ ಇರುವುದಿಲ್ಲ ಎನ್ನುವುದು ಅವರ ಆಶಯ. ಆದ್ದರಿಂದಲೇ ಡಾರ್ವಿನ್ನರ ಪುಸ್ತಕ ಪ್ರಕಟವಾಗುತ್ತಿದ್ದಂತೆ ಪ್ರತಿಭಟನೆಗಳ ಸುರಿಮಳೆಯೇ ಪ್ರಾರಂಭವಾಯಿತು. ಹಾಗೆಯೇ, ವಿಕಾಸವಾದದ ವಿರುದ್ಧ ವ್ಯಕ್ತವಾದ ಪ್ರತಿಭಟನೆಯ ಪ್ರತಿಯಾಗಿ ಕೆಲವಿಜ್ಞಾನಿಗಳು ಅದರ ಬೆಂಬಲಕ್ಕೆ ಸಮರ್ಥನೆಗೆ ನಿಂತರು.

ಪ್ರಾಣಿಯ ವಂಶವಾಹಿ ಮಾಹಿತಿಯಲ್ಲಿ ಸಣ್ಣ ಬದಲಾವಣೆ ಕಾಣಿಸಿಕೊಳ್ಳಬಹುದು. ಅಂತಹ ಬದಲಾದ ಜೀವಿ ತನ್ನ ವಂಶವಾಹಿ ಮಾಹಿತಿಯನ್ನು ಅದರ ಮುಂದಿನ ಪೀಳಿಗೆಗೆ ನಿಷ್ಠೆಯಿಂದ ರವಾನಿಸುತ್ತದೆ. ಆಕಸ್ಮಿಕವಾಗಿ ಸಂಭವಿಸಿದ ಬದಲಾವಣೆ ವಂಶವಾಹಿ ಗುಣವಾಗುತ್ತದೆ. ಅನಿರೀಕ್ಷಿತವಾಗಿ ಆಗುವ ಇಂತಹ ಬದಲಾವಣೆಗಳೇ ಜೀವವಿಕಾಸಕ್ಕೆ ಕಾರಣವಾಗುತ್ತವೆ. ವಂಶವಾಹಿ ಮಾಹಿತಿಯಲ್ಲಿ ಆಕಸ್ಮಿಕವಾಗಿ ಉಂಟಾಗುವ ಬದಲಾವಣೆಯಿಂದ ಪ್ರಾಣಿಗೆ ಆಹಾರ ದೊರಕಿಸಿಕೊಳ್ಳುವ ಇಲ್ಲವೇ ಸಂತತಿ ಪಡೆಯುವ ಶಕ್ತಿ ಕ್ಷೀಣಿಸಿದರೆ, ಅದರ ಸಂತತಿ ಅಳಿದು, ವಂಶವಾಹಿ ಮಾಹಿತಿ ಮುಂದಿನ ಪೀಳಿಗೆಗಳಿಗೆ ವರ್ಗಾವಣೆಯಾಗದೇ ಕೊನೆಗೊಳ್ಳುತ್ತದೆ. ಬದಲಾವಣೆಯಿಂದ ಪ್ರಾಣಿಯ ಬದುಕುಳಿಯುವ, ಸಂತಾನ ಪಡೆಯುವ ಸಾಮರ್ಥ್ಯ ಹೆಚ್ಚಿದರೆ, ಅದರ ಪೀಳಿಗೆಯ ಸಂಖ್ಯೆ ಹೆಚ್ಚಾಗಲು ಪ್ರಾರಂಭವಾಗುತ್ತದೆ. ಅದರೊಡನೆ ಸ್ಪರ್ಧಿಸುತ್ತಿರುವ ಇತರ ಪ್ರಾಣಿಗಳ ಸಂತತಿ ಕಡಿಮೆಯಾಗುತ್ತದೆ. ಪ್ರಕೃತಿ ನಡೆಸುವ ಇಂತಹ ಪ್ರಾಣಿಗಳ ಆಯ್ಕೆ ಪ್ರತಿ ತಲೆಮಾರಿನಲ್ಲೂ ಸತತ ನಡೆಯುವುದರಿಂದ, ಕಾಲ ಸರಿದಂತೆ ಪ್ರಾಣಿಗಳ ಆನುವಂಶಿಕ ಗುಣಗಳು ನಿಧಾನವಾಗಿ ಬದಲಾಗುತ್ತವೆ. ಇಂತಹ ಬದಲಾವಣೆಗಳಿಂದಲೇ ಹೊಸ ತಳಿಗಳು ವಿಕಾಸ ಹೊಂದುತ್ತವೆ. ಇದೇ ವಿಕಾಸವಾದದ ತಿರುಳು. ಇದರಲ್ಲಿ ಗಮನಿಸಬೇಕಾದ ಅಂಶ, ಬದಲಾವಣೆಗಳಾಗುವುದು ಅನಿರೀಕ್ಷಿತ, ಆಕಸ್ಮಿಕ. ವಿಕಾಸದ ಹಾದಿಯಲ್ಲಿ ಅದೊಂದು ಅತಿ ಪುಟ್ಟ ಹೆಜ್ಜೆ. ಬದಲಾವಣೆಗೆ ಯಾವುದೆ ಉದ್ದೇಶವಿಲ್ಲ. ಪೂರ್ಣ ಕತ್ತಲಲ್ಲಿ, ಒಂದು ಕುರುಡು ಹೆಜ್ಜೆಯಿಟ್ಟಂತೆ. ಇಟ್ಟ ಹೆಜ್ಜೆ ಪ್ರಪಾತದಲ್ಲಿ ಬೀಳಿಸಬಹುದು, ಇಲ್ಲವೇ ಇನ್ನೂ ಸ್ವಲ್ಪ ಗಟ್ಟಿ ನೆಲಕ್ಕೆ ಕೊಂಡೊಯ್ಯಬಹುದು. ಅದರಂತೆ ಬದಲಾದ ಪ್ರಾಣಿಯ ಸಂತತಿ ನಶಿಸಿಹೋಗಬಹುದು ಇಲ್ಲವೇ ವೃದ್ಧಿಯಾಗತೊಡಗಬಹುದು. ಜೀವವಿಕಾಸ ಗೊತ್ತುಗುರಿಯಿಲ್ಲದ ನಡೆದಾಟ. ಆದರೂ ಈ ಕುರುಡು ನಡಿಗೆಯೇ ಲಕ್ಷಾಂತರ ವರ್ಷಗಳಲ್ಲಿ ಹೊಸ ಸಾಧ್ಯತೆಗಳಿಗೆ, ಹೊಸಜೀವಿಗಳಿಗೆ ದಾರಿಮಾಡಿಕೊಡುತ್ತದೆ.

ಪ್ರಾಣಿಗಳ ರಚನೆ ಮತ್ತು ಸ್ವಭಾವಗಳಲ್ಲಿ ಸಹಜವಾಗಿರುವ ಅನೇಕ ಸಣ್ಣ ಸಣ್ಣ ವ್ಯತ್ಯಾಸಗಳನ್ನು ಡಾರ್ವಿನ್ ತಮ್ಮ ವಿಶ್ವ ಪರ್ಯಟನೆಯಲ್ಲಿ ಪದೇ ಪದೇ ವೀಕ್ಷಿಸಿದರು. ಇಂತಹ ವ್ಯತ್ಯಾಸಗಳು ಆಕಸ್ಮಿಕವಾಗಿ ಕಾಣಿಸಿಕೊಂಡಾಗ ಪರಿಸರಕ್ಕೆ ಹೊಂದದಿದ್ದರೆ ಬದಲಾದ ಪ್ರಾಣಿಯ ಸಂತತಿ ಕೊನೆಗೊಳ್ಳಬಹುದು ಎಂಬ ತೀರ್ಮಾನಕ್ಕೆ ಬಂದರು. ಆಕಸ್ಮಿಕವಾಗಿ ಕಾಣಿಸಿಕೊಂಡ ವ್ಯತ್ಯಾಸ ಬದುಕುಳಿಯುವ ಸಾಮರ್ಥ್ಯ ಹೆಚ್ಚಿಸಿದಾಗ ಮಾತ್ರ ಅದರ ಸಂತತಿ ಬೆಳೆಯತೊಡಗುತ್ತದೆ. ಆದ್ದರಿಂದ ಜೀವವಿಕಾಸ ಯಾವುದೇ ಪೂರ್ವಯೋಜಿತ ಉದ್ದೇಶವಿಲ್ಲದೇ ಆಕಸ್ಮಿಕ ಬದಲಾವಣೆಗಳಿಂದಾಗುವ ವ್ಯಾಪಾರ. ಜೀವವಿಕಾಸ ಪ್ರಕೃತಿಯ ಸಹಜ ನಿಯಮಗಳ ಅಡಿಯಲ್ಲೇ ನಡೆಯುತ್ತದೆ. ಇದಕ್ಕೆ ಯಾವ ಅತಿಮಾನುಷ ಶಕ್ತಿಯ ಅವಶ್ಯಕತೆಯಿಲ್ಲ ಎಂದು ಡಾರ್ವಿನ್ ಪ್ರತಿಪಾದಿಸಿದರು. ತಾವು ಕಂಡದ್ದನ್ನೆಲ್ಲಾ ತಾರ್ಕಿಕವಾಗಿ, ಅನೇಕ ಆಧಾರಗಳ ಸಮೇತ ೧೮೫೯ರಲ್ಲಿ ಪ್ರಕಟವಾದ ತಮ್ಮ ಪುಸ್ತಕದಲ್ಲಿ ಮಂಡಿಸಿದರು.

ವಿಜ್ಞಾನದ ಮುನ್ನಡೆಗೆ ಕಠಿಣ ನಿಯಮಗಳಿವೆ. ವೈಜ್ಞಾನಿಕ ಸಂಶೋಧನೆಗಳು ಪ್ರಕಟಗೊಳ್ಳುತ್ತಿದ್ದಂತೆ ಮನ್ನಣೆ ಪಡೆಯುವುದಿಲ್ಲ. ಅದರ ಸತ್ಯಾಸತ್ಯತೆಯನ್ನು ಇತರ ಸಹಸ್ರಾರು ವಿಜ್ಞಾನಿಗಳು ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸುತ್ತಾರೆ. ಸಂಶೋಧನೆ ಸತ್ಯಯುತವೇ ಆಗಿದ್ದಲ್ಲಿ ಇಂತಹ ಪರೀಕ್ಷೆಗಳಿಂದ ಇನ್ನೂ ಗಟ್ಟಿಗೊಳ್ಳುತ್ತದೆ. ಜಳ್ಳಾಗಿದ್ದರೆ ಬಹುಬೇಗ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತದೆ. ಡಾರ್ವಿನ್ನರ ವಿಕಾಸವಾದ ಮತ್ತು ಅದರ ತೀರ್ಮಾನಗಳನ್ನು ಇಂತಹ ಪರೀಕ್ಷೆಗಳಿಗೆ ಸತತ ಒಳಪಡಿಸಲಾಗಿದೆ. ಈ ಪರಿಶ್ರಮಗಳಿಂದ ಡಾರ್ವಿನ್ನರ ವಿಕಾಸವಾದ ಇನ್ನೂ ಗಟ್ಟಿಯಾಗಿ ಜೀವವಿಜ್ಞಾನದ ಎಲ್ಲ ಭಾಗಗಳನ್ನು ಒಂದುಗೂಡಿಸಬಲ್ಲದು ಎಂಬ ಹೆಗ್ಗಳಿಕೆ ಪಡೆದಿದೆ.

ಡಾರ್ವಿನ್ ವಿಕಾಸವಾದವನ್ನು ಮಂಡಿಸಿದಾಗ ಆನುವಂಶಿಕ ಗುಣಗಳು ಏಕೆ ಮತ್ತು ಹೇಗೆ ಆಕಸ್ಮಿಕವಾಗಿ ಬದಲಾಗುತ್ತವೆಂದು ತಿಳಿದಿರಲಿಲ್ಲ. ನಂತರದ ಸಂಶೋಧನೆಗಳಿಂದ ಇದು ಸ್ಪಷ್ಟವಾಗಿದೆ. ಭೂಮಿಯ ಮೇಲೆ ಬದುಕಿರುವ ಎಲ್ಲ ಜೀವಿಗಳೂ ಜೀವಕೋಶಗಳನ್ನು ಹೊಂದಿವೆ. ಬ್ಯಾಕ್ಟೀರಿಯಾಗಳಲ್ಲಿ ಸಾಧಾರಣವಾಗಿ ಒಂದೇ ಜೀವಕೋಶವಿದ್ದರೆ, ನಮ್ಮ ದೇಹದಲ್ಲಿ ಸಹಸ್ರ ಕೋಟಿ ಜೀವಕೋಶಗಳಿವೆ. ಆದರೂ ಎಲ್ಲ ಜೀವಿಗಳೂ ಪ್ರಾರಂಭವಾಗುವುದು ಏಕಕೋಶದಿಂದ ಮಾತ್ರ. ಈ ಮೂಲ ಏಕಕೋಶವೇ ಕೋಟ್ಯಂತರ ಕೋಶಗಳಾಗಿ ವಿಭಜನೆ ಹೊಂದುತ್ತದೆ. ಎಲ್ಲ ಜೀವಕೋಶಗಳ ವಂಶವಾಹಿ ಮಾಹಿತಿ ಅಡಗಿರುವುದು ಡಿ.ಎನ್.ಎ.

## ಕವಿಗೋಷ್ಠಿ

ಮೊದಲಿಗೆ ಕವಿಗೋಷ್ಠಿ ಯಾವಾಗ
ಪ್ರಾರಂಭವಾಗುತ್ತೋ ಎಂದು ಕಾತರಿಸುತ್ತಾರೆ
ಪ್ರಾರಂಭವಾದ ಮೇಲೆ ಯಾವಾಗ
ಮುಗಿಯುತ್ತೋ ಅಂತಾ ಕಂಗಾಲಾಗುತ್ತಾರೆ

ಎಂ. ಡಿ. ಗೋಗೇರಿ
ನವ ಅಯೋಧ್ಯಾನಗರ, ಹುಬ್ಬಳ್ಳಿ - ೩೨

ಎನ್ನುವ ದೈತ್ಯ ಅಣುಗಳಲ್ಲಿ. ನಮ್ಮ ಭಾಷೆಗೆ ೫೨ ಅಕ್ಷರಗಳು ಇದ್ದ ಹಾಗೆ ಬ್ಯಾಕ್ಟೀರಿಯಾಗಳಿಂದ ಪ್ರಾರಂಭಿಸಿ ಸ್ತನಿಗಳವರೆಗೆ ಎಲ್ಲ ಜೀವಕೋಶಗಳ ವಂಶವಾಹಿ ಮಾಹಿತಿಯ ಭಾಷೆಯಲ್ಲಿ ನಾಲ್ಕು ಅಕ್ಷರಗಳಿವೆ. ಈ ನಾಲ್ಕು ಅಕ್ಷರಗಳೇ ಡಿ.ಎನ್.ಎ. ಅಣುಗಳಲ್ಲಿ ಕಂಡುಬರುವ ನ್ಯೂಕ್ಲಿಯೋಟೈಡುಗಳು. ಈ ನ್ಯೂಕ್ಲಿಯೋಟೈಡುಗಳ ಮಾಲೆಗಳಲ್ಲೇ ಎಲ್ಲ ಜೀವಕೋಶಗಳ ವಂಶವಾಹಿ ಮಾಹಿತಿಯಿದೆ. ಅದೇ ನಾಲ್ಕು ಅಕ್ಷರಗಳನ್ನೇ (ನ್ಯೂಕ್ಲಿಯೋಟೈಡುಗಳನ್ನೇ) ಎಲ್ಲ ಜೀವಕೋಶಗಳೂ ಬಳಸುತ್ತವೆ. ಈ ಸರ್ವ ಜೀವಕೋಶಗಳ ಏಕಲಿಪಿ ಅವುಗಳ ಏಕ ಮೂಲ ಉಗಮಕ್ಕೆ ಸಾಕ್ಷಿಯಾಗಿ, ಡಾರ್ವಿನ್ನರ ವಿಕಾಸವಾದಕ್ಕೆ ಬಲವಾದ ಪುರಾವೆಯಾಗಿದೆ. ಆದ್ದರಿಂದಲೇ ನಮ್ಮ ಡಿ.ಎನ್.ಎ. ಅಣುಗಳಲ್ಲಿರುವ ಸಂದೇಶವನ್ನು ಬ್ಯಾಕ್ಟೀರಿಯಾಗಳು ಬಳಸಿಕೊಳ್ಳಬಲ್ಲವು. ಬ್ಯಾಕ್ಟೀರಿಯಾ ಕೋಶಗಳಲ್ಲಿರುವ ಸಂದೇಶವನ್ನು ಸಸ್ಯಗಳು ಬಳಸಬಲ್ಲವು. ಜೀವಕೋಶ ವಿಭಜನೆಯಾದಾಗ ಅದರಲ್ಲಿರುವ ವಂಶವಾಹಿ ಮಾಹಿತಿಯು (ಡಿ.ಎನ್.ಎ. ದೈತ್ಯಾಣು) ಎರಡೂ ಹೊಸ ಮರಿಕೋಶಗಳಿಗೆ ಬದಲಾಗದೇ ಇಳಿದು ಬರುತ್ತದೆ. ಆದರೆ ಒಮ್ಮೊಮ್ಮೆ ಆಕಸ್ಮಿಕವಾಗಿ ಜೀವಕೋಶಗಳಲ್ಲಿರುವ ನಾಲ್ಕು ಬಗೆಯ ಅಕ್ಷರಗಳಲ್ಲಿ ಸಣ್ಣ ಬದಲಾವಣೆಗಳು ಕಾಣಿಸಿಕೊಳ್ಳುತ್ತವೆ. ಒಂದು ಅಕ್ಷರ ಬಿಟ್ಟು ಹೋಗಬಹುದು, ಮೊದಲು ಇದ್ದಿರದ ಅಕ್ಷರ ತೂರಿಬರಬಹುದು ಇಲ್ಲವೇ ಅಕ್ಷರ ಬದಲಾಗಬಹುದು. ಅಕ್ಷರಗಳ ಬದಲಾವಣೆಯಿಂದ ವಾಕ್ಯದ ಅರ್ಥ ಬೇರೆಯಾದಂತೆ, ಜೀವಕೋಶದ ವಂಶವಾಹಿ ಮಾಹಿತಿಯಲ್ಲಿ ಅಲ್ಪ ಬದಲಾವಣೆ ಕಾಣಿಸಿಕೊಳ್ಳುತ್ತದೆ. ಇಂತಹ ಬದಲಾವಣೆಗಳು ಕೆಲ ರಾಸಾಯನಿಕ ಧಾತುಗಳ ಸಂಪರ್ಕದಿಂದ, ಇಲ್ಲವೇ ವಾತಾವರಣದ ವಿಕಿರಣದಿಂದ ಕಾಣಿಸಿಕೊಳ್ಳಬಹುದು. ಹಸ್ತಪ್ರತಿ ಮಾಡಿಕೊಳ್ಳುವಾಗ ನಾವು ಮಾಡುವ ಸಹಜ ತಪ್ಪುಗಳಂತೆ, ಇಂತಹ ಬದಲಾವಣೆಗಳು ಯಾವ ಕಾರಣ ಇಲ್ಲದಿದ್ದರೂ, ಆಕಸ್ಮಿಕವಾಗಿ ಕಾಣಿಸಿಕೊಳ್ಳಬಹುದು. ಇವುಗಳಿಂದ ಡಿ.ಎನ್.ಎ. ಅಣುಗಳ ಜೀವವಾಹಿ ಸಂದೇಶದಲ್ಲಿ ಸಣ್ಣ ಬದಲಾವಣೆ ಉಂಟಾಗುತ್ತದೆ. ಈ ಬದಲಾವಣೆಗಳೇ ಜೀವವಿಕಾಸಕ್ಕೆ ಎಡೆಮಾಡಿಕೊಡುತ್ತವೆ.

ಎಲ್ಲ ಜೀವಕೋಶಗಳ ರಾಸಾಯನಿಕ ಕ್ರಿಯೆಗಳಲ್ಲಿಯೂ ಅನೇಕ ಸಾಮ್ಯತೆಗಳಿವೆ. ಜೀವಕೋಶಗಳು ತಮಗೆ ಬೇಕಾಗುವ ಸಹಸ್ರಾರು ಅಣುಗಳನ್ನು ೨೦ ಅಮೈನೋ ಆಮ್ಲಗಳು, ಹಲವಾರು ನ್ಯೂಕ್ಲಿಯೋಟೈಡುಗಳು ಹಾಗೂ ಇನ್ನು ಕೆಲ ಸಣ್ಣ ಅಣುಗಳನ್ನು ಬಳಸಿಕೊಂಡು ಸಂಶ್ಲೇಷಿಸಿಕೊಳ್ಳುತ್ತವೆ. ಈ ಅಣುಗಳನ್ನು ಬಳಸಿಕೊಳ್ಳುವ ರೀತಿಯಲ್ಲೂ ಅವುಗಳನ್ನು ಒಳಪಡಿಸುವ ರಾಸಾಯನಿಕ ಕ್ರಿಯೆಗಳಲ್ಲೂ ಎಲ್ಲ ಜೀವಕೋಶಗಳಿಗೂ ಸಾಮ್ಯತೆಗಳಿವೆ. ಈ ನೂತನ ಸಂಶೋಧನೆಗಳೆಲ್ಲಾ ಜೀವಕೋಶಗಳ ಏಕಮೂಲವನ್ನೇ ಸಮರ್ಥಿಸುತ್ತವೆ. ೨೦ನೆಯ ಶತಮಾನದಲ್ಲಿ ಜೀವಶಾಸ್ತ್ರದಲ್ಲಾದ ಅಗಾಧ ಸಂಶೋಧನೆಗಳು ಡಾರ್ವಿನ್ನರ ವಿಕಾಸವಾದಕ್ಕೆ ಭದ್ರಬುನಾದಿಯನ್ನು ಒದಗಿಸಿಕೊಟ್ಟಿವೆ.

ಜೀವಕೋಶಗಳ ವಂಶವಾಹಿ ಮಾಹಿತಿ ಬದಲಾಗುವುದು ಅವುಗಳ ನಾಲ್ಕು ಅಕ್ಷರಗಳ ಮಾಲೆಯಲ್ಲಿ ಸಣ್ಣ ಸಣ್ಣ ಬದಲಾವಣೆಗಳಾಗುವುದರಿಂದ. ಜೀವಕೋಶಗಳ ಕಾರ್ಯಕ್ಷಮತೆಯಿಂದಾಗಿ ಬದಲಾವಣೆಗಳಾಗುವುದು ಅಪರೂಪ. ಆದ್ದರಿಂದ ಜೀವವಿಕಾಸದ ನಡಿಗೆ ನಿಧಾನ. ಏಕಕೋಶ ಜೀವಿಗಳಿಂದ ಸ್ತನಿಗಳಂತಹ ಬಹುಕೋಟಿ ಜೀವಿಗಳ ವಿಕಾಸಕ್ಕೆ ೧೦೦ ಕೋಟಿ ವರ್ಷಗಳಿಗೂ ಹೆಚ್ಚು ಸಮಯ ಬೇಕಾಯಿತು. ವಂಶಪಾರಂಪರ್ಯ ಗುಣಗಳಲ್ಲಿ ಬದಲಾವಣೆಯೇ ಕಾಣಿಸಿಕೊಳ್ಳದಿದ್ದರೆ ವಿಕಾಸ ಸಾಧ್ಯವಾಗುವುದಿಲ್ಲ. ಪರಿಸರ ಬದಲಾಗದೇ ವಂಶವಾಹಿ ಮಾಹಿತಿಯಲ್ಲಿ ಬದಲಾವಣೆಗಳಾದರೆ, ಬಹುಶಃ ಅಂತಹ ಬದಲಾವಣೆಗಳಿಂದ ಜೀವಿಗೆ ಹಾನಿಯಾಗುತ್ತದೆ. ಅದರ ಸಂತತಿ ನಶಿಸುತ್ತದೆ. ಪರಿಸರ ಬದಲಾದಾಗ, ಅದಕ್ಕೆ ಪೂರಕವಾಗಬಹುದಾದ ಬದಲಾವಣೆ ವಂಶವಾಹಿ ಮಾಹಿತಿಯಲ್ಲಿ ಆಕಸ್ಮಿಕವಾಗಿ ಕಾಣಿಸಿಕೊಂಡರೆ, ಅಂತಹ ಬದಲಾವಣೆ ಸ್ಥಿರಗೊಳ್ಳುತ್ತದೆ; ಬದಲಾದ ಜೀವಿಯ ವಂಶ ಬೆಳೆಯುತ್ತದೆ. ೨೦ನೆಯ ಶತಮಾನದ ಆದಿಯಲ್ಲಿ ಬ್ಯಾಕ್ಟೀರಿಯಾ ಕೋಶಗಳನ್ನು ನಾಶಮಾಡುವ ಆಂಟಿಬಯಾಟಿಕ್‌ಗಳ ಬಳಕೆ ಪ್ರಾರಂಭವಾಯಿತು. ಅಲ್ಲಿಯವರೆಗೆ ಬ್ಯಾಕ್ಟೀರಿಯಾಗಳು ಬದುಕಿದ್ದ ಪರಿಸರ ಕ್ಷಿಪ್ರವಾಗಿ ಬದಲಾಯಿತು. ಈ ಆಂಟಿಬಯಾಟಿಕ್‌ಗಳಿರುವ ಹೊಸ ಪರಿಸರಕ್ಕೆ ಹೊಂದಿಕೊಳ್ಳದ ಬ್ಯಾಕ್ಟೀರಿಯಾಗಳು ನಾಶವಾಗತೊಡಗಿದವು. ಬ್ಯಾಕ್ಟೀರಿಯಾ ಕಾಯಿಲೆಯಿಂದ ಸಾಯುವುದು ಕಡಿಮೆಯಾಯಿತು. ನೂರು ವರ್ಷಗಳ ಒಳಗೇ, ಅನೇಕ ಬ್ಯಾಕ್ಟೀರಿಯಾಗಳ ವಂಶವಾಹಿ ಮಾಹಿತಿಯಲ್ಲಿ ಬದಲಾವಣೆಗಳಾಗಿವೆ. ಅಕಸ್ಮಾತ್ ಆದ ಈ ಬದಲಾವಣೆಯಿಂದ ಆಂಟಿಬಯಾಟಿಕ್‌ಗಳನ್ನು ನಿಷ್ಕ್ರಿಯಗೊಳಿಸುವ ಶಕ್ತಿಯನ್ನು ಅನೇಕ ಬ್ಯಾಕ್ಟೀರಿಯಾಗಳು ಪಡೆದುಕೊಂಡವು. ಪರಿಸರ ಬದಲಾವಣೆ ಬ್ಯಾಕ್ಟೀರಿಯಾ ಕೋಶಗಳ ವಿಕಾಸವನ್ನು ಚುರುಕುಗೊಳಿಸಿತು. ಇಂದಿನ ಅನೇಕ ಬ್ಯಾಕ್ಟೀರಿಯಾಗಳು ಆಂಟಿಬಯಾಟಿಕ್‌ಗಳಿಂದ ನಾಶವಾಗುವುದಿಲ್ಲ. ನಮಗೆ ಬರುವ ಕಾಯಿಲೆಗಳು ಆಂಟಿಬಯಾಟಿಕ್‌ಗಳಿಗೆ ಬಗ್ಗದೆ, ದೊಡ್ಡ ಸಮಸ್ಯೆ ಉಂಟಾಗಿದೆ. ಇದು ನಮ್ಮ ಜೀವಿತದಲ್ಲೇ ಆದ, ಆಗುತ್ತಿರುವ ಜೀವವಿಕಾಸ, ಪರಿಸರದ ಬದಲಾವಣೆಯ ಒತ್ತಡದಿಂದ ಚುರುಕುಗೊಂಡ ಜೀವವಿಕಾಸ.

ಮೇಧಾಶಕ್ತಿಗೆ ಮೇರು ಉದಾಹರಣೆ ಎಂದು ಎಲ್ಲೆಡೆ ಪ್ರಚಾರ ದೊರಕುವುದು ಐನ್‌ಸ್ಟೈನ್‌ರಿಗೆ. ತಲೆಗೂದಲು ಕೆದರಿರುವ ಅವರ ಮುಖ ಎಲ್ಲರಿಗೂ ಪರಿಚಿತ. ಐನ್‌ಸ್ಟೈನ್‌ರಿಗೆ ಸರಿಸಮನಾಗಿ ನಿಲ್ಲಬಲ್ಲ ಡಾರ್ವಿನ್ನರ ಭಾವಚಿತ್ರ ಮಾಧ್ಯಮಗಳಲ್ಲಿ ಪ್ರಕಟಗೊಳ್ಳುವುದು ಅಪರೂಪ. ಆಗೊಮ್ಮೆ ಈಗೊಮ್ಮೆ ಪ್ರಕಟಗೊಳ್ಳುವ ಚಿತ್ರಗಳಲ್ಲಿ ಮಾನವ ಮುಖ, ವಾನರ ದೇಹ ಹೊಂದಿರುವ ಡಾರ್ವಿನ್ನರ ವ್ಯಂಗ್ಯಚಿತ್ರವೇ ಹೆಚ್ಚಾಗಿರುತ್ತದೆ. ಐನ್‌ಸ್ಟೈನ್‌ರ ಸಾಪೇಕ್ಷತಾ ಸಿದ್ಧಾಂತ ಹೆಚ್ಚಿನ ಜನರಿಗೆ ತಿಳಿದಿಲ್ಲ. ಆದರೂ ಅವರು ಅತಿ ಮೇಧಾವಿ ಎಂದೇ ಎಲ್ಲರೂ ನಂಬುತ್ತಾರೆ. ಈ ತಾರತಮ್ಯ ಏಕೆ ? ಇದಕ್ಕೆ ಐನ್‌ಸ್ಟೈನ್‌ರ ಸಿದ್ಧಾಂತ ಹೆಚ್ಚು ಜನರಿಗೆ ಅರ್ಥವಾಗುವುದಿಲ್ಲ; ಅದನ್ನು ಅರ್ಥ ಮಾಡಿಕೊಳ್ಳಲು ಬಹಳ ಪರಿಶ್ರಮ ಪಡಬೇಕಾಗುತ್ತದೆ ಎನ್ನುವುದೂ ಇರಬಹುದು. ಆದರೆ ಅದೊಂದೇ ಅಲ್ಲ. ಐನ್‌ಸ್ಟೈನ್‌ರ ಸಿದ್ಧಾಂತ ಜಟಿಲವಾದರೂ, ಅದರ ಬಗ್ಗೆ ತಕರಾರಿಲ್ಲ. ಯಾರೂ ಸಾಪೇಕ್ಷತಾ ಸಿದ್ಧಾಂತದ ವಿರುದ್ಧ ಸಮರ ಸಾರುವುದಿಲ್ಲ. ಐನ್‌ಸ್ಟೈನ್‌ರನ್ನು ರಾಕ್ಷಸನೆಂದು ಚಿತ್ರಿಸುವುದಿಲ್ಲ. ಡಾರ್ವಿನ್ನರ ಪುಸ್ತಕಗಳನ್ನು ಭಾವಚಿತ್ರವನ್ನು ಸುಡುವುದರಿಂದ ಪ್ರಾರಂಭಿಸಿ ಅವರ ಸಂಶೋಧನೆಗಳ ವಿರುದ್ಧ ಸತತ ಪ್ರತಿಭಟನೆಗಳು ೧೫೦ ವರ್ಷಗಳಿಂದಲೂ ನಡೆದುಬಂದಿವೆ. ಸಹಸ್ರಾರು ವರ್ಷಗಳಿಂದ ನೆಲೆಯೂರಿರುವ ನಂಬಿಕೆಗಳಿಗೂ ವಿಕಾಸವಾದಕ್ಕೂ ಅನೇಕ ವಿರೋಧಾಭಾಸಗಳಿರುವುದೇ ಇದಕ್ಕೆ ಕಾರಣ. ವಿಕಾಸವಾದಕ್ಕೂ ಕೆಲವು ಮತಸಿದ್ಧಾಂತಗಳಿಗೂ ಇರುವ ಘರ್ಷಣೆಯಿಂದ ಈ ಟೀಕೆಗಳು ಪ್ರಾರಂಭವಾದವು. ಇಂತಹ ಘರ್ಷಣೆಯಾದಾಗ ನೈತಿಕ ಧೈರ್ಯ ಇರುವವರು ಹೊಸ ಚಿಂತನೆಯಲ್ಲಿ ತೊಡಗುತ್ತಾರೆ. ವಿಕಾಸವಾದ ಸರಿ ಎನಿಸಿದರೆ ತಮ್ಮ ಸೈದ್ಧಾಂತಿಕ ನೆಲೆಯನ್ನು ಬದಲಿಸಿಕೊಳ್ಳುತ್ತಾರೆ. ವಿಕಾಸವಾದ ಸರಿಯಲ್ಲ ಎನಿಸಿದರೆ ಅದು ಯಾವ ವೈಜ್ಞಾನಿಕ ನಿಯಮಗಳನ್ನು ಉಲ್ಲಂಘಿಸುತ್ತದೆ ಎಂಬುದನ್ನು ಕಂಡುಕೊಂಡು ಎತ್ತಿ ತೋರಿಸುತ್ತಾರೆ. ಹಳೆಯ ನಂಬಿಕೆಗಳಿಗೇ ಜೋತುಬಿದ್ದು ಅದನ್ನೇ ಕುರುಡಾಗಿ ನಂಬಿಕೊಂಡಿರುವವರಿಗೆ ವಿಕಾಸವಾದ ಸಹ್ಯವಾಗುವುದಿಲ್ಲ. ಅದು ಅವರಿಗೆ ಕಳವಳ ಉಂಟುಮಾಡುತ್ತದೆ. ಆದ್ದರಿಂದಲೇ ವಿಕಾಸವಾದವನ್ನು ಹೊಸಕಿಹಾಕಲು ಶತಪ್ರಯತ್ನ ನಡೆಸುತ್ತಾರೆ. ವಿಕಾಸವಾದದ ವಿರುದ್ಧ ಇಲ್ಲಿಯವರೆಗೆ ಸಮರ ನಡೆದಿರುವುದು ಪಾಶ್ಚಿಮಾತ್ಯ ದೇಶಗಳಲ್ಲಿ ಮಾತ್ರ. ನಮ್ಮ ದೇಶದಲ್ಲಿ ಇಂತಹ ಪ್ರಸಂಗಗಳು ನಡೆದಿಲ್ಲ. ಮೊದಲು ಅಲ್ಲಿ ನಡೆದಿರುವ ವಿರೋಧಕ್ಕೆ ಕಾರಣ ಹುಡುಕಿ ನಂತರ ಇಲ್ಲಿ ಏಕೆ ಅಂತಹ ವಾದ ವಿವಾದಗಳು ನಡೆದಿಲ್ಲ ಎನ್ನುವುದನ್ನು ಪರಿಶೀಲಿಸಬಹುದು.

ವೈಜ್ಞಾನಿಕ ಸಂಶೋಧನೆಯಿಂದ ಶೋಷಣೆಗೊಳಗಾದ ಮತ್ತೊಬ್ಬ ವಿಜ್ಞಾನಿ ಗೆಲಿಲಿಯೊ. ಗೆಲಿಲಿಯೊ ಸಂಶೋಧನೆಗಳನ್ನು ನಡೆಸುವವರೆಗೂ ಭೂಮಿಯ ಸುತ್ತ ಸೂರ್ಯ, ಗ್ರಹಗಳು, ನಕ್ಷತ್ರಗಳು ಸುತ್ತುತ್ತಿವೆ ಎಂಬ ಕಲ್ಪನೆ ಇತ್ತು. ಇದರಿಂದಾಗಿ ನಾವು ವಾಸಿಸುತ್ತಿರುವ ಭೂಮಿಯೇ ವಿಶ್ವದ ಕೇಂದ್ರವೆಂಬ ಬಲವಾದ ನಂಬಿಕೆಯಿತ್ತು. ಇದು ಸತ್ಯಕ್ಕೆ ದೂರವೆಂಬ ಸಂಗತಿ ಗೆಲಿಲಿಯೊ ನಡೆಸಿದ ಸಂಶೋಧನೆಗಳಿಂದ ತಿಳಿದುಬಂದಿತು. ಭೂಮಿ ತನ್ನ ಕೇಂದ್ರ ಸ್ಥಾನ ಕಳೆದುಕೊಂಡಿತು. ಸೂರ್ಯನ ಸುತ್ತ ಗ್ರಹಗಳು ಸುತ್ತುತ್ತವೆಂದು ಹೇಳಿದ್ದಕ್ಕಾಗಿ ಗೆಲಿಲಿಯೊ ಗೃಹಬಂಧನಕ್ಕೊಳಗಾಗಬೇಕಾಯಿತು. ಆದರೆ ಹಲವಾರು ದಶಕಗಳು ಕಳೆಯುತ್ತಿದ್ದಂತೆ ಅವರ ತೀರ್ಮಾನವನ್ನು ಸಾರ್ವತ್ರಿಕವಾಗಿ ಒಪ್ಪಿಕೊಳ್ಳಲಾಯಿತು. ನಾಲ್ಕುನೂರು ವರ್ಷಗಳ ನಂತರದ ಈ ದಿನದಲ್ಲಿ ಗೆಲಿಲಿಯೋ ನಡೆಸಿದ



# ಮೆಟ್ಟಿಲಲ್ಲ...

ಮೆಟ್ಟಿಲಾಗಿದ್ದೆವು ನಾವು
ನಿಮ್ಮ ಮೆಟ್ಟುಗಳ
ನೆತ್ತಿಗೇರಿಸಿಕೊಂಡು ಮೆಟ್ಟಿಲಾಗಿದ್ದೆವು.

ನಿಮ್ಮ ಪಾದಧೂಳಿ
ಮಸ್ತಕಕ್ಕೇರಿಸಿ
ಜನ್ಮ ಸಾರ್ಥಕವಾಯ್ತೆಂದ ಮೆಟ್ಟಿಲಾಗಿದ್ದೆವು.

ತಲೆ ಹತ್ತಿದವರು
ನಮ್ಮತ್ತ  ನೋಡದಿದ್ದರೂ
ಅದುವೆ ಧರ್ಮವೆಂದ ಮೆಟ್ಟಿಲಾಗಿದ್ದೆವು

ತುಳಿಸಿಕೊಳ್ಳುತ್ತ
ಕ್ಷತ ವಿಕ್ಷತರಾಗುವುದೆ
ಸಾರ್ಥಕ ಜನುಮವೆಂದ ಮೆಟ್ಟಿಲಾಗಿದ್ದೆವು.

ದೇಹ ಛಿನ್ನಭಿನ್ನವಾಗಿದ್ದರೂ
ಹತ್ತಿದವರಂತಸ್ತ ನೆತ್ತಲು ಹೊತ್ತ
ಕೆಂಪು ಹಾಸೆ ಉಡುಗರೆ ಎಂದ ಮೆಟ್ಟಿಲಾಗಿದ್ದೆವು.

ಮೆಟ್ಟುವವರಿಗೆ ಮೆಟ್ಟಿಲಾಗುವ
ದಿನಗಳೆದು ಬಿಟ್ಟಾಯ್ತು
ಅರಿವು ಹುಟ್ಟಾಯ್ತು , ಸಮತಟ್ಟಾಯ್ತೆಂದ ಮೆಟ್ಟಿಲು

ತುಳಿಸಿಕೊಂಡ ಬಾಯಿಸತ್ತವರೆಲ್ಲ
ತುಳಿದ ಧಣಿಗೆ ಕುಣಿ
ತೋಡಿಟ್ಟು ಗರ್ಜಿಸಿದ ಮೆಟ್ಟಿಲು.

ಕ್ರಿಮಿ, ಕೀಟ, ಪಶು ಪಕ್ಷಿ
ಜೀವ ಜೀವದ ಸಹಜೀವನಕ್ಕೆ
ಪ್ರಶಸ್ತ ಮನೆ ಕಟ್ಟಿ ನಿಂತ ಮೆಟ್ಟಿಲು

ಮೆಟ್ಟುವವರಿಗೆಂದೂ ಮೆಟ್ಟಿಲಾಗದೆ
ನಿಟ್ಟು ನಿಟ್ಟಲ್ಲಿ ಸಮತೆ ಸ್ನೇಹ-
ಕ್ಕೆ ತೊಟ್ಟಿಲಾಗ ಹೊರಟ ನಾವು ಮೆಟ್ಟಿಲಲ್ಲ.

**ಮಾಲತಿ ಪಟ್ಟಣಶೆಟ್ಟಿ**
ನಂ. ೩, ಗಣೇಶ್ ಅಪಾರ್ಟ್‌ಮೆಂಟ್, ರಜತಗಿರಿ, ಧಾರವಾಡ - ೫೮೦೦೦೪

ಸಂಶೋಧನೆಗಳಿಗೆ ಸಲ್ಲಬೇಕಾದ ಗೌರವ ಸಂದಿದೆ. ಆದರೆ ೧೫೦ ವರ್ಷಗಳ ನಂತರವೂ ಡಾರ್ವಿನ್ನರ ವಿಕಾಸವಾದವನ್ನು ವಿರೋಧಿಸುವವರು ಅನೇಕರಿದ್ದಾರೆ. ಮಡಿವಂತ ಕ್ರಿಶ್ಚಿಯನ್ನರಿಗೆ ವಿಕಾಸವಾದ ಹಿಡಿಸುವುದಿಲ್ಲ. ಬೈಬಲ್ಲಿನ ಪ್ರಕಾರ ಮಾನವ ಕುಲ ದೇವರು ಸೃಷ್ಟಿಸಿದ ಆಡಮ್, ಈವ್ ದಂಪತಿಗಳಿಂದ ಪ್ರಾರಂಭವಾಯಿತು. ಅಲ್ಲಿಂದ ಪ್ರತಿ ಸಂತತಿಯ ಜೀವಿತಾವಧಿ ಬೈಬಲ್ಲಿನ ಹಳೆ ಒಡಂಬಡಿಕೆಯಲ್ಲಿ ದೊರೆಯುತ್ತದೆ. ಈ ಕಾಲವನ್ನೆಲ್ಲಾ ಸೇರಿಸಿದರೆ, ಮನುಕುಲ ೧೦ ಸಾವಿರ ವರ್ಷಗಳಿಂದ ಈಚೆಗಷ್ಟೇ ಹುಟ್ಟಿಕೊಂಡಿದೆ ಎಂಬ ತೀರ್ಮಾನಕ್ಕೆ ಬರುತ್ತೇವೆ. ಭೂಮಿಯನ್ನು, ಸಕಲ ವಿಶ್ವವನ್ನು ದೇವರು ಏಳು ದಿನದಲ್ಲಿ ಸೃಷ್ಟಿಸಿದ ಎನ್ನುತ್ತದೆ ಬೈಬಲ್. ಭೂಮಿ ೫೦೦ ಕೋಟಿ ವರ್ಷಗಳಷ್ಟು ಹಳೆಯದು ಎನ್ನುತ್ತದೆ ವಿಜ್ಞಾನ. ಮನುಷ್ಯನನ್ನು ಅವನ ಇಂದಿನ ರೂಪದಲ್ಲೇ ದೇವರು ಸೃಷ್ಟಿಸಿದ ಎನ್ನುತ್ತದೆ ಬೈಬಲ್. ವಿಕಾಸವಾದದ ಪ್ರಕಾರ ಮಾನವ ಇತರ ಪ್ರಾಣಿ ಕುಲದಿಂದ ಇಳಿದುಬಂದಿದ್ದಾನೆ. ಮನುಷ್ಯನಿಗೂ, ಪ್ರಾಣಿಗಳಿಗೂ ಸೋದರ ಸಂಬಂಧವಿದೆ. ಗೆಲಿಲಿಯೋನ ಅನ್ವೇಷಣೆ, ಭೂಮಿಯನ್ನು ವಿಶ್ವದ ಕೇಂದ್ರದಿಂದ ಪಲ್ಲಟಗೊಳಿಸಿದಂತೆ, ಡಾರ್ವಿನ್ನನ ಸಿದ್ಧಾಂತ ಮನುಷ್ಯನನ್ನು ಪ್ರಾಣಿಕುಲ ಕೇಂದ್ರದಿಂದ ಪಲ್ಲಟಗೊಳಿಸಿ ಅವನಿಗೆ ಪ್ರಾಣಿಕುಲದ ಒಬ್ಬ ಸದಸ್ಯನ ಸ್ಥಾನವನ್ನು ಮಾತ್ರ ಕೊಟ್ಟಿತು. ಇದೆಲ್ಲ ಕೆಲ ಮತಾಂಧರಿಗೆ ಸಹ್ಯವಾಗಲಿಲ್ಲ.

ವಿಜ್ಞಾನವನ್ನೂ, ಮತಧರ್ಮವನ್ನೂ ಹೇಗೆ ಒಂದುಗೂಡಿಸಬೇಕು ? ಬೈಬಲ್ಲಿನಲ್ಲಿರುವುದನ್ನು ಅಕ್ಷರಶಃ ಸತ್ಯ ಎಂದು ಭಾವಿಸಬೇಕೆ, ಇಲ್ಲವೇ ? ಅದು ಸಾಂಕೇತಿಕವೇ ? ಅಲ್ಲಿ ಉಲ್ಲೇಖಿಸಿರುವ ದೇವರ ಒಂದು ದಿನ ನಮ್ಮ ಕೋಟಿ ವರ್ಷಗಳಾಗಬಾರದೇಕೆ ? ಬ್ರಹ್ಮನ ನೂರು ವರ್ಷಗಳು ನಾಲ್ಕು ಯುಗಗಳಿಗೆ ಸಮನಾಗಿ, ಬ್ರಹ್ಮ ನೂರು ತಲುಪುತ್ತಿದ್ದಂತೆ ಪ್ರಳಯವಾಗುತ್ತದೆ ಎಂದು ಕೇಳಿದ್ದೇವಲ್ಲ, ಹಾಗೆಯೇ, ದೇವರ ಏಳು ದಿನಗಳು ಭೂಮಿಯ ವಿಕಾಸಕ್ಕೆ ವಿಜ್ಞಾನ ಕೊಡುತ್ತಿರುವ ಮಿತಿಯೇ ಇರಬಹುದಷ್ಟೆ? ಈ ರೀತಿಯ ತರ್ಕದಿಂದ ಕೆಲವರು ಸಮಾಧಾನ ಹೊಂದುತ್ತಾರೆ. ಮತ್ತೆ ಕೆಲವರಿಗೆ ಅಂತಹ ತರ್ಕ ಬೇಕಾಗಿಲ್ಲ. ಇಲ್ಲವೇ ಸಾಕಾಗುವುದಿಲ್ಲ. ಹೇಗಾದರೂ ಮಾಡಿ ವಿಕಾಸವಾದವನ್ನೇ ತಪ್ಪು ಎಂದು ತೋರಿಸಿಬಿಟ್ಟರೆ ಸಮಸ್ಯೆಯೇ ಇರುವುದಿಲ್ಲ ಎನ್ನುವುದು ಅವರ ಆಶಯ. ಆದ್ದರಿಂದಲೇ ಡಾರ್ವಿನ್ನರ ಪುಸ್ತಕ ಪ್ರಕಟವಾಗುತ್ತಿದ್ದಂತೆ ಪ್ರತಿಭಟನೆಗಳ ಸುರಿಮಳೆಯೇ ಪ್ರಾರಂಭವಾಯಿತು. ಹಾಗೆಯೇ, ವಿಕಾಸವಾದದ ವಿರುದ್ಧ ವ್ಯಕ್ತವಾದ ಪ್ರತಿಭಟನೆಯ ಪ್ರತಿಯಾಗಿ ಕೆಲವಿಜ್ಞಾನಿಗಳು ಅದರ ಬೆಂಬಲಕ್ಕೆ, ಸಮರ್ಥನೆಗೆ ನಿಂತರು. ವಿಲ್ಬೋರ್ಸ್ ಎಂಬ ಹೆಸರಿನ ಪಾದ್ರಿ ಡಾರ್ವಿನ್ನನ ವಿಕಾಸವಾದವನ್ನು ಬಹಳ ಹೀಯಾಳಿಸುತ್ತಿದ್ದರು. ಸಮರ್ಥನೆಗೆ ನಿಂತ ಅತಿ ಹೆಸರಾಂತ ವಿಜ್ಞಾನಿ ಥಾಮಸ್ ಹಕ್ಸ್ಲಿ ಎಂಬುವವರು. ಒಮ್ಮೆ ಹಕ್ಸ್ಲಿ ಹಾಗೂ ವಿಲ್ಬೋರ್ಸ್ ನಡುವೆ ಸಾರ್ವಜನಿಕ ಚರ್ಚೆ ಏರ್ಪಡಿಸಲಾಯಿತು. ಇಬ್ಬರೂ ಪರ, ವಿರೋಧ ಬಿಸಿಬಿಸಿ ಚರ್ಚೆಗೆ ಇಳಿದರು. ಚರ್ಚೆಯ ನಡುವೆ ವಿಲ್ಬೋರ್ಸ್ ಹಕ್ಸ್ಲಿಯವರನ್ನು ''ನೀವು ಕೋತಿಗಳ ಜಾತಿಯಲ್ಲಿ ಹುಟ್ಟಿದ್ದು ನಿಮ್ಮ ಅಜ್ಜಿಯ ಕಡೆಯಿಂದಲೋ, ಅಜ್ಜನ ಕಡೆಯಿಂದಲೋ'' ಎನ್ನುವ ಅರ್ಥ ಬರುವ ಮಾತಿನಿಂದ ಚುಚ್ಚಿದರು. ಹಕ್ಸ್ಲಿ ಅದಕ್ಕೆ ಮಾರ್ಮಿಕವಾಗಿ ''ಇಬ್ಬರ ಕಡೆಯೂ ವಾನರ ಜಾತಿಯಾದರೂ ಚಿಂತೆಯಿಲ್ಲ. ಮನುಷ್ಯನಿಗೆ ಸಹಜವಾಗಿರುವ ಬುದ್ಧಿಮತ್ತೆಯನ್ನು ಸತ್ಯದಿಂದ ನುಣಿಚಿಕೊಳ್ಳಲು ಬಳಸುವ  ಅಭ್ಯಾಸವಿರುವವರ ಮನೆತನ ಆಗಿರದಿದ್ದರೆ ಸಾಕು'' ಎಂದು ಮರುಚುಚ್ಚಿದರು. ನಂತರದ ದಿನಗಳಲ್ಲಿ ವಿಕಾಸವಾದವನ್ನು ತಪ್ಪೆಂದು ತೋರಿಸಲು ಹರಸಾಹಸ ನಡೆದಿದೆ. ವಿಜ್ಞಾನದಲ್ಲಿ ಸಾಧಾರಣವಾಗಿ ಯಾವುದೇ ಪ್ರಕೃತಿ ನಿಯಮಗಳ ಸತ್ಯ ಕಂಡುಕೊಳ್ಳಲು ಪ್ರಯೋಗಗಳನ್ನು ಮಾಡುತ್ತೇವೆ. ಉದಾಹರಣೆಗೆ, ಹೈಡ್ರೋಜನ್ (ಜಲಜನಕ) ಮತ್ತು ಆಕ್ಸಿಜನ್ (ಆಮ್ಲಜನಕ) ಸೇರಿ ಉರಿದಾಗ ನೀರು ದೊರೆಯುತ್ತದೆಂದು ರಸಾಯನ ವಿಜ್ಞಾನ ಹೇಳುತ್ತದೆ. ಇದರ ಸತ್ಯವನ್ನು ಯಾರು ಬೇಕಾದರೂ, ಎಲ್ಲಿ ಬೇಕಾದರೂ ಪ್ರಯೋಗ ನಡೆಸಿ ಕಂಡುಕೊಳ್ಳಬಹುದು. ಇಂತಹ ಪ್ರಯೋಗಗಳಿಂದ ವಿಕಾಸವಾದದ ಪರೀಕ್ಷೆ ನಡೆಸುವುದು ಅಸಾಧ್ಯ. ಏಕೆಂದರೆ ಜೀವವಿಕಾಸವು ೩೦೦ ಕೋಟಿ ವರ್ಷಗಳಲ್ಲಿ ನಡೆದ ಬದಲಾವಣೆ. ''೩೦೦ ಕೋಟಿ ವರ್ಷಗಳ ಪ್ರಯೋಗ ಮಾಡುವುದು ಸಾಧ್ಯವಿಲ್ಲ. ವಿಕಾಸವಾದ ಸರಿಯೋ, ತಪ್ಪೋ ಎಂಬುದನ್ನು ವೈಜ್ಞಾನಿಕ ಮಾರ್ಗದಿಂದ ಪರೀಕ್ಷೆ ಮಾಡುವುದು ಸಾಧ್ಯವಿಲ್ಲ. ಆದ್ದರಿಂದ ವಿಕಾಸವಾದ ಅವೈಜ್ಞಾನಿಕ'' ಎಂದು ವಾದಿಸುವುದು ವಿಕಾಸವಾದವನ್ನು ಸುಳ್ಳಾಗಿಸುವ ಇಂತಹ ಒಂದು ಪ್ರಯತ್ನ. ಈ ಅಂಶವನ್ನೇ ಮುಖ್ಯವಾಗಿಟ್ಟುಕೊಂಡು ೧೯೨೫ರಲ್ಲಿ ಕೆಲಜನ ಜೀವವಿಕಾಸವನ್ನು ತಮ್ಮ ಮಕ್ಕಳಿಗೆ ಶಾಲೆಗಳಲ್ಲಿ ಬೋಧಿಸಬಾರದು ಎಂದು ನ್ಯಾಯಾಲಯದ ಕಟ್ಟೆ ಹತ್ತಿದರು. ನ್ಯಾಯಾಲಯದಿಂದ ನಡೆದ ವಾದ ವಿವಾದಗಳು ''ಸ್ಕೋಪನ ಜಗಳ'' ಎಂದು ಪ್ರಸಿದ್ಧಿಯಾಗಿವೆ. ಜೀವವಿಕಾಸ ವೈಜ್ಞಾನಿಕವಲ್ಲ, ದೈವಸೃಷ್ಟಿಯೇ ಮನುಷ್ಯನ ಅಸ್ತಿತ್ವಕ್ಕೆ ಕಾರಣ. ಜೀವವಿಕಾಸವನ್ನು ಬೋಧಿಸುವುದು ಮಕ್ಕಳ ನೈತಿಕತೆಯನ್ನು ಕೆಡಿಸುತ್ತದೆ. ಆದ್ದರಿಂದ ಜೀವವಿಕಾಸವನ್ನು ಬೋಧಿಸಬಾರದು ಎಂಬ ವಾದವನ್ನು ಮುಂದಿಟ್ಟರು. ಹಾಗೆ ಬೋಧಿಸಿದ್ದೇ ಆದರೆ, ಅದಕ್ಕೆ ಕೊಟ್ಟಷ್ಟೇ ಪ್ರಾಮುಖ್ಯತೆಯನ್ನು ಮಾನವನ ಉಗಮಕ್ಕೆ ದೈವಸೃಷ್ಟಿಯೇ ಕಾರಣ ಎಂಬ ಕಲ್ಪನೆಗೂ ಕೊಡಬೇಕು ಎಂದು ವಾದಿಸಿದರು. ವಿಜ್ಞಾನಿಗಳೂ ನ್ಯಾಯಾಲಯದಲ್ಲಿ ವಿಕಾಸವಾದವನ್ನು ಸಮರ್ಥಿಸಿಕೊಳ್ಳಬೇಕಾಯಿತು. ಜೀವ

ವಿಕಾಸಕ್ಕಿರುವ ವೈಜ್ಞಾನಿಕ ಆಧಾರಗಳನ್ನೆಲ್ಲಾ ಪ್ರದರ್ಶಿಸ ಬೇಕಾಯಿತು. ಅಂತಿಮ ತೀರ್ಮಾನ ವಿಜ್ಞಾನಿಗಳ ಕಡೆಗೇ ಆಯಿತು. ನಂತರದ ದಶಕಗಳಲ್ಲಿ ಪದೇಪದೇ ಜೀವ ವಿಕಾಸದ ವಿರುದ್ಧ ನ್ಯಾಯಾಲಯಕ್ಕೆ ಇಳಿಯುವುದು, ಜೀವವಿಕಾಸದ ಬೋಧನೆಗೆ ತೊಡಕುಂಟುಮಾಡುವುದು ಮುಂತಾದ ಚಟುವಟಿಕೆಗಳು ಅಮೆರಿಕಾದ ಹಲವಾರು ರಾಜ್ಯಗಳಲ್ಲಿ ನಡೆದೇ ಇದೆ. ೨೧ನೆಯ ಶತಮಾನದಲ್ಲೇ (೨೦೦೦-೨೦೦೯) ಐದು ಬಾರಿ ವಿಜ್ಞಾನಿಗಳು ನ್ಯಾಯಾಲಯದಲ್ಲಿ ವಾದಿಸುವುದು ಅನಿವಾರ್ಯ ಎನಿಸಿದೆ. ಕೆಲವು ರಾಜ್ಯಗಳಲ್ಲಿ ವಿಕಾಸವಾದದ ಬೋಧನೆಗೆ ತಾತ್ಕಾಲಿಕವಾಗಿ ಮಿತಿಗಳನ್ನು ಹಾಕಲಾಗಿದೆ. ಆದರೆ ವಿಜ್ಞಾನಿಗಳು ಇಂತಹ ತಡೆಗಳನ್ನು ತೆರವುಗೊಳಿಸಿದ್ದಾರೆ.

ದೈವಸೃಷ್ಟಿ ವಾದವನ್ನು ನಂಬಿದವರು ಇತ್ತೀಚೆಗೆ ಅದರ ವಿಷಯ ನೇರವಾಗಿ ಎತ್ತಿದರೆ ನ್ಯಾಯಾಲಯಗಳು ಮನ್ನಣೆ ನೀಡವು ಎಂಬುದನ್ನು ಮನಗಂಡು, ಬೇರೊಂದು ದಾರಿಯಿಂದ ವಿಕಾಸವಾದವನ್ನು ತಳ್ಳಿಹಾಕುವ ಹೊಂಚು ಹಾಕುತ್ತಿದ್ದಾರೆ. ದೈವಸೃಷ್ಟಿಯ ಹೆಸರೆತ್ತದೆ, ಅದರ ಜಾಗದಲ್ಲಿ ''ಇಂಟಲಿಜೆಂಟ್ ಡಿಸೈನ್ - ಜಾಣ ರಚನೆ'' ಎಂಬ ಕಲ್ಪನೆ ಭೂಮಿಯ ಮೇಲಿನ ಜೀವವ್ಯಾಪಾರವನ್ನು ಅರಿಯಲು ಡಾರ್ವಿನ್ನನ ವಿಕಾಸವಾದಕ್ಕಿಂತ ಹೆಚ್ಚು ಸೂಕ್ತ ಎಂದು ವಾದಿಸಲು ಪ್ರಾರಂಭ ಮಾಡಿದ್ದಾರೆ. ಹೊಸ ವಾದದ ತಿರುಳಿಷ್ಟು : ಸಹರಾ ಮರುಭೂಮಿಯಲ್ಲಿ ನಾವು ಒಂದು ಟೈಟನ್ ಗಡಿಯಾರ ನೋಡಿದೆವು ಎಂದು ಭಾವಿಸೋಣ. ಅಲ್ಲಿ ಬೀಸುವ ಭೋರಿಡುವ ಗಾಳಿಯಿಂದಲೇ ಗಡಿಯಾರ ಹುಟ್ಟಿಬಂದಿದೆಯೆಂದು ನಾವೇನೂ ನಂಬುವುದಿಲ್ಲ. ಬದಲಿಗೆ, ಅಲ್ಲಿಂದ ಹಾದುಹೋದ ಪ್ರಯಾಣಿಕ ಇನ್ನೊಬ್ಬ ಜಾಣ ಮಾಡಿದ ಗಡಿಯಾರವನ್ನು ಅಲ್ಲಿ ಬಿಟ್ಟು ಹೋಗಿರ ಬಹುದು ಎಂದುಕೊಳ್ಳುತ್ತೇವೆ. ಒಂದಾನೊಂದು ಕಾಲದಲ್ಲಿ ಭೂಮಿಯಲ್ಲಿ ಬರಿಯ ಭೋರಿಡುವ ಗಾಳಿಯೇ ಇದ್ದಿತು ಎಂದು ವಿಜ್ಞಾನವೇ ಹೇಳುತ್ತದೆ. ಈ ''ಮರುಭೂಮಿಯ ಭೋರಿಡುವ ಗಾಳಿಯೇ'' ಗಡಿಯಾರಕ್ಕಿಂತಲೂ ಲಕ್ಷಾಂತರ ಪಟ್ಟು ಸಂಕೀರ್ಣವಾದ ಮನುಷ್ಯನ ಸೃಷ್ಟಿಯನ್ನು ಹೇಗೆ ತಾನೇ ಮಾಡೀತು ? ಇದು ಎಂದಿಗೂ ಸಾಧ್ಯವಿಲ್ಲ. ಮನುಷ್ಯನಂತಹ ಬುದ್ಧಿಜೀವಿಯ ಉಗಮಕ್ಕೆ ಅನಂತ ಜಾಣತನವುಳ್ಳ ಬೇರೊಂದು ಶಕ್ತಿ ಬೇಕಾಗುತ್ತದೆ. ಇದನ್ನೇ ''ಇಂಟೆಲಿಜೆಂಟ್ ಡಿಸೈನ್'' ಎಂದು ಕರೆಯೋಣ. ಅದೇ ಜೀವವಿಕಾಸದ ಗುಟ್ಟು, ಡಾರ್ವಿನ್ನನ ವಿಕಾಸವಾದದಿಂದ ಜೀವಿಗಳ ಉಗಮವನ್ನು ವಿವರಿಸಲು ಸಾಧ್ಯವಿಲ್ಲ ಎನ್ನುವುದು ಇವರ ವಾದ. ಮೈಕೇಲ್ ಬೇಹೆ ಎಂಬ ಹೆಸರಾಂತ ಜೀವರಸಾಯನ ವಿಜ್ಞಾನಿ ವಿಕಾಸವಾದವನ್ನು ಖಂಡಿಸಿ 'ಡಾರ್ವಿನ್ನನ ಕಪ್ಪು ಪೆಟ್ಟಿಗೆ' (ಡಾರ್ವಿನ್ಸ್ ಬ್ಲ್ಯಾಕ್ ಬಾಕ್ಸ್) ಎಂಬ ಪುಸ್ತಕ ಬರೆದ. ಇಲ್ಲಿಯವರೆಗೆ ವಿಕಾಸವಾದದಲ್ಲಿ ಬಂದಿರುವ ಎಲ್ಲ ಅಂಶಗಳನ್ನೂ ವಿರೋಧಿಸಿ ಅವುಗಳು ವಿಶ್ವಾಸಾರ್ಹವಲ್ಲ ಎಂದು ತೋರಿಸುವುದೇ ಈ ಪುಸ್ತಕದ ಉದ್ದೇಶ. ಬಳಸುವ ವಿಧಾನಗಳೆಲ್ಲಾ ವಿಜ್ಞಾನದ ಅಂಗೀಕೃತ ಪ್ರಕ್ರಿಯೆ ಎಂಬಂತೆ ಕಾಣಬೇಕು. ತೀರ್ಮಾನ ವಿಕಾಸವಾದದ ವಿರೋಧ ಇರಬೇಕು.

ಬೇಹೆ ಅವರ ಪುಸ್ತಕದಲ್ಲಿ ವಿಕಾಸವಾದದ ವಿರುದ್ಧ ಇರುವ ಮುಖ್ಯ ಆಕ್ಷೇಪ ಜೀವಿಗಳಲ್ಲಿ ಕಂಡುಬರುವ ಅತಿ ಸಂಕೀರ್ಣ ವ್ಯವಸ್ಥೆಗಳು ಸಣ್ಣ ಸಣ್ಣ ಹೆಜ್ಜೆಗಳಲ್ಲಿ ಬದಲಾಗುವ ವಿಕಾಸದಿಂದ ಸಾಧ್ಯವಿಲ್ಲ ಎನ್ನುವುದು. ಉದಾಹರಣೆಗೆ, ನಮ್ಮ ಕಣ್ಣುಗಳನ್ನೇ ತೆಗೆದುಕೊಳ್ಳಿ. ಕಣ್ಣು ಕೆಲಸ ಮಾಡ ಬೇಕಾದರೆ ಪಾರದರ್ಶಕ ಕಣ್ಣುಗುಡ್ಡೆಯಂತಹ ಮಸೂರವಿರಬೇಕು. ಅದರ ಹಿಂದೆ ಬೆಳಕಿಗೆ ಸ್ಪಂದಿಸುವ ರೆಟಿನ ಪೊರೆಯಿರಬೇಕು. ರೆಟಿನ ಪೊರೆಯಿಂದ ಮೆದುಳಿಗೆ ಸಂದೇಶ ಕೊಂಡೊಯ್ಯುವ ನರವ್ಯೂಹವಿರಬೇಕು. ತಲುಪಿರುವ ಸಂದೇಶವನ್ನು ಹೊರಪ್ರಪಂಚದ ಪ್ರತಿಬಿಂಬವಾಗಿ ಕಾಣುವಂತೆ ಮಾಡುವ ಜಾಣತನ ಮೆದುಳಿಗಿರಬೇಕು. ಈ ವ್ಯವಸ್ಥೆಗಳೆಲ್ಲಾ ಒಟ್ಟಾರೆ ಕೆಲಸ ಮಾಡುತ್ತಿದ್ದರೆ ಮಾತ್ರ ನಮಗೆ 'ನೋಡಲು' ಸಾಧ್ಯವಾಗುತ್ತದೆ. ಇಷ್ಟೆಲ್ಲ ವ್ಯವಸ್ಥೆಗಳು ಒಮ್ಮೆಲೇ, ಒಟ್ಟಿಗೇ ವಿಕಾಸವಾಗುವ ಸಾಧ್ಯತೆ ಬಹಳ ಕಡಿಮೆ. ಒಂದಾದ ನಂತರ ಒಂದು ವ್ಯವಸ್ಥೆ ಕಾಣಿಸಿತು ಎನ್ನೋಣ. ಮೊದಲ ವ್ಯವಸ್ಥೆ ಕಾಣಿಸಿದ ಮಾತ್ರಕ್ಕೆ ಕಾರ್ಯಶಕ್ತ ಕಣ್ಣುಗಳು ಬರುವುದಿಲ್ಲ.




ಆದ್ದರಿಂದ, ಮೊದಲು ಆದ ಬದಲಾವಣೆಯಿಂದ ಉಪಯೋಗವಾಗುವುದಿಲ್ಲ. ಯಾವುದೇ ಉಪಯೋಗ ಇಲ್ಲದುದರಿಂದ ಅಂತಹ ಬದಲಾವಣೆಗಳನ್ನು ಹೊಂದಿದ ಪ್ರಾಣಿಗಳಿಗೆ ಯಾವುದೇ ಅನುಕೂಲವಾಗುವುದಿಲ್ಲ. ಪ್ರಕೃತಿ ಅದರ ಸಂತಾನವನ್ನು ವಿಶೇಷವಾಗಿ ಆಯ್ಕೆ ಮಾಡುವುದಿಲ್ಲ. ಆದ್ದರಿಂದ ಅದರ ವಂಶ ಬೆಳೆಯಲಾರದು. ಆಗ ಆಕಸ್ಮಿಕವಾಗಿ ಉಂಟಾದ ಬದಲಾವಣೆ ಮುಂದಿನ ಸಂತತಿಗಳಿಗೆ ಹರಡದಿರಬಹುದು. ಇನ್ನೂ ಆಗಬೇಕಿರುವ ಬದಲಾವಣೆಗಳು ಆಕಸ್ಮಿಕವಾಗಿ ಸಂಭವಿಸುವುದಕ್ಕಿಂತ ಮೊದಲೇ ಮೊದಲ ಬದಲಾವಣೆ ಹೊಂದಿದ ಪ್ರಾಣಿ ನಶಿಸಿರುತ್ತದೆ ಇಲ್ಲವೇ ಮೊದಲು ಉಂಟಾದ ಬದಲಾವಣೆ ಪುನಃ ಬದಲಾಗಿ ನಿರುಪಯುಕ್ತವಾಗಿರುತ್ತದೆ. ಆದ್ದರಿಂದ ಕಣ್ಣುಗಳು 'ಜಾಣ ರಚನೆಗೆ' ಪುರಾವೆಯೇ ಹೊರತು ಜೀವವಿಕಾಸಕ್ಕಲ್ಲ. ಕಣ್ಣುಗಳು ಒಮ್ಮೆಗೇ ಅವು ಈಗಿರುವಂತೆಯೇ ಸೃಷ್ಟಿಯಾಗಿರಬೇಕು. ಡಾರ್ವಿನ್ನರ ವಿಕಾಸವಾದ ಹೇಳುವಂತೆ ಸಣ್ಣ ವ್ಯತ್ಯಾಸಗಳು ಸೇರಿ ಕೊಳ್ಳುವುದರಿಂದ ಕಣ್ಣುಗಳು ಅವತರಿಸಲು ಸಾಧ್ಯವಿಲ್ಲ. ಇದು ಬೇಹೆಯವರ ವಾದ.

ಬೇಹೆಯವರ ವಾದಕ್ಕೆ ಪ್ರತ್ಯುತ್ತರವನ್ನು ಇತರರು ಕೊಟ್ಟಿದ್ದಾರೆ. ಅರ್ಧ ಮೂಡಿದ ಕಣ್ಣು ನಿರುಪಯುಕ್ತ ಎನ್ನುವುದು ಸ್ವತಃಸಿದ್ಧವಲ್ಲ. ಅರೆ ಕುರುಡು ಕಣ್ಣಿರುವುದೂ ಪೂರ್ಣ ಕುರುಡು ಕಣ್ಣಿಗಿಂತ ಉತ್ತಮವಲ್ಲವೇ ? ಪ್ರಕೃತಿಯಲ್ಲಿ ಅನೇಕ ಮಾದರಿಯ ಕಣ್ಣುಗಳು ಬೇರೆ ಬೇರೆ ಪ್ರಾಣಿಗಳಲ್ಲಿ ಕಂಡುಬರುತ್ತವೆ. ಕೆಲವು ಪ್ರಾಣಿಗಳಲ್ಲಿ ಕಣ್ಣುಗಳಿಲ್ಲ, ಬದಲಿಗೆ ಬೆಳಕಿಗೆ ಸ್ಪಂದಿಸುವ ಭಾಗವಿದೆ. ಈ ಭಾಗವೇ ಅವು ಬದುಕುವ ಸಾಧ್ಯತೆಯನ್ನು ಹೆಚ್ಚಿಸುತ್ತದೆ. ಮನುಷ್ಯರ ಕಣ್ಣುಗಳಿಗಿಂತ ಸೂಕ್ಷ್ಮವಾದ, ರಾತ್ರಿಯಲ್ಲೂ ಬೇಟೆಯಾಡಲು ಸಾಧ್ಯವಿರುವ ಕಣ್ಣುಗಳನ್ನು ಹೊಂದಿರುವ ಪ್ರಾಣಿಗಳಿವೆ. ಕಣ್ಣುಗಳೇ ಇಲ್ಲದ ಪ್ರಾಣಿಗಳಿಂದ ಪ್ರಾರಂಭಿಸಿ, ಅತಿಸೂಕ್ಷ್ಮ ಕಣ್ಣುಗಳವರೆಗೆ ಎಲ್ಲ ಹಂತದ ಕಣ್ಣುಗಳೂ ಪ್ರಕೃತಿಯಲ್ಲಿ ಕಂಡುಬರುತ್ತವೆ. ಆದ್ದರಿಂದ ಕಣ್ಣಿನ ವಿಕಾಸ ಜೀವವಿಕಾಸವಾದದ ನಿಯಮಗಳ ಅಡಿಯಲ್ಲೇ ನಡೆದಿದೆಯೆಂದು ತೀರ್ಮಾನಿಸ ಬಹುದು. ಜೊತೆಗೆ, ಮನುಷ್ಯರ ಕಣ್ಣುಗಳೇನೂ 'ಅತಿ ಚತುರ' ರಚನೆಗಳಲ್ಲ. ಅವುಗಳಲ್ಲಿ ರಕ್ತ ನಾಳಗಳಿವೆ. ಇದರಿಂದ ಅನೇಕ ಬಾರಿ ರಕ್ತಸ್ರಾವವಾಗಿ ಕಣ್ಣುಗಳಿಗೆ ಹಾನಿಯಾಗುವ ಸಂಭವವಿದೆ. 'ಚತುರ ರಚನೆ' ಆಗಿದ್ದಲ್ಲಿ ಇಂತಹ ತೊಂದರೆಗಳು ಇಲ್ಲದ ಕಣ್ಣುಗಳಿರಬಹುದಿತ್ತು.

ಕ್ರಿಶ್ಚಿಯಾನಿಟಿಯಂತೆ ಇಸ್ಲಾಂ ಸಹ ಜೀವವಿಕಾಸದ ವಿರುದ್ಧ ಸಮರ ಸಾರಿದೆ. ಕೊರಾನ್ ಕೂಡ ದೈವ ಸೃಷ್ಟಿಯನ್ನು ಸಮರ್ಥಿಸುತ್ತದೆ. ಅದರಲ್ಲಿಯ ಜೀವಸೃಷ್ಟಿಯ ನಂಬಿಕೆಗಳು ಕ್ರಿಶ್ಚಿಯನ್ ಮತದವೇ ಆಗಿವೆ. ಆದರೆ ಮುಸ್ಲಿಮ್ ದೇಶಗಳಲ್ಲಿ ಜೀವವಿಕಾಸವಾದದ ಆಳ ಪರಿಚಯ ಇಲ್ಲದುದರಿಂದ ವಿರೋಧದ ಧ್ವನಿ ಕ್ಷೀಣವಾಗಿದೆ. ಇತ್ತೀಚೆಗೆ 'ಹಾರುಣ್ ಯಾಹ್ಯ' ಎಂಬ ಹೆಸರಿನಲ್ಲಿ ಬರೆಯುತ್ತಿರುವ ಒಬ್ಬರು, ಡಾರ್ವಿನ್ನರ ವಿರುದ್ಧ ಕಿಡಿಕಾರಿದ್ದಾರೆ. ಡಾರ್ವಿನ್ ವಿಕಾಸವಾದ ಅಪಾಯಕಾರಿ, ಅದರಿಂದ ಸಮಾಜದಲ್ಲಿ ನೈತಿಕತೆ ಭ್ರಷ್ಟವಾಗುತ್ತದೆ, ಇವೇ ಮುಂತಾದ ಅನೇಕ ಆರೋಪಗಳನ್ನು ಮಾಡಿದ್ದಾರೆ. ಈ ಚಿಂತನೆಗಳ ಬಗ್ಗೆ ಹಲವಾರು ಪುಸ್ತಕಗಳನ್ನು ಪ್ರಕಟಿಸಿದ್ದಾರೆ.

ವಿಕಾಸವಾದವನ್ನು ತಿರುಚಿ, ಅದಕ್ಕಿರದ ಅರ್ಥವನ್ನು ಅದರ ಮೇಲೆ ಆರೋಪಿಸಿ, ತಮ್ಮ ಸ್ವಂತ ದುರಾಲೋಚನೆಗೆ ಅದರಿಂದ ಉತ್ತೇಜನ ಪಡೆಯುವ ವರಿಂದಲೂ ವಿಕಾಸವಾದಕ್ಕೆ ಅಪಖ್ಯಾತಿ ಬಂದಿದೆ. ಈ (ಕು)ತರ್ಕಗಳನ್ನು (ಯೂಜೆನಿಕ್ಸ್) ಅಥವಾ 'ಮಾವನ ತಳಿ ಅಭಿವೃದ್ಧಿ' ಎಂಬ ಹೆಸರಿನಲ್ಲಿ ಮುಂದಿಡಲಾಗಿದೆ. ಈ ದಾರಿಯಲ್ಲಿ ಯೋಚಿಸಿದ ಮೊದಲಿಗರಲ್ಲೊಬ್ಬ ಡಾರ್ವಿನ್ನನ ಸೋದರ ಸಂಬಂಧಿಯಾದ ಗಾಲ್ಟನ್ ಎನ್ನುವವರು. ಕೃಷಿಯಲ್ಲಿ ಹೆಚ್ಚು ಇಳುವರಿ ಕೊಡುವ ತಳಿಗಳನ್ನು ಅಭಿವೃದ್ಧಿಪಡಿಸಿರುವಂತೆ ಮಾನವ ತಳಿಯನ್ನೂ ಉತ್ತಮಗೊಳಿಸಬೇಕು ಎನ್ನುವುದು ಇವರ ಹಂಬಲ. ''ಡಾರ್ವಿನ್ನನ ವಿಕಾಸವಾದ ಬಲಿಷ್ಠ ಪ್ರಾಣಿಯ ಉಳಿವು ಸಹಜ ಎನ್ನುತ್ತದೆ. ಆದ್ದರಿಂದ ಆನುವಂಶಿಕ ರೋಗಗಳು ಅಥವಾ ದಡ್ಡತನವಿರುವ ಜನರಿಗೆ ಸಂತಾನ ಪಡೆಯುವ, ತಮ್ಮ ವಂಶವಾಹಿ ಮಾಹಿತಿಯನ್ನು ಇನ್ನೊಂದು ಪೀಳಿಗೆಗೆ ವರ್ಗಾಯಿಸುವ ಹಕ್ಕನ್ನು ಕೊಡದಿರುವುದು ನ್ಯಾಯಸಮ್ಮತ'' ಎನ್ನುವುದು ಇವರ ವಾದ. ಇಂತಹ ತರ್ಕವೇ ಕೆಲವು ದೇಶಗಳಲ್ಲಿ, ಅದರಲ್ಲೂ ಅಮೆರಿಕಾದ ಸಂಯುಕ್ತ ಸಂಸ್ಥಾನದಲ್ಲಿ, ಕೆಲ ಪದ್ಧತಿಗಳು ಜಾರಿಗೆ ಬರಲು ಕಾರಣವಾಯಿತು. ಇದರಿಂದಾಗಿ, 'ಬುದ್ಧಿಮಾಂದ್ಯ'

ಎಂದು ಪರಿಗಣಿಸಿದ ಕೆಲವರನ್ನು ಬಲವಂತವಾಗಿ ಸಂತಾನಹರಣ ಚಿಕಿತ್ಸೆಗೆ ಒಳಪಡಿಸಲಾಯಿತು. ಇಂತಹ ಸಂತಾನಹರಣ ಚಿಕಿತ್ಸೆಗೆ ಒಳಗಾದ ಹೆಚ್ಚಿನವರು ಕಪ್ಪು ವರ್ಣದವರಾಗಿದ್ದರು. ಈ ಯೋಚನಾ ಲಹರಿಯ ಅತಿದೊಡ್ಡ ಪ್ರಯೋಗ ಮಾಡಿದವನು ಹಿಟ್ಲರ್. ಜರ್ಮನ್ ಜನಾಂಗ ಉಳಿದ ಜನಾಂಗಗಳಿಗಿಂತ ಮೇಲು, ಇನ್ನೆಲ್ಲಾ ಜನರೂ ಜರ್ಮನ್ನರ ಅಡಿಯಲ್ಲಿ ಬದುಕಬೇಕು ಎನ್ನುವುದು ಹಿಟ್ಲರನಿಗೆ ನ್ಯಾಯಸಮ್ಮತವಾಗಿ ಕಂಡಿತು. ಇವರೆಲ್ಲ ತಮ್ಮ ದುರಾಲೋಚನೆಗಳನ್ನು ಡಾರ್ವಿನ್ನರ ವಿಕಾಸವಾದದಿಂದ ಸಮರ್ಥಿಸಿಕೊಂಡರು. ಇತ್ತೀಚೆಗೆ, ಅಮೆರಿಕಾದಲ್ಲಿ ನೊಬೆಲ್ ಪಾರಿತೋಷಕ ಪಡೆದ ಒಬ್ಬ ವಿಜ್ಞಾನಿ, ನೊಬೆಲ್ ಪ್ರಶಸ್ತಿ ವಿಜೇತರ ವೀರ್ಯಾಣು ಬ್ಯಾಂಕ್ ಪ್ರಾರಂಭಿಸಿದರು. ಅತ್ಯಂತ ಮೇಧಾವಿ ಮತ್ತು ಸದೃಢ ದೇಹ ಹೊಂದಿದ ಸ್ತ್ರೀಯರು ಈ ವೀರ್ಯ ಪಡೆದು ಮಕ್ಕಳಿಗೆ ಜನ್ಮಕೊಟ್ಟರೆ, 'ಮಾನವ ತಳಿ' ಅಭಿವೃದ್ಧಿಯಾಗುತ್ತದೆ ಎನ್ನುವುದು ಇವರ ಅಭಿಪ್ರಾಯ. ಇಂತಹ ತರ್ಕಗಳಿಗೂ ಡಾರ್ವಿನ್ನನ ವಿಕಾಸವಾದಕ್ಕೂ ಯಾವುದೇ ಸಂಬಂಧವಿಲ್ಲ. ಎಲ್ಲ ವೈಜ್ಞಾನಿಕ ನಿಯಮಗಳಂತೆ ವಿಕಾಸವಾದವೂ ನೈತಿಕವಾಗಿ ತಟಸ್ಥ. ಅದು ಜೀವವಿಕಾಸ ನಡೆದುಬಂದ ದಾರಿಯ ವಿವರಣೆ ಮಾತ್ರ. ಮುಂದೆ ಜೀವವಿಕಾಸ ಹೇಗಾಗಬೇಕು ಎನ್ನುವುದನ್ನು ಅದು ಹೇಳುವುದಿಲ್ಲ. ಭೂಮಿಯಲ್ಲಿ ಬದುಕುವ ಹಕ್ಕು ಯಾರು ಯಾರಿಗಿದೆ ಎನ್ನುವ ಪ್ರಶ್ನೆಯೂ ಜೀವವಿಕಾಸವಾದದ ಪರಿಧಿಯಲ್ಲಿ ಬರುವುದಿಲ್ಲ. ಅದು ನೈತಿಕ ಪ್ರಶ್ನೆಗಳಿಗೆ ಉತ್ತರ ಕೊಡಲಾರದು.

ನಮ್ಮ ದೇಶದಲ್ಲಿ ವಿಕಾಸವಾದ ಅಷ್ಟು ಟೀಕೆಗೆ ಗುರಿಯಾಗಿಲ್ಲ. ಇದಕ್ಕೆ ಹಲವಾರು ಕಾರಣಗಳನ್ನು ಸೂಚಿಸಬಹುದು : (೧) ನಮ್ಮ ಶಾಲೆಗಳಲ್ಲಿ ಓದುವವರಿಗೆ ಅದರ ಬಗ್ಗೆ ಸ್ಪಷ್ಟ ಕಲ್ಪನೆಯಿಲ್ಲ. ನಮ್ಮ ಧಾರ್ಮಿಕ ಮುಖಂಡರಲ್ಲಿ ಹೆಚ್ಚಿನವರಿಗೆ ಡಾರ್ವಿನ್ನನ ವಿಕಾಸವಾದ ತಿಳಿದಿಲ್ಲ. ಜೊತೆಗೆ, ಸಂಗೀತ ಮತ್ತು ನೃತ್ಯಗಳು ನಮ್ಮ ಸಾಮಾಜಿಕ ಜೀವನದ ಅವಿಭಾಜ್ಯ ಅಂಗಗಳಾಗಿರುವಂತೆ, ವಿಜ್ಞಾನ ಆಗಿಲ್ಲ. ವಿಜ್ಞಾನ ನಮ್ಮ ಹಿತ್ತಲ ಕೂಸಲ್ಲ. ಇನ್ನೊಬ್ಬರ ಮನೆಯ ಕೂಸಿನ ಬಗ್ಗೆ ನಾವು ತಲೆ ಕೆಡಿಸಿಕೊಳ್ಳುವುದಿಲ್ಲ ಎನ್ನುವ ಧೋರಣೆ ಇದೆ. ನಮ್ಮ ಬದುಕಿನ ಸೊಗಡನ್ನು ಮೈಗೂಡಿಸಿಕೊಂಡಿರುವ ದೇಶಭಾಷೆಗಳಲ್ಲಿ ವಿಜ್ಞಾನದ ಮಾಹಿತಿ ದೊರೆಯುವುದಿಲ್ಲ. ಅದೇನಿದ್ದರೂ ನಮ್ಮದಲ್ಲದ ಇಂಗ್ಲಿಷಿಗೆ ಸೇರಿದ್ದು. ಪಾಶ್ಚಿಮಾತ್ಯ ದೇಶಗಳಲ್ಲಿ ನಡೆಸಿದ ಒಂದು ಸಮೀಕ್ಷೆಯ ಪ್ರಕಾರ ಅಲ್ಲಿಯ ಶೇ. ೯೯ ರಷ್ಟು ವಿಜ್ಞಾನಿಗಳು ಮನುಷ್ಯನು ದೈವಸೃಷ್ಟಿಯಲ್ಲ ಎಂದು ನಂಬುತ್ತಾರೆ. ಎರಡು

## ಅಳಿಲು ಸೇವೆ

ರಾಮಾಯಣ ಓದದವರು
ಏನು ಬಲ್ಲರು ?
ಅಳಿಲು ಸೇವೆಯ ಮಹತ್ವ
ಮತ್ತು ಹನುಮ
ಬೆಟ್ಟ ಹೊತ್ತ ಕಷ್ಟ!

**ಡಿ. ವಿ. ಬಡಿಗೇರ**
ತೆಗ್ಗಿನ ಪೇಟೆ ಓಣಿ, ಗದಗ - ಬೆಟಗೇರಿ - ೫೮೨ ೧೦೨

ವರ್ಷಗಳ ಹಿಂದೆ ಅಂತಹುದೇ ಸಮೀಕ್ಷೆಯನ್ನು ಇಂಗ್ಲೆಂಡಿನ ಟ್ರಿನಿಟಿ ಕಾಲೇಜಿನವರು ನಮ್ಮ ದೇಶದಲ್ಲಿ ನಡೆಸಿದರು. ನಮ್ಮ ದೇಶದ ವಿಜ್ಞಾನಿಗಳು ಶೇ. ೨೯ರಷ್ಟು ವಿಜ್ಞಾನಿಗಳು ತಮಗೆ ಕರ್ಮಸಿದ್ಧಾಂತದಲ್ಲಿ ನಂಬಿಕೆ ಇರುವುದನ್ನೂ, ಶೇ. ೨೪ರಷ್ಟು ವಿಜ್ಞಾನಿಗಳು ತಾವು ಪುನರ್ಜನ್ಮವಿರುವುದನ್ನು ನಂಬುತ್ತೇವೆಂದೂ ಹೇಳಿಕೊಂಡರು. ಶೇ. ೯೩ರಷ್ಟು ವಿಜ್ಞಾನಿಗಳು ಜಾತ್ಯತೀತತೆ ಎಂದರೆ ಎಲ್ಲ ಧರ್ಮಗಳ ಸಹಿಷ್ಣುತೆ ಎಂದು ಹೇಳಿಕೊಂಡರು. ಕೆಲವೇ ಮಂದಿ ಜಾತ್ಯತೀತತೆ ಎಂದರೆ ನಾಸ್ತಿಕತೆ ಎಂಬುದಾಗಿ ಅಭಿಪ್ರಾಯಪಟ್ಟರು. ಇಂತಹ ಸಮೀಕ್ಷೆಗಳ ಫಲಿತಾಂಶಗಳನ್ನು ಪೂರ್ಣ ನಂಬಬೇಕಾಗಿಲ್ಲ. ಸಮೀಕ್ಷೆಗಳಲ್ಲಿ ಒಂದು ಬಗೆಯ ನಂಬಿಕೆ ಇಟ್ಟುಕೊಂಡವರು ತಮ್ಮ ಅಭಿಪ್ರಾಯ ತಿಳಿಸಲು ಹಿಂಜರಿಯಬಹುದು. ಅನೇಕರು ಅಂತಹ ಸಮೀಕ್ಷೆಗೆ ಸ್ಪಂದಿಸದಿರಬಹುದು. ಇವುಗಳಿಂದ ಸಮೀಕ್ಷೆಯ ಬೆಲೆ ತಗ್ಗುತ್ತದೆ. ಆದರೂ ಸಮೀಕ್ಷೆಯ ಫಲಿತಾಂಶದಲ್ಲಿ ಬಹುದೊಡ್ಡ ವ್ಯತ್ಯಾಸ ಕಂಡುಬಂದರೆ, ಅದರ ಫಲಿತಾಂಶ ಸಮಾಜದ ನಂಬಿಕೆಗಳ ಪ್ರತಿಫಲನ ಎಂದು ನಂಬಲು ಅಡ್ಡಿಯಿಲ್ಲ. (೨) ನಮ್ಮ ದೇಶದ ಧರ್ಮಗಳಲ್ಲಿ ಒಮ್ಮತವಿಲ್ಲ. ಕಾಲಕಾಲಕ್ಕೆ ಅವು ಬಹಳಷ್ಟು ಬದಲಾಗಿವೆ. ವೇದಗಳಲ್ಲಿ ಭಕ್ತಿಪೂರಿತ ದೀನತೆ ಹೆಚ್ಚಾಗಿ ಕಂಡುಬರುವುದಿಲ್ಲ. ಇಂದಿನ ಹೆಚ್ಚಿನ ದೇವತೆಗಳು ವೇದಗಳಲ್ಲಿಲ್ಲ. ನಂತರದ ಉಪನಿಷತ್ತುಗಳು



ವೇದಗಳನ್ನು ಆಧರಿಸಿದವು ಎಂದು ಹೇಳಿಕೊಂಡರೂ, ವೇದಗಳಿಗೆ, ಅಲ್ಲಿಯ ಸೂಕ್ತಗಳಿಗೆ ಹೆಚ್ಚಿನ ಸ್ಥಾನವನ್ನು ಕೊಡುವುದಿಲ್ಲ. ನಂತರದ ಪುರಾಣಗಳಲ್ಲಿ ಇಂದಿನ ದೇವತೆಗಳು ಕಾಣಿಸಿಕೊಳ್ಳುತ್ತಾರೆ. ದೈನ್ಯ ಭಕ್ತಿ ಪ್ರಧಾನವಾಗುತ್ತದೆ. ಅದ್ವೈತ, ದ್ವೈತ, ವಿಶಿಷ್ಟಾದ್ವೈತಗಳಲ್ಲಿ ಒಮ್ಮತವಿಲ್ಲ. ಆದ್ದರಿಂದ ಈ ಅನೇಕ ಯೋಚನಾ ಪ್ರಭೇದಗಳಲ್ಲಿ ಯಾವುದು ವಿಜ್ಞಾನಕ್ಕೆ ವಿರೋಧ ಎನ್ನಬೇಕು ? ಒಂದಕ್ಕೆ ವಿರೋಧವಾದರೆ, ಇನ್ನೊಂದಕ್ಕೆ ಹೊಂದಿಕೊಳ್ಳುತ್ತದೆ. ಈ ವಿವಿಧತೆಯೂ ನಮ್ಮಲ್ಲಿ ವಿಜ್ಞಾನದ ವಿರುದ್ಧ ಸಮರ ಸಾರುವಿಕೆಗೆ ತಡೆಯೊಡ್ಡಿದೆ ಎನ್ನಿಸುತ್ತದೆ. (೩) ನಮ್ಮ ಸಂಸ್ಕೃತಿಯಲ್ಲಿ ಗುರುಹಿರಿಯರ ಮಾತಿಗೆ ಅತ್ಯಂತ ಗೌರವ ಸಲ್ಲಿಸುವುದು, ಅದನ್ನು ಪ್ರಶ್ನಿಸದೆ ಪಾಲಿಸುವುದು ದೊಡ್ಡ ಗುಣ ಎನ್ನಿಸಿದೆ. ಒಬ್ಬ ವಿಜ್ಞಾನಿ ತನ್ನ ಹಿಂದಿನ ಪೀಳಿಗೆಯ ವಿಜ್ಞಾನಿಗಳ ಸಂಶೋಧನೆಗಳನ್ನು ಪ್ರಶ್ನಿಸಿ, ಕೆಣಕಿ, ಅದಕ್ಕಿಂತ ಭಿನ್ನವಾದ, ಇನ್ನೂ ಹೆಚ್ಚು ಸೂಕ್ತವಾದ ನಿಯಮಗಳನ್ನು ಸೂಚಿಸಿದಾಗ ವಿಜ್ಞಾನ ಹೊಸ ಹೆಜ್ಜೆಗಳನ್ನಿಡುತ್ತದೆ. ಆದ್ದರಿಂದ ವಿಜ್ಞಾನದ ಮುನ್ನಡೆಗೆ ಕೆಲಮಟ್ಟಿನ ಉದ್ಧಟತನದ, ಬೌದ್ಧಿಕ ಸ್ವಾತಂತ್ರ್ಯದ ಅವಶ್ಯಕತೆಯಿದೆ. ಇದು ನಮ್ಮಲ್ಲಿ ವಿರಳವಾಗಿರುವ ಸ್ವಭಾವ. ಡಾರ್ವಿನ್ನನ ವಿಕಾಸವಾದವನ್ನು ಬಲವಾಗಿ ಸಮರ್ಥಿಸಿದ ಥಾಮಸ್ ಹಕ್ಸ್ಲಿಯವರ ಮೊಮ್ಮಗ ಆಲ್ಡಸ್ ಹಕ್ಸ್ಲಿ (ನೊಬೆಲ್ ಪ್ರಶಸ್ತಿ ವಿಜೇತ ಲೇಖಕರು) ಒಮ್ಮೆ ಭಾರತಕ್ಕೆ ಭೇಟಿ ನೀಡಿದ್ದರು. ಗಾಂಧೀಜಿಯವರ ಜೊತೆ ಒಂದು ಸಭೆಯಲ್ಲಿ ವೇದಿಕೆಯ ಮೇಲೆ ಉಪಸ್ಥಿತರಿದ್ದರು. ಗಾಂಧೀಜಿಯವರಲ್ಲಿ ಅತ್ಯಂತ ಅಭಿಮಾನವಿರಿಸಿ, ಅವರಿಗಾಗಿ ಪ್ರಾಣಾರ್ಪಣೆ ಮಾಡಲು ಎಲ್ಲ ಸಭಿಕರೂ ಸಿದ್ಧರಿರುವ ಅರಿವು ಹಕ್ಸ್ಲಿಯವರಿಗಿತ್ತು. ಆದರೂ ಗಾಂಧೀಜಿಯವರ ಭಾಷಣದ ಸಮಯದಲ್ಲಿ ಸಭಿಕರು ಮಿಕ್ಕೆಲ್ಲ ಭಾಷಣಗಳಲ್ಲಿ ನಡೆಸಿದ್ದಕ್ಕಿಂತ ಹೆಚ್ಚಿನ ಗಲಾಟೆ, ಪಿಸುಮಾತಿನಲ್ಲಿ ತೊಡಗಿದ್ದನ್ನು ಗಮನಿಸಿದರು. ಇಂತಹ ದ್ವಂದ್ವ ನಮಗೆ ಸಹಜ. ಈ ಪ್ರವೃತ್ತಿ ನಮ್ಮ ಸಮಾಜದ ಎಲ್ಲ ಸ್ತರಗಳಲ್ಲಿ ವ್ಯಾಪಿಸಿದೆ. ಹಿರಿಯರು ಹೇಳಿದ್ದು ಒಪ್ಪಿಗೆಯಾಗಲಿ, ಬಿಡಲಿ, ಅದರಂತೆ ನಡೆಯುವುದು ನಮ್ಮ ಜಾಯಮಾನ. ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆ (ಇಸ್ರೋ) ನಡೆಸಿದ ಚಂದ್ರಯಾನ ವಿಜ್ಞಾನಲೋಕದಲ್ಲಿ ಭಾರತದ ಪ್ರತಿಷ್ಠೆಯನ್ನು ಹೆಚ್ಚಿಸಿದೆ. ಅಲ್ಲಿಯ ಕೆಲವು ವಿಜ್ಞಾನಿಗಳಿಗೆ ತಾವು ಕೈಗೊಳ್ಳುವ ಬಾಹ್ಯಾಕಾಶಯಾನ ಸುಗಮವಾಗಿ ಇರಲೆಂದು ತಿರುಪತಿ ತಿಮ್ಮಪ್ಪನಿಗೆ ಮೊರೆಹೋಗುವುದರಲ್ಲಿ ಯಾವುದೇ ಆಭಾಸ ಕಾಣುವುದಿಲ್ಲ. ಟ್ರಿನಿಟಿ ಕಾಲೇಜಿನವರ ಸಮೀಕ್ಷೆಯಲ್ಲೂ ಶೇ. ೪೧ ವಿಜ್ಞಾನಿಗಳು ಇಂತಹ ಪೂಜೆ ಸಲ್ಲಿಸುವುದರಲ್ಲಿ ಯಾವುದೇ ಆಭಾಸ ಕಾಣುವುದಿಲ್ಲ ಎಂದಿದ್ದಾರೆ. ಇಂತಹ ಹಲವು, ಹತ್ತಾರು ಕಾರಣಗಳಿಂದ ನಮ್ಮಲ್ಲಿ ವಿಜ್ಞಾನದ ವಿರುದ್ಧ ಆಂದೋಲನಗಳು ನಡೆಯಲಾರವು. ಜೊತೆಗೆ, ವಿಜ್ಞಾನದ ಅಮೃತ ಫಲವೂ ನಮಗೆ ಪೂರ್ಣ ದೊರೆಯಲಾರದು.

**ಪ್ರೊ॥ ಎಮ್.ಆರ್.ಎನ್. ಮೂರ್ತಿ**
ಮಾಲೆಕ್ಯೂಲರ್ ಬಯೋಫಿಸಿಕ್ಸ್ ಯೂನಿಟ್
ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್
ಬೆಂಗಳೂರು - ೫೬೦ ೦೧೨

# ನಮ್ಮ ನ್ಯಾಯಾಂಗ ವ್ಯವಸ್ಥೆ: ಪಾರದರ್ಶಕತೆ ಇರಬೇಕು

ನ್ಯಾಯಮೂರ್ತಿ
ಡಿ. ವಿ. ಶೈಲೇಂದ್ರಕುಮಾರ್

**ಭಾ**ರತ ಸ್ವತಂತ್ರವಾಗಿ ೬೩ ವರ್ಷಗಳೂ, ಗಣರಾಜ್ಯವಾಗಿ ೬೦ ವರ್ಷಗಳೂ ಸಂದಿವೆ. ಸ್ವಾತಂತ್ರ್ಯದ ಮುನ್ನ ಜನಿಸಿ ಸ್ವಾತಂತ್ರ್ಯ ಆಂದೋಲನದಲ್ಲಿ ಭಾಗವಹಿಸಿದ ಹಿರಿಯರ ಸಂಖ್ಯೆ ಕಡಿಮೆಯಾಗುತ್ತಿದೆ. ನಾವೆಲ್ಲರೂ ಸ್ವಾತಂತ್ರ್ಯ ಪೂರ್ವದಲ್ಲಿ, ನಮ್ಮ ಹಿರಿಯರು ಪಟ್ಟ ಬವಣೆ, ಮಾಡಿದ ತ್ಯಾಗ, ಎದುರಿಸಿದ ಸಂಕಷ್ಟಗಳನ್ನು ಕಂಡವರಲ್ಲ. ನಾವು ಸ್ವತಂತ್ರ ದೇಶದ ಫಲಗಳನ್ನು ಅನುಭವಿಸುತ್ತಿರುವ ಅದೃಷ್ಟಶಾಲಿ ಪ್ರಜೆಗಳು.

೧೯೪೭ರ ಆಗಸ್ಟ್ ೧೫ರಂದು ನಮ್ಮ ಭಾರತವು ಸ್ವತಂತ್ರ ರಾಷ್ಟ್ರವೆನಿಸಿತು. ಇಂತಹ ಬೃಹತ್ ದೇಶಕ್ಕೆ ತನ್ನದೇ ಆದ ಒಂದು ಸಂವಿಧಾನದ ಅವಶ್ಯಕತೆ ಇತ್ತು. ಇದನ್ನು ಮನಗಂಡ ಸರ್ಕಾರ ಡಾ|| ಬಿ. ಆರ್. ಅಂಬೇಡ್ಕರ್ ಅವರ ನೇತೃತ್ವದಲ್ಲಿ ಒಂದು ಸಂವಿಧಾನ ರಚನಾ ಸಮಿತಿಯನ್ನು ನೇಮಿಸಿತು. ಈ ಸಮಿತಿಯ ಸದಸ್ಯರು ಪ್ರಪಂಚದ ವಿವಿಧ ದೇಶಗಳ ಸಂವಿಧಾನಗಳನ್ನು ಅಭ್ಯಸಿಸಿ ಭಾರತ ದೇಶಕ್ಕೆ ಅನುಕೂಲಕರವಾದ ಅಂಶಗಳನ್ನು ಆರಿಸಿ, ಒಂದು ಸಂವಿಧಾನವನ್ನು ರಚಿಸಿದರು. ೧೯೪೯ರ ನವೆಂಬರ್ ೨೬ರಂದು ಸಂವಿಧಾನವನ್ನು ಅಳವಡಿಸಿ ೧೯೫೦, ಜನವರಿ ೨೬ರಂದು ಜಾರಿಗೆ ತರಲಾಯಿತು.

ಭಾರತವು ಪ್ರಜಾಪ್ರಭುತ್ವ ರಾಷ್ಟ್ರವಾಗಿದೆ. ಜಗತ್ತಿನ ಅತಿದೊಡ್ಡ ಗಣರಾಜ್ಯವಾಗಿರುವ ಭಾರತವು ವಿವಿಧತೆಯಲ್ಲಿ ಏಕತೆಯನ್ನು ಸಾರುವ ರಾಷ್ಟ್ರವಾಗಿದೆ.

ಗಣರಾಜ್ಯೋತ್ಸವ ಎಂಬುದನ್ನು ಹಿಂದಿಯಲ್ಲಿ ಪ್ರಜಾತಂತ್ರ ಅಥವಾ ಗಣತಂತ್ರ ದಿವಸ ಎಂದು ಕರೆದರೆ, ನಾವು ಗಣರಾಜ್ಯ ದಿನಾಚರಣೆ ಎನ್ನುತ್ತೇವೆ. ಗಣರಾಜ್ಯವೆಂಬುದು ಇಂಗ್ಲಿಷಿನ ರಿಪಬ್ಲಿಕ್ ಎಂಬುದರ ಅನುವಾದವೆನಿಸಿದರೂ ಭಾರತಕ್ಕೆ ಈ ವ್ಯವಸ್ಥೆ ಹೊಸದೇನಲ್ಲ.

ಗಣರಾಜ್ಯವೆಂದರೆ ಕೇವಲ ಪ್ರಜಾಪ್ರಭುತ್ವವಲ್ಲ, ಬದಲಾಗಿ ಯಾವ ರಾಷ್ಟ್ರದ ಮುಖ್ಯಸ್ಥರು ದೇಶದ ಜನರಿಂದ ನೇರವಾಗಿ ಅಥವಾ ಅಪರೋಕ್ಷವಾಗಿ ಆಯ್ಕೆಯಾಗಿರುತ್ತಾರೋ ಅದು ಗಣರಾಜ್ಯ. ಉದಾಹರಣೆಗೆ, ಇಂಗ್ಲೆಂಡಿನಲ್ಲಿ ಪ್ರಜಾಪ್ರಭುತ್ವವಿದ್ದರೂ ಅದು ಗಣರಾಜ್ಯವಲ್ಲ. ಏಕೆಂದರೆ, ಅಲ್ಲಿಯ ರಾಷ್ಟ್ರ ಮುಖ್ಯಸ್ಥರಾದ ರಾಜ ಅಥವಾ ರಾಣಿ ಅರಸೊತ್ತಿಗೆಯನ್ನು ಪ್ರತಿನಿಧಿಸುತ್ತಾರೆ. ಅದು ವಂಶಪಾರಂಪರ್ಯವಾಗಿ ಬರುವ ಪಟ್ಟ. ಅಮೆರಿಕಾವು ಗಣರಾಜ್ಯ ವ್ಯವಸ್ಥೆಗೆ ಸೂಕ್ತ ಉದಾಹರಣೆ.

ಭಾರತದ ಮೂಲ ಸಂವಿಧಾನದ ಪ್ರಸ್ತಾವನೆಯಲ್ಲಿ ನಮ್ಮ ದೇಶವನ್ನು ''ಸಾರ್ವಭೌಮ, ಪ್ರಜಾಸತ್ತಾತ್ಮಕ, ಗಣರಾಜ್ಯ'' ಎಂದು ಕರೆಯಲಾಯಿತು. ಆದರೆ ೧೯೭೬ರಲ್ಲಿ ೪೨ನೇ ತಿದ್ದುಪಡಿ ಮೂಲಕ ಭಾರತವನ್ನು ಸಾರ್ವಭೌಮ, ಸಮಾಜವಾದಿ, ಧರ್ಮನಿರಪೇಕ್ಷ, ಪ್ರಜಾಸತ್ತಾತ್ಮಕ, ಗಣರಾಜ್ಯ ಎಂದು ಪುನಃ ನಾಮಕರಣ ಮಾಡಲಾಯಿತು.

ಸಾಂವಿಧಾನಿಕವಾಗಿ ಕಾರ್ಯಾಂಗದ ಮುಖ್ಯಸ್ಥರಾಗಿರುವ ರಾಷ್ಟ್ರಪತಿಯವರ ಹೆಸರಿನಲ್ಲಿ ದೇಶದ ಆಡಳಿತ ನಡೆಯುತ್ತದೆ. ತಮಗೆ ಸಹಾಯ ಮತ್ತು ಸಲಹೆಗಳನ್ನು ನೀಡಲು ಅವರು ಪ್ರಧಾನಮಂತ್ರಿ ನೇತೃತ್ವದ ಮಂತ್ರಿಮಂಡಲವನ್ನು ರಚಿಸಿಕೊಳ್ಳುವ ಅಧಿಕಾರವನ್ನು, ಪ್ರಧಾನಮಂತ್ರಿಯನ್ನು ನೇಮಿಸುವ ಮತ್ತು ಅವರ ಸಲಹೆ ಮೇರೆಗೆ ಉಳಿದ ಮಂತ್ರಿಗಳನ್ನು ನೇಮಿಸುವ ಅಧಿಕಾರಗಳನ್ನು, ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳು, ಶ್ರೇಷ್ಠ ನ್ಯಾಯಾಲಯಗಳ ನ್ಯಾಯಾಧೀಶರುಗಳನ್ನು, ಚುನಾವಣಾ ಆಯುಕ್ತರನ್ನು ಮತ್ತು ಇತರ ಮಹತ್ವದ ಅಧಿಕಾರಿಗಳನ್ನು ನೇಮಿಸುವ ಅಧಿಕಾರವನ್ನು, ದೇಶದಲ್ಲಿ ತುರ್ತುಪರಿಸ್ಥಿತಿ ಘೋಷಿಸುವ, ರಾಜ್ಯಗಳಲ್ಲಿ



ನ್ಯಾಯಾಂಗದ ಕ್ರಿಯಾಶೀಲತ್ವದ ಬಗ್ಗೆ ನಾವೆಲ್ಲರೂ ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ. ಈ ದೇಶದ ಜನತೆ ನಮ್ಮಲ್ಲಿ ಇಟ್ಟಿರುವ ಭರವಸೆ, ವಿಶ್ವಾಸಗಳನ್ನು ಉಳಿಸಿಕೊಳ್ಳಬೇಕಾಗಿದೆ. ನಮ್ಮ ಸಂವಿಧಾನ ಶಿಲ್ಪಿಗಳು ನಮ್ಮಲ್ಲಿಟ್ಟ ಅಪಾರವಾದ ನಂಬಿಕೆ, ವಿಶ್ವಾಸಗಳನ್ನು ಉಳಿಸಿಕೊಳ್ಳಬೇಕಾಗಿದೆ. ನಾವು ನೀವೆಲ್ಲಾ ಈ ದಿಶೆಯಲ್ಲಿ ನಡೆಯೋಣ, ಆ ರೀತಿಯಾಗಿ ನಡೆದುಕೊಳ್ಳುತ್ತೇವೆ ಎಂದು ಇಂದೇ ಪಣ ತೊಡೋಣ. ಆಗಲೇ ನಮ್ಮ ದೇಶದಲ್ಲಿ ಪ್ರಜಾಸತ್ತೆ ಉಳಿದು, ಗಣತಂತ್ರ ಫಲಿಸಿ, ಜನರ ಆಶೋತ್ತರಗಳು ಈಡೇರಿ, ಜನರ ಕಷ್ಟಕಾರ್ಪಣ್ಯಗಳು ಪರಿಹಾರವಾಗಿ ನಮ್ಮ ದೇಶ ನಿಜವಾದ ಗಣತಂತ್ರವಾಗಬಹುದು, ಗಣರಾಜ್ಯೋತ್ಸವದ ಆಚರಣೆ ಅರ್ಥಪೂರ್ಣವಾಗಬಹುದು.

ರಾಷ್ಟ್ರಪತಿ ಆಡಳಿತ ಜಾರಿಗೆ ತರುವ ಮತ್ತು ರಾಷ್ಟ್ರೀಯ ಹಣಕಾಸು ತುರ್ತುಪರಿಸ್ಥಿತಿಯನ್ನು ಘೋಷಿಸುವ, ಹೀಗೆ ವಿಶಾಲ ವ್ಯಾಪ್ತಿಯ ಕಾರ್ಯಾಂಗೀಯ ಅಧಿಕಾರಗಳನ್ನು ಹೊಂದಿದ್ದಾರೆ ಎಂಬುದು ಮನದಟ್ಟಾಗುತ್ತದೆ.

ಹೀಗೆ ಭಾರತವನ್ನು ಒಂದು ಗಣರಾಜ್ಯವೆಂದು ಕರೆಯಲಾಗಿದ್ದರೂ, ಅದು ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದರಿಂದ ಗಣರಾಜ್ಯದ ಮುಖ್ಯಸ್ಥರು ನಾಮಮಾತ್ರ ಮುಖ್ಯಸ್ಥರಾಗಿರುತ್ತಾರೆ. ಅದರಲ್ಲೂ ಮುಖ್ಯವಾಗಿ ೪೨ನೇ ಸಾಂವಿಧಾನಿಕ ತಿದ್ದುಪಡಿಯ ನಂತರ ಅವರ ವಿವೇಚನಾ ಅಧಿಕಾರವನ್ನು ಸಂಪೂರ್ಣವಾಗಿ ಮೊಟಕುಗೊಳಿಸಲಾಗಿದ್ದು, ಅವರು ಮಂತ್ರಿಮಂಡಲದ ಶಿಫಾರಸ್ಸಿನಂತೆ ಮಾತ್ರ ನಡೆದುಕೊಳ್ಳುವಂತೆ ಮಾಡಲಾಗಿದೆ.

ಇಷ್ಟೆಲ್ಲಾ ಕುಂದುಕೊರತೆಗಳ ಹೊರತಾಗಿಯೂ, ನಮ್ಮ ಸಂವಿಧಾನದ ರಚನಾಕಾರರು, ಭಾರತವನ್ನು ಒಂದು ತಡೆ ಮತ್ತು ಸಮತೋಲನಗಳ ಅದ್ಭುತ ವ್ಯವಸ್ಥೆಯಾಗಿ ರೂಪುಗೊಳಿಸಿದ್ದಾರೆ. ಇಲ್ಲಿ ಯಾರೊಬ್ಬರಿಗೂ ಪರಿಮಿತಿ ಇಲ್ಲದ ಅಧಿಕಾರಗಳಿಲ್ಲ. ಕಾರ್ಯಾಂಗ, ಶಾಸಕಾಂಗ ಮತ್ತು ನ್ಯಾಯಾಂಗಗಳು ಒಂದು ಮತ್ತೊಂದರ ಮೇಲೆ ಸವಾರಿ ಮಾಡದಂತೆ, ಒಬ್ಬರು ಇನ್ನೊಬ್ಬರನ್ನು ಸರಳವಾಗಿ ಕಿತ್ತೊಗೆಯದಂತೆ ವ್ಯವಸ್ಥೆ ಕಲ್ಪಿಸಲಾಗಿದೆ.

ಈ ಮೂರೂ ಅಂಗಗಳು ಪ್ರತ್ಯೇಕವಾಗಿ ತಮ್ಮ ಕಾರ್ಯಗಳನ್ನು ಸಂವಿಧಾನದ ಚೌಕಟ್ಟಿನಲ್ಲಿ, ಅದರ ನಿಯಮಗಳಿಗೆ ಅನುಸಾರವಾಗಿ ನಿರ್ವಹಿಸಬೇಕು.

ನಮ್ಮ ಸಂವಿಧಾನದಲ್ಲಿ ರಾಷ್ಟ್ರ ಆಳುವ, ನಡೆಸುವ, ಜವಾಬ್ದಾರಿಯನ್ನು ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗ ಈ ಮೂರೂ ಕ್ಷೇತ್ರಗಳಲ್ಲೂ ಸಂಚಲಾಗಿದೆ. ತಡೆ ಮತ್ತು ಸಮತೋಲನದ ವಿಶಿಷ್ಟ ಬಳಕೆಯಿಂದ ಯಾವೊಂದು ಅಂಗವೂ ಇತರೆ ಅಂಗಕ್ಕಿಂತ ಮೇಲು-ಕೀಳು ಎನ್ನುವ ಭಾವನೆ ಬಾರದ ಹಾಗೆ ನೋಡಿಕೊಳ್ಳಲಾಗಿದೆ. ಆದಾಗ್ಯೂ ಕಾರ್ಯಾಂಗವು, ಶಾಸಕಾಂಗಕ್ಕೆ ಅನುಸರಿಸಿ ಮತ್ತು ಶಾಸಕಾಂಗದ ಅನುಮೋದನೆಯಂತೆಯೇ ನಡೆಯಬೇಕಾದ ಕಡ್ಡಾಯವಿದೆ.




ಶಾಸಕಾಂಗ ಎಂದರೆ ಜನರಿಂದ ಆರಿಸಲ್ಪಟ್ಟ ಪ್ರತಿನಿಧಿಗಳಿಂದ ಕೂಡಿದ ಸಭೆ. ಕಾಲಕಾಲಕ್ಕೆ ನಡೆಯುವ ಚುನಾವಣೆಗಳಲ್ಲಿ ದೇಶದ ಜನರಿಗೆ ತಮ್ಮ ಪ್ರತಿನಿಧಿಗಳನ್ನು ಆರಿಸುವ, ಬದಲಾಯಿಸುವ, ಹಕ್ಕಿದೆ. ಅದೇ ಪ್ರಜಾಪ್ರಭುತ್ವ. ಶಾಸಕಾಂಗ ಸಭೆಯಲ್ಲಿರುವವರು ಕಾಲಕಾಲಕ್ಕೆ ಬದಲಾಗುತ್ತಿದ್ದರೂ ಕಾರ್ಯಾಂಗದಲ್ಲಿರುವವರು, ನೇಮಕಗೊಂಡ ಸರ್ಕಾರಿ ನೌಕರರು. ಅವರಿಗೆ ಕಾಲಕಾಲಕ್ಕೆ ಬದಲಾವಣೆ ಇಲ್ಲ. ನಿವೃತ್ತಿ ವಯಸ್ಸನ್ನು ತಲುಪಿದ ನಂತರ ಮತ್ತು ಆದರಿಂದ ಉಂಟಾಗುವ ಖಾಲಿಯಾದ ಹುದ್ದೆಗಳಿಗೆ ಹೊಸಬರನ್ನು ನೇಮಕ ಮಾಡಬಹುದು.

ಇನ್ನು ನ್ಯಾಯಾಂಗವಾದರೂ ಕಾರ್ಯಾಂಗದ ಮುಖ್ಯಸ್ಥರಾದ ರಾಷ್ಟ್ರಪತಿಗಳೋ ಅಥವಾ ರಾಜ್ಯಪಾಲರೋ ನೇಮಿಸಿದ ವ್ಯಕ್ತಿಗಳು. ಇವರು ಸಹಿತ ನಿವೃತ್ತಿ ವಯಸ್ಸನ್ನು ತಲುಪುವವರೆಗೂ ಮುಂದುವರೆಯುತ್ತಾರೆ. ಇಂತಹ ವ್ಯವಸ್ಥೆಯನ್ನು ಗಮನಿಸಿದರೆ, ಶಾಸಕಾಂಗ ಮಾತ್ರ ಕಾಲಕಾಲಕ್ಕೆ ಒಂದು ಗಣರಾಜ್ಯದ ನಿಜವಾದ ಹಕ್ಕುದಾರರಾದ ಪ್ರಜೆಗಳ ಅನುಮೋದನೆಯಿಂದಲೇ ಆರಿಸಿಬಂದ ಪ್ರಜಾಪ್ರತಿನಿಧಿಗಳಿಂದಲೇ ರಚನೆಯಾದ ಸಭೆ. ಸ್ವಾಭಾವಿಕವಾಗಿ ಗಣತಂತ್ರ ವ್ಯವಸ್ಥೆಯನ್ನು ಅಳವಡಿಸಿಕೊಂಡಿರುವ ಪ್ರಜಾಪ್ರಭುತ್ವದ ನಮ್ಮ ದೇಶದಲ್ಲಿ ಶಾಸಕಾಂಗಕ್ಕೆ ಪ್ರಜೆಗಳ ದೃಷ್ಟಿಯಿಂದ ಹೆಚ್ಚಿನ ಮಹತ್ವ ಇದೆ ಎಂದರೆ ಅತಿಶಯವಾಗಲಾರದು.

ಆದಾಗ್ಯೂ ನ್ಯಾಯಾಂಗದ ಕರ್ತವ್ಯ ಎಂದರೆ, ಅದಕ್ಕೆ ನಮ್ಮ ಸಂವಿಧಾನದಲ್ಲಿ ಕೊಟ್ಟಿರುವ ಜವಾಬ್ದಾರಿ ಎಂದರೆ ಶಾಸಕಾಂಗ, ಕಾರ್ಯಾಂಗ ದಾರಿ ತಪ್ಪದ ಹಾಗೆ, ಹಳಿ ತಪ್ಪಿ ಕೆಳಗೆ ಬಿದ್ದು ತನ್ನ ಪ್ರಯಾಣವನ್ನು ನಿಲ್ಲಿಸದ ಹಾಗೆ, ಈ ಎರಡೂ ಅಂಗಗಳನ್ನು ಸರಿದಾರಿಯಲ್ಲಿ ಚಲಿಸುವಂತೆ ನೋಡಿಕೊಳ್ಳುವ ಕೆಲಸ.

ಇದರ ಜೊತೆಯಲ್ಲಿ ವ್ಯಾಜ್ಯ ಪರಿಹರಿಸುವ, ಬಾಧಿತರಿಗೆ ಪರಿಹಾರ ನೀಡುವ, ಸಮಾಜದಲ್ಲಿ ಕಾನೂನು ಉಲ್ಲಂಘನೆಯಾಗದಂತೆ, ಆ ರೀತಿ ಉಲ್ಲಂಘನೆಯಾದರೆ, ಉಲ್ಲಂಘನೆ ಮಾಡಿದ ಆರೋಪಿಗಳಿಗೆ ಕಾನೂನಿನಲ್ಲಿ ನಿಗದಿಪಡಿಸಿದ ಶಿಕ್ಷೆ ನೀಡಿ ಸಮಾಜದ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳುವ ಸಾಂಪ್ರದಾಯಿಕ ಜವಾಬ್ದಾರಿಯೂ ಇದೆ.

ಇತ್ತೀಚಿನ ದಿನಗಳಲ್ಲಿ ಕಾರ್ಯಾಂಗ, ಅಡ್ಡದಾರಿ ಹಿಡಿಯುವ, ಹಳಿ ತಪ್ಪುವ ಸಂದರ್ಭಗಳು ಪದೇಪದೇ ಉಂಟಾಗುತ್ತಿವೆ. ಹಲವೊಮ್ಮೆ ಶಾಸಕಾಂಗವು ನೂತನ ಕಾನೂನುಗಳನ್ನು ರಚಿಸುವಾಗ ಸಂವಿಧಾನದ ಚೌಕಟ್ಟಿನಿಂದ ಹೊರಗೆ ಹಾಯ್ದು, ಅಂತಹ ಕಾನೂನುಗಳನ್ನು ನ್ಯಾಯಾಲಯವು ಅಸಂವೈಧಾನಿಕ ಎಂದು ಘೋಷಿಸಿರುವ ಸಂದರ್ಭಗಳು ಉಂಟಾಗುತ್ತಿವೆ. ಕಾರ್ಯಾಂಗದ ತಪ್ಪು ನಡವಳಿಕೆಯನ್ನು ಅನೂರ್ಜಿತಗೊಳಿಸಿ ಸರಿಮಾರ್ಗದಲ್ಲಿ ಸೂಕ್ತವಾದ ಕ್ರಮ ಜರುಗಿಸಲೆಂದು ನಿರ್ದೇಶನ ನೀಡುವ ಅಪ್ಪಣೆಗಳು ದಿನಬೆಳಗಾದರೆ ನ್ಯಾಯಾಲಯಗಳಿಂದ ಹೊರ ಹೊಮ್ಮುತ್ತಿವೆ. ಇಂತಹ ಬೆಳವಣಿಗೆಗಳಿಂದ ಸ್ವಾಭಾವಿಕವಾಗಿ ಯಾರಿಗಾದರೂ ನ್ಯಾಯಾಂಗವು, ಕಾರ್ಯಾಂಗ ಮತ್ತು ಶಾಸಕಾಂಗಗಳ ಮೇಲೆ ಅಧಿಕಾರ ಚಲಾಯಿಸುವ ಸಂವಿಧಾನದ ಒಂದು ಭಾಗ ಎನ್ನುವ ಅಭಿಪ್ರಾಯ ಮೂಡುತ್ತಿದೆ. ಇದು ತಪ್ಪು ಅನಿಸಿಕೆ. ನ್ಯಾಯಾಂಗವು ಸಂವಿಧಾನದ ಅಡಿಯಲ್ಲಿ ಅದಕ್ಕೆ ಕೊಟ್ಟ ಜವಾಬ್ದಾರಿಯನ್ನು ನಿರ್ವಹಿಸುತ್ತಿದೆ, ಅಷ್ಟೆ.

ನ್ಯಾಯಾಂಗವು ಕಾರ್ಯಾಂಗ ಅಥವಾ ಶಾಸಕಾಂಗಗಳ ಮೇಲೆ ಅಧಿಕಾರ ಅಥವಾ ಹಿಡಿತವುಳ್ಳ ಅಂಗವೆಂದಾಗಲೀ, ಈ ಎರಡೂ ಅಂಗಗಳಿಗಿಂತ ಹೆಚ್ಚಿನ ಅಧಿಕಾರವುಳ್ಳ ಅಂಗವೆಂದಾಗಲೀ ಅಲ್ಲ. ಗಣತಂತ್ರ ವ್ಯವಸ್ಥೆ ಸುಗಮವಾಗಿ ಸಾಗಬೇಕಾದರೆ, ಈ

ಮೂರು ಅಂಗಗಳು ಸಂವಿಧಾನದ ಅಡಿಯಲ್ಲಿ ತಮ ತಮಗೆ ನೀಡಿದ ಜವಾಬ್ದಾರಿಯನ್ನು, ಕರ್ತವ್ಯವನ್ನು ಸಂವಿಧಾನಕ್ಕೆ ಅನುಗುಣವಾಗಿ ಕಾನೂನುಗಳಿಗೆ ಅನುಗುಣವಾಗಿ ನಡೆಸುವುದರಿಂದಲೇ ಸಾಧ್ಯ. ಇಲ್ಲದಿದ್ದರೆ ವ್ಯವಸ್ಥೆ ದಿಕ್ಕು ತಪ್ಪುತ್ತದೆ. ನ್ಯಾಯಾಂಗವು ಹೆಚ್ಚು ಅಧಿಕಾರವುಳ್ಳ ಅಂಗ ಎಂಬ ಅನಿಸಿಕೆಯನ್ನು ಮೂಡಿಸುವ ಮತ್ತೊಂದು ವಿಷಯವೆಂದರೆ ಕಾರ್ಯಾಂಗದ ಕಾರ್ಯವೈಖರಿ ಸುಮಾರು ಹದಗೆಟ್ಟಿರುವುದು. ನಮ್ಮ ಶಾಸಕಾಂಗವು ವ್ಯವಸ್ಥಿತ ರೀತಿಯಲ್ಲಿ ಕಾರ್ಯ ನಿರ್ವಹಿಸದೆ ಇರುವುದು ಮತ್ತು ಈ ಎರಡೂ ಅಂಗಗಳಿಗೆ ಹೋಲಿಸಿದರೆ ನ್ಯಾಯಾಂಗ ವ್ಯವಸ್ಥೆಯು ಸಂಪೂರ್ಣವಾಗಿ ಅಲ್ಲದಿದ್ದರೂ ತಕ್ಕಮಟ್ಟಿಗೆ, ಅಧಿಕಮಟ್ಟಿಗೆ ಸೂಕ್ತರೀತಿಯಲ್ಲಿ ನಡೆದು ಕೊಳ್ಳುತ್ತಿರುವ ಅಂಶ.

ಇತರೆ ಎರಡು ಅಂಗಗಳು ಸಾಕಷ್ಟು ಹದಗೆಟ್ಟಿರುವುದು ನಮ್ಮ ದೇಶದ, ನಮ್ಮ ಸಮಾಜದ, ದುರದೃಷ್ಟ. ಈ ಕಾರಣದಿಂದಾಗಿಯೇ ಭಾರತ ಗಣತಂತ್ರವಾಗಿ ೬೦ ವರ್ಷಗಳು ಸಂದಿದ್ದರೂ ಒಂದು ನೈಜ ಗಣತಂತ್ರವಾಗಿ ಹೊರಹೊಮ್ಮಿಲ್ಲ. ನಮ್ಮ ದೇಶದ ಎಲ್ಲಾ ಜನರ ಆಶೋತ್ತರಗಳು ಈಡೇರಿಲ್ಲ. ಆಶೋತ್ತರಗಳಿರಲಿ, ಎಲ್ಲ ಜನರಿಗೆ ಅವಶ್ಯವಾಗಿರುವ ಮೂಲಭೂತ ಸೌಕರ್ಯಗಳನ್ನು ಒದಗಿಸಲು ನಮ್ಮ ವ್ಯವಸ್ಥೆ ವಿಫಲಗೊಂಡಿದೆ. ಇದು ನಿಜಕ್ಕೂ ಶೋಚನೀಯ. ಇದಕ್ಕೆ ಮೂಲಕಾರಣ ಭ್ರಷ್ಟಾಚಾರ, ಅವ್ಯವಸ್ಥೆ, ಅಸಮರ್ಪಕತನ. ಇದು ಏನೇ ಇರಲಿ, ಈ ಅವ್ಯವಸ್ಥೆಯನ್ನು ಸರಿಪಡಿಸಲು, ಶಾಸಕಾಂಗಕ್ಕೆ ಜನರ ಹಿತ ಕಾಪಾಡುವ ಸರಿಯಾದ ಪ್ರತಿನಿಧಿಗಳನ್ನು ಆರಿಸಿ ಕಳುಹಿಸಲು ದೇಶದ ಪ್ರಜೆಗಳಿದ್ದಾರೆ. ಕಾಲಕಾಲಕ್ಕೆ ನಡೆಯುವ ಚುನಾವಣೆಗಳಲ್ಲಿ ಇಂತಹ ಬದಲಾವಣೆ ಮಾಡುವ ಅವಕಾಶವಿದೆ. ಇದನ್ನೂ ಮೀರಿ ಶಾಸಕಾಂಗ ಅಸಂವೈಧಾನಿಕವಾಗಿ ನಡೆದರೆ, ಕಾರ್ಯಾಂಗ ತಪ್ಪುದಾರಿಯಲ್ಲಿ ಹೋದರೆ ಅದನ್ನು ಸರಿಪಡಿಸಲು ನ್ಯಾಯಾಂಗ ಇದೆ. ಆದರೆ ನ್ಯಾಯಾಂಗವೇ ದಾರಿ ತಪ್ಪಿದರೆ ಅದನ್ನು ಸರಿಪಡಿಸುವವರು ಯಾರು ?

ನಮ್ಮ ನ್ಯಾಯ ವಿತರಣಾ ವ್ಯವಸ್ಥೆಯಲ್ಲಿ ವಿವಿಧ ಹಂತಗಳಿವೆ. ತೀರ್ಪು ನೀಡುವಲ್ಲಿ ಕೆಳಗಿನ ನ್ಯಾಯಾಲಯವು ತಪ್ಪಿದರೆ, ಅದನ್ನು ಸರಿಪಡಿಸಿ ಕೊಳ್ಳುವ ಅವಕಾಶ ಕಾನೂನಿನಲ್ಲಿ ಮಾಡಿ ಕೊಡಲಾಗಿದೆ. ಅದಕ್ಕೆ ಉನ್ನತ ನ್ಯಾಯಾಲಯಗಳಿವೆ. ಆದರೆ ಸಂವಿಧಾನದ ಅಡಿಯಲ್ಲಿ ವಿಶೇಷ ಅಧಿಕಾರ ವನ್ನು ನೀಡಿರುವ ಉಚ್ಚ ನ್ಯಾಯಾಲಯಗಳಲ್ಲಿ, ಸರ್ವೋಚ್ಚ ನ್ಯಾಯಾಲಯದಲ್ಲಿ, ತಪ್ಪುಗಳಾದರೆ ಅದನ್ನು ಸಾಧಾರಣವಾಗಿ ಸರಿಪಡಿಸುವಂತಹ ವ್ಯವಸ್ಥೆ ಇಲ್ಲ. ಸರ್ವೋಚ್ಚ ನ್ಯಾಯಾಲಯಕ್ಕೆ ದೇಶದ ಎಲ್ಲಾ ನ್ಯಾಯಾಲಯಗಳ ಆಡಳಿತ ವ್ಯವಸ್ಥೆಗಳು, ಅರೆ ನ್ಯಾಯಿಕ, ಆಡಳಿತಾತ್ಮಕ ಸಂಸ್ಥೆಗಳು ಅಪ್ಪಣೆಗಳನ್ನು ಸರಿಪಡಿಸುವ ಅಧಿಕಾರವಿದ್ದರೂ ಎಲ್ಲಾ ಸಂದರ್ಭ ಗಳಲ್ಲೂ ಸಾಧ್ಯವಾಗುವುದಿಲ್ಲ. ನಮ್ಮ ಸಂವಿಧಾನದ ಶಿಲ್ಪಿಗಳು ಉನ್ನತ ನ್ಯಾಯಾಲಯಗಳಾದ ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯದ ಕಾರ್ಯವೈಖರಿಯಲ್ಲಿ ಅವುಗಳ ಕಾರ್ಯದಕ್ಷತೆಯಲ್ಲಿ ಅದೆಷ್ಟು ವಿಶ್ವಾಸ, ಅದೆಷ್ಟು ಭರವಸೆ ಇಟ್ಟು ಕೊಂಡಿದ್ದರೆಂದರೆ ಅವು ಸಾಧಾರಣವಾಗಿ ತಪ್ಪು ದಾರಿಯಲ್ಲಿ ಹೋಗುವ ಸಂದರ್ಭಗಳು ಇರುವುದಿಲ್ಲ, ಅಲ್ಲಿಯ ನ್ಯಾಯಾಧೀಶರು ಸರಿಮಾರ್ಗ ಬಿಟ್ಟು ಚಲಿಸುವವರಲ್ಲ ಎಂಬ ಗಾಢವಾದ ನಂಬಿಕೆ ವಿಶ್ವಾಸಗಳನ್ನು ಇಟ್ಟುಕೊಂಡಿದ್ದರು.

ದುರದೃಷ್ಟವಶಾತ್ ನ್ಯಾಯಾಲಯಗಳಲ್ಲಿನ ಕೆಲವು ಇತ್ತೀಚಿನ ಬೆಳವಣಿಗೆಗಳಿಂದಾಗಿ ನಾವು ಇಂತಹ ನಂಬಿಕೆ ವಿಶ್ವಾಸಗಳಿಗೆ ದ್ರೋಹ ಬಗೆಯುತ್ತಿದ್ದೇವೆಯೋ, ನಮ್ಮ ಸಂವಿಧಾನ ಶಿಲ್ಪಿಗಳ ವಿಶ್ವಾಸವನ್ನು ಹುಸಿ ಗೊಳಿಸುತ್ತಿದ್ದೇವೆಯೋ ಎಂಬ ಅನುಮಾನ ಮೂಡುತ್ತಿದೆ. ಒಮ್ಮೆ ನೇಮಕಗೊಂಡರೆ ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರು ಸರ್ವ ಸ್ವತಂತ್ರರು. ಅವರ ಕಾರ್ಯಕಲಾಪಗಳಲ್ಲಿ, ಅವರು ತಮ್ಮ ಜವಾಬ್ದಾರಿಯನ್ನು ನಿಭಾಯಿಸುವಲ್ಲಿ ಯಾರೊಬ್ಬನೂ ತಲೆಹಾಕುವಂತಿಲ್ಲ, ಅಡಚಣೆ ಉಂಟುಮಾಡುವಂತಿಲ್ಲ. ನ್ಯಾಯಾಧೀಶರುಗಳು ಭಯ-ಭೀತಿಗಳಿಲ್ಲದೆ, ಸಂಕೋಚ ಮುಜುಗರಗಳಿಲ್ಲದೇ, ಇನ್ನೊಬ್ಬರ ಹಂಗಿಲ್ಲದೆ ತಮ್ಮ ಕಾರ್ಯ ನಿರ್ವಹಿಸಿ ನಿಷ್ಪಕ್ಷಪಾತವಾದ, ಸೂಕ್ತವಾದ ತೀರ್ಪು ನೀಡಬೇಕೆಂಬುದೇ ಇದರ ಉದ್ದೇಶ. ಹೀಗಿರುವಾಗ ನ್ಯಾಯಾಂಗದಲ್ಲೂ ಲೋಪದೋಷ ಗಳಿವೆ ಎಂಬ ದೂರು ಬರಲೇಬಾರದು. ಬರದಂತೆ ನೋಡಿಕೊಳ್ಳಬೇಕು. ಒಂದು ವೇಳೆ ಲೋಪದೋಷ ಗಳಿದ್ದರೆ, ಅವುಗಳನ್ನು ನಾವೇ ಶೀಘ್ರದಲ್ಲೇ ಸರಿಪಡಿಸಿಕೊಳ್ಳಬೇಕು. ನ್ಯಾಯಾಲಯಗಳು ಜನರ ನಂಬಿಕೆ, ಭರವಸೆ ಇದ್ದರೆ ಮಾತ್ರ ನಡೆಯುವಂತಹ ಸಂಸ್ಥೆಗಳು. ನ್ಯಾಯಾಂಗವು ಸಾಮಾನ್ಯ ಜನರಲ್ಲಿ ಅವರ ಕುಂದುಕೊರತೆಗಳನ್ನು ಕಾನೂನು ರೀತಿಯಲ್ಲಿ ನಿವಾರಿಸಿ ಅವರಿಗೆ ಪರಿಹಾರ ದೊರಕಿಸಿಕೊಡುತ್ತೇವೆ ಎಂಬ ವಿಶ್ವಾಸ ಇರಿಸಿಕೊಂಡಿರಬೇಕಾದಂತಹ ವ್ಯವಸ್ಥೆ. ಜನರಿಗೆ ಈ ರೀತಿಯ ವಿಶ್ವಾಸ, ನಂಬಿಕೆ ಇಲ್ಲದೇ ಹೋದರೆ ನ್ಯಾಯಾಲಯಗಳ ಉಳಿವಿಗೆ ಅಸ್ತಿತ್ವಕ್ಕೆ ಕಾರಣವೇ ಇಲ್ಲ.

ನ್ಯಾಯವಿತರಣಾ ವ್ಯವಸ್ಥೆಯಲ್ಲಿ ವಕೀಲರ ಪಾತ್ರವೂ ಒಂದು ಅಂಗ; ನ್ಯಾಯಾಧೀಶರುಗಳು ಸರಿಯಾದ ತೀರ್ಪು ನೀಡುವ ದಿಶೆಯಲ್ಲಿ ಅವರಿಗೆ ಮಾರ್ಗದರ್ಶಿಗಳು. ಇದಲ್ಲದೇ ನ್ಯಾಯಾಧೀಶರುಗಳು ನ್ಯಾಯವಿತರಣಾ ವ್ಯವಸ್ಥೆ ನಿರ್ವಹಿಸುವಲ್ಲಿ ದಿಕ್ಕು ತಪ್ಪದ ಹಾಗೆ ಮತ್ತು ಸ್ವತಂತ್ರವಾಗಿರುವಂತೆ ನೋಡಿಕೊಳ್ಳುವ ಜವಾಬ್ದಾರಿಯೂ ಇದೆ. ಇದೊಂದು ಗುರುತರವಾದ ಜವಾಬ್ದಾರಿ.

ನಮ್ಮ ನ್ಯಾಯಾಲಯಗಳ ವಿಶಿಷ್ಟತೆ ಇರುವುದು ಅದರ ಪಾರದರ್ಶಕತೆಯಲ್ಲಿ, ನಮ್ಮ ನ್ಯಾಯವಿತರಣಾ ಕಾರ್ಯ ನಡೆಯುವುದು ತೆರೆದಿಟ್ಟ ನ್ಯಾಯಾಲಯ ಗಳಲ್ಲಿ, ತೀರ್ಪು ಕೊಡುವುದು ಎಲ್ಲರ ಸಮ್ಮುಖದಲ್ಲಿ. ಹಾಗಾಗಿಯೇ ನ್ಯಾಯಾಲಯಗಳ ಕಾರ್ಯದಲ್ಲಿ ಯಾವುದೇ ಮುಚ್ಚುಮರೆ ಇಲ್ಲ. ಅದು ಯಾವಾಗಲೂ ಮುಕ್ತ. ಹೀಗಿರುವಾಗ ಜನಸಾಮಾನ್ಯರು ನ್ಯಾಯಾಧೀಶರುಗಳ ಬಗ್ಗೆ ಏನಾದರೂ ಮಾಹಿತಿ ಅಪೇಕ್ಷಿಸಿದರೆ ಅದನ್ನು ನೀಡಲು ನ್ಯಾಯಾಧೀಶರುಗಳಲ್ಲಿ ಅಳುಕಾಗಲೀ, ಹಿಂಜರಿಕೆಯಾಗಲಿ ಇರಕೂಡದು. ಇದು ಪ್ರತಿಷ್ಠೆಯ ಪ್ರಶ್ನೆ ಅಲ್ಲ, ವಿಶ್ವಾಸದ ಪ್ರಶ್ನೆ. ಜನರ ವಿಶ್ವಾಸವೇ ನ್ಯಾಯಾಲಯಗಳ ಬಂಡವಾಳ. ಇತರರ ತಪ್ಪುಗಳನ್ನು ಎತ್ತಿ ಹೇಳಿ ಅವರು ಸರಿದಾರಿಯಲ್ಲಿ ನಡೆದುಕೊಳ್ಳಬೇಕು ಎಂದು ಅಪ್ಪಣೆ ಮಾಡುವ ನ್ಯಾಯಾಧೀಶರು ತಾವೇ ಸ್ವತಃ ಆ ರೀತಿಯಾಗಿ ನಡೆದುಕೊಳ್ಳಬೇಕು ಎಂದು ಜನಸಾಮಾನ್ಯರು ಅಪೇಕ್ಷಿಸುವುದು ಸ್ವಾಭಾವಿಕ ಮತ್ತು ಅನಿವಾರ್ಯ. ನಾವು ಆ ವಿಶ್ವಾಸ ಉಳಿಸಿಕೊಳ್ಳಬೇಕು. ಅಧಿಕಾರ ಸ್ಥಾನದಲ್ಲಿರುವವರು ಯಾವುದೇ ಸಂಶಯಾಸ್ಪದ ವ್ಯವಹಾರದಲ್ಲಿ ತೊಡಗಬಾರದೆಂಬುದು ಸಾಮಾನ್ಯವಾಗಿ ಅಂಗೀಕೃತವಾಗಿರುವ ನಿಯಮ. ನ್ಯಾಯಾಧೀಶರುಗಳಿಗೆ ತಮ್ಮ ವೈಯಕ್ತಿಕ ಜೀವನ ಬೇರೆ, ವೃತ್ತಿ ಜೀವನ ಬೇರೆ ಎಂದು ಪ್ರತ್ಯೇಕಿಸಿ ನಡೆದುಕೊಳ್ಳುವ ಅವಕಾಶವೇ ಇಲ್ಲ. ಅವರ ವೈಯಕ್ತಿಕ ಜೀವನ, ವೃತ್ತಿ ಜೀವನ ಎಲ್ಲವೂ ಸರಿಯಾದ ರೀತಿಯಲ್ಲಿ ಇರಬೇಕು, ಪಾರದರ್ಶಕತೆ ಇರಬೇಕು. ಜನ ಮೆಚ್ಚುವಂತಿರಬೇಕು.

ಈ ದಿಶೆಯಲ್ಲಿ ನಾವೆಲ್ಲರೂ ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ. ಈ ದೇಶದ ಜನತೆ ನಮ್ಮಲ್ಲಿ ಇಟ್ಟಿರುವ ಭರವಸೆ, ವಿಶ್ವಾಸಗಳನ್ನು ಉಳಿಸಿಕೊಳ್ಳ ಬೇಕಾಗಿದೆ. ನಮ್ಮ ಸಂವಿಧಾನ ಶಿಲ್ಪಿಗಳು ನಮ್ಮಲ್ಲಿಟ್ಟ ಅಪಾರವಾದ ನಂಬಿಕೆ, ವಿಶ್ವಾಸಗಳನ್ನು ಉಳಿಸಿಕೊಳ್ಳ ಬೇಕಾಗಿದೆ. ನಾವು ನೀವೆಲ್ಲಾ ಈ ದಿಶೆಯಲ್ಲಿ ನಡೆಯೋಣ, ಆ ರೀತಿಯಾಗಿ ನಡೆದುಕೊಳ್ಳುತ್ತೇವೆ ಎಂದು ಇಂದೇ ಪಣ ತೊಡೋಣ. ಆಗಲೇ ನಮ್ಮ ದೇಶದಲ್ಲಿ ಪ್ರಜಾಸತ್ತೆ ಉಳಿದು, ಗಣತಂತ್ರ ಫಲಿಸಿ, ಜನರ ಆಶೋತ್ತರಗಳು ಈಡೇರಿ, ಜನರ ಕಷ್ಟಕಾರ್ಪಣ್ಯಗಳು ಪರಿಹಾರವಾಗಿ ನಮ್ಮ ದೇಶ ನಿಜವಾದ ಗಣತಂತ್ರವಾಗಬಹುದು, ಗಣರಾಜ್ಯೋತ್ಸವದ ಆಚರಣೆ ಅರ್ಥಪೂರ್ಣವಾಗಬಹುದು.

(ದೇಶದ ೬೦ನೇ ಗಣರಾಜ್ಯೋತ್ಸವ ಸಂದರ್ಭದಲ್ಲಿ ಗುಲ್ಬರ್ಗಾದಲ್ಲಿ ಮಾಡಿದ್ದ ಭಾಷಣದ ಸಂಕ್ಷಿಪ್ತ ರೂಪ)

ನ್ಯಾಯಮೂರ್ತಿ ಡಿ. ವಿ. ಶೈಲೇಂದ್ರಕುಮಾರ್
ಕರ್ನಾಟಕ ಉಚ್ಚ ನ್ಯಾಯಾಲಯ
ಬೆಂಗಳೂರು - ೫೬೦ ೦೦೧

## ಹಣತೆ

ನಿನ್ನನ್ನೇ ನಂಬಿ
ಹಚ್ಚಿರುವೆ ಹಣತೆ ಬಯಲಿನಲಿ
ತಂಗಾಳಿಯಾದರೆ
ನಾಲ್ಕು ಕಾಲ ಉರಿಯುತ್ತೇನೆ
ಬಿರುಗಾಳಿಯಾದರೆ
ಲೀನವಾಗುತ್ತೇನೆ ನಿನ್ನೊಳಗೇ !

ಬಿ. ಹರಿನಾಥ ಬಾಬು
ಸದಾಶಿವ ನಗರ, ಸಿರುಗುಪ್ಪ - ೫೮೩ ೧೨೧

ಎಸ್. ಆರ್. ವಿಜಯಶಂಕರ

# ಪಡ್ನೂರಿನ ಪಾಠಗಳು

> ಇದರ ಎರಡು ಕಂತುಗಳು ಈಗಾಗಲೇ ಪ್ರಕಟವಾಗಿದ್ದು, ಮುಂದಿನವನ್ನು ಈಗ ಪ್ರಕಟಿಸಲಾಗುತ್ತಿದೆ.
> – ಸಂ

# ಕೊರಗ್ಗು ಭೂತದ ಜವಾಬ್ದಾರಿ





ಅಂದಿನ ದಕ್ಷಿಣ ಕನ್ನಡ ಜಿಲ್ಲೆಯ ಬಗ್ಗೆ ಯೋಚನೆ ಮಾಡುವಾಗೆಲ್ಲ ನನಗೆ ಮುಸ್ಲಿಮರ ಅನೇಕ ರೀತಿ ನೀತಿಗಳು ನೆನಪಾಗುತ್ತವೆ. ಹಿಂದೂಗಳ ಜೊತೆ ಬದುಕುವ ಆ ಮುಸ್ಲಿಮರೆಲ್ಲಾ ಅರಬ್ ದೇಶದ ಮೂಲ ಮುಸ್ಲಿಮರಂತೆ ಇರುವವರಲ್ಲ. ನಮ್ಮ ದೇಶದ ಎಲ್ಲಾ ಮುಸ್ಲಿಮರೂ ಈ ನೆಲದ ಅನೇಕ ಗುಣಗಳಿಂದ ಪ್ರಭಾವಿತರಾದ ಭಾರತೀಯ ಮುಸ್ಲಿಮರು. ಅದೇ ರೀತಿ ಮುಸ್ಲಿಮರು ಹಿಂದೂಗಳ ಮೇಲೂ, ಅವರ ನಂಬಿಕೆಗಳ ನೆಲೆಗಳಲ್ಲೂ ಪ್ರಭಾವ ಬೀರಿದ್ದಾರೆ. ಭಾರತದಲ್ಲಿ ಬೆಳೆದ ಸೂಫಿ ಪಂಥ ಅದಕ್ಕೊಂದು ಉತ್ತಮ ಉದಾಹರಣೆ. ಕರ್ನಾಟಕದಾದ್ಯಂತ ಇಂತಹ ಹಿಂದೂ ಮುಸ್ಲಿಂ ಸಾಮರಸ್ಯದ ನೂರಾರು ಉದಾಹರಣೆಗಳು ಇರಬಹುದು. ಡಾ|| ರಹಮತ್ ತರೀಕೆರೆ ಅವರ ಸೂಫಿ ಪಂಥದ ಬಗೆಗಿನ ಪುಸ್ತಕ ಕರ್ನಾಟಕದ ಅಂತಹ ಅನೇಕ ಮಾಹಿತಿಗಳನ್ನು ನೀಡುತ್ತದೆ. ಮಂಗಳೂರಿನ ಸಮೀಪದ ಉಳ್ಳಾಲದ ದರ್ಗಾವೂ ಅದಕ್ಕೊಂದು ಉದಾಹರಣೆ.

ನನ್ನ ಹಾಗೆ ಹಿಂದೂ - ಮುಸ್ಲಿಂ ಸಾಮರಸ್ಯದ ಅನುಭವ ಇನ್ನೂ ಅನೇಕರಿಗೆ ಬದುಕಿನ ಭಾಗವಾಗಿದೆ. ಇತ್ತೀಚೆಗೆ ನಾನು ಬೆಂಗಳೂರಿನ ಪ್ರಸಿದ್ಧ ಕ್ರಿಮಿನಲ್ ವಕೀಲ, ಸಿ. ಎಚ್. ಹನುಮಂತರಾಯ ಅವರ 'ವಕೀಲರ ವಗೈರೆಗಳು' ಪುಸ್ತಕ ಓದುತ್ತಿದ್ದಾಗ (ನಿರೂಪಣೆ: ಗಂಗಾಧರ ಕುಷ್ಟಗಿ. ಪತ್ರಿಕೆ ಪ್ರಕಾಶನ, ಬೆಂಗಳೂರು) ಪುಸ್ತಕದಲ್ಲಿ 'ನಿಗಿನಿಗಿ ಕೆಂಡಗಳು ದೊಡ್ಡಪ್ಪನನ್ನು ಸುಡಲಿಲ್ಲ...' ಎಂಬ ಒಂದು ಭಾಗವನ್ನು ವಿಶೇಷವಾಗಿ ಗಮನಿಸಿದೆ. ಬೆಂಗಳೂರು ಸಮೀಪದ ದೊಡ್ಡಬಳ್ಳಾಪುರದ ಚಿಕ್ಕಬೆಳವಂಗಲದ ಹನುಮಂತ ರಾಯರ ಬಾಲ್ಯದ ನೆನಪಿನ ಈ ಕೆಳಗಿನ ಮೂರು ಪ್ಯಾರಾಗಳನ್ನು ಮೊದಲು ಓದೋಣ.

''ಅದು ಮೊಹರಮ್ ಸಮಯ. ನಮ್ಮೂರ ಬಾಬಯ್ಯನ ಗುಡಿ ಮದುವಣಗಿತ್ತಿಯಂತೆ ಸಿಂಗರಿಸಿಕೊಂಡಿತ್ತು. ಮುಂಚಿನಿಂದಲೂ ನಮ್ಮೂರಲ್ಲಿದ್ದ ಗುಡಿಯಲ್ಲವದು. ನನ್ನ ತಾಯಿಯ ಪೂರ್ವಜರಿಗೆ ಮಕ್ಕಳಾಗಿರಲಿಲ್ಲವಂತೆ. ಹಿಂದೂಪುರ ತಾಲ್ಲೂಕಿನ ಪೆನುಗೊಂಡ ಗ್ರಾಮದ ಬಾಬಯ್ಯ, ಹೊತ್ತ ಹರಕೆ ಈಡೇರಿಸುವುದಕ್ಕೆ ಪ್ರಸಿದ್ಧನಾಗಿದ್ದ. ತಮಗೆ ಮಕ್ಕಳಾಗಲಿ ಎಂದು ಪೆನುಗೊಂಡದಿಂದ ಬಾಬಯ್ಯನ ಲೋಹದ ಹಸ್ತ ಮಾಡಿಸಿ ತಂದು ನಮ್ಮ ಊರಲ್ಲಿ ಸ್ಥಾಪಿಸಿದ್ದರು. ಊರಲ್ಲಿ ಮುಸ್ಲಿಮರಾರೂ ಇರಲಿಲ್ಲವಾಗಿ ದೊಡ್ಡಬಳ್ಳಾಪುರದಿಂದ ಒಂದು ಮುಸ್ಲಿಂ ಕುಟುಂಬವನ್ನು ಕರೆತಂದು ವಾಸಕ್ಕೆ ಮನೆಯ ವ್ಯವಸ್ಥೆಯನ್ನೂ ಮಾಡಿದ್ದರು. ಬಾಬಯ್ಯನಿಗಾಗಿ ಒಂದು ದೊಡ್ಡ ಗುಡಿಯನ್ನೂ ಕಟ್ಟಿಸಿದ್ದರು. ಬಾಬಯ್ಯನನ್ನು ಚಿಕ್ಕಬೆಳವಂಗಲದಲ್ಲಿ ಕೂರಿಸಿ ಒಂದು ಮೊಹರಮ್ ಮುಗಿಯುತ್ತಿದ್ದಂತೆಯೇ ನನ್ನ ತಾಯಿಯ ಪೂರ್ವಜರಿಗೆ ಗಂಡುಮಗುವಾಯಿತಂತೆ.

''ಮೊಹರಮ್ ಬಂತೆಂದರೆ ನನಗೆ ಮೈ ಮರೆಯುವ ಖುಷಿ. ದೂರದ ನೆಂಟರು ಮತ್ತು ಅವರ ಮಕ್ಕಳು ಬಂದು ಮನೆ ಮನೆಗಳಿಗೆ ಹೊಸಕಳೆ ಬರುತ್ತಿತ್ತು. ವರ್ಷವಿಡೀ ಕಟ್ಟಿಗೆಯ ಟ್ರಂಕಿನಲ್ಲಿರುತ್ತಿದ್ದ ಬಾಬಯ್ಯ ಮೊಹರಮ್ ಬಂತೆಂದರೆ ಹೊರಕ್ಕೆ ಬರುತ್ತಿದ್ದ. ಬಾಬಯ್ಯನ ಹಸ್ತಗಳನ್ನು ಆರಡಿ ಕೋಲಿಗೆ ಕಟ್ಟಿ ಅದರ ಮೇಲೆ ಜರಿಯಿಂದ ಕೂಡಿದ ಮಿಂಚುವ ಬಟ್ಟೆಗಳನ್ನು ಇಳಿಬಿಡುತ್ತಿದ್ದರು. ಹಸ್ತ ಮುಖದಂತೆಯೂ ಬಟ್ಟೆ ಹೊದಿಕೆಯಿಂದಾವೃತ ಭಾಗ ದೇಹದಂತೆಯೂ ಕಾಣಿಸುತ್ತಿತ್ತು. ಅದಕ್ಕೊಂದು ದೈವೀ ಆಕಾರ ಮತ್ತು ಕಳೆ ಮೇಳೈಸಿಕೊಳ್ಳುತ್ತಿದ್ದವು. ಖತಲ್ ರಾತ್ರಿಯ ದಿನ ಹದಿನೈದು ಅಡಿ ವ್ಯಾಸದ ಕೊಂಡವೊಂದನ್ನು ಬಾಬಯ್ಯನ ಗುಡಿಯ ಎದುರಾಗಿ ಅಗೆದು ನಿರ್ಮಿಸಿ ಅದರಲ್ಲಿ ಕಟ್ಟಿಗೆಯ ದೊಡ್ಡ ದೊಡ್ಡ ಕೊರಡುಗಳನ್ನು ತಂದುಹಾಕಿ ಅದಕ್ಕೆ ಉರಿ ಹಚ್ಚುತ್ತಿದ್ದರು. ಸಂಜೆಗೆ ಹಚ್ಚಿದ ಉರಿಗೆ ರಾತ್ರಿಯಾಗುತ್ತಿದ್ದಂತೆ ಕೊರಡಲ್ಲಿ ತಿವಿದು ತಿವಿದು ಹೊಡೆಯುತ್ತಿದ್ದರು. ಆಗ ಅಲಾಯಿ ಕುಣಿಸುತ್ತಲೂ ನಿಂತ ಹೆಣ್ಣು ಗಂಡುಗಳ ಮುಖಗಳು ಸಂಜೆಯ ಸೂರ್ಯನಂತೆ ಕೆಂಪಾಗಿ ಕಾಣುತ್ತಿದ್ದವು.

''ಹರಕೆ ಹೊತ್ತವರು ಹುಲಿ ಬಣ್ಣ ಬಳಿದುಕೊಂಡು ಕೊಂಡದ ಸುತ್ತ ಕುಣಿಯುತ್ತಿದ್ದರು. ಹುಲಿ ಕುಣಿತದ ಹಳಿಗೆ ಸಪ್ಪಳ ಕಿವಿಗೆ ಬಿದ್ದೊಡನೆ ಮಕ್ಕಳ ಹೆಜ್ಜೆಗಳು ತಮಗೆ ತಾವೇ ಕುಣಿಯಲಾರಂಭಿಸುತ್ತಿದ್ದವು. ಬಾಬಯ್ಯನನ್ನು ಹೊಳೆಗೆ ಕಳಿಸುವ ರಾತ್ರಿ ಊರು ಪರ ಊರುಗಳ ಜನರೆಲ್ಲ ಭಾರೀ ಸಂಖ್ಯೆಯಲ್ಲಿ ಸೇರುತ್ತಿದ್ದರು. ಮಿಠಾಯಿ, ಬೋಂಡ, ಕಳ್ಳೆಪುರಿ, ಆಟಿಕೆ ಸಾಮಾನು ಇತ್ಯಾದಿಗಳ ಅಂಗಡಿಗಳು ಬೀಡು ಬಿಡುತ್ತಿದ್ದವು. ಬಾಬಯ್ಯನಿಗೆ ಸಕ್ಕರೆ ಓದಿಸಲು ಬರುವವರೆಲ್ಲ ಮಕ್ಕಳಿಗೆ ಸಕ್ಕರೆ ಹಂಚುತ್ತಿದ್ದರು. ಬಾಬಯ್ಯನ ಗುಡಿ ಮುಂದಿನ ಕೊಂಡದಲ್ಲಿನ ಬಿಸಿ ಬೂದಿಯನ್ನು ವರ್ಷವಿಡೀ ಕಂಟಕನಾಶ ಭಸ್ಮವೆಂದು ಧರಿಸಿಕೊಳ್ಳುವುದಕ್ಕೋಸ್ಕರ ಒಯ್ಯಲು ಬೆಳಿಗ್ಗೆ ತಮ್ಮ ಸಮಯಾನುಕೂಲಕ್ಕೆ ಅನುಸಾರವಾಗಿ ಜನ ಬರುತ್ತಿದ್ದರು.''

**ಉಳ್ಳಾಲದ ದರ್ಗಾ :** ದಕ್ಷಿಣ ಕನ್ನಡದಿಂದ ದೂರದ ಊರಿನ ಒಬ್ಬರ ಬಾಲ್ಯದ ಅನುಭವವಿದು. ನಮ್ಮ ಪಡ್ನೂರು ಗ್ರಾಮದಲ್ಲಿ ಅಂತಹ ಅನೇಕ ಅನುಭವಗಳಿವೆ. ನಮ್ಮ ಊರಲ್ಲಿ ದನಕರುಗಳಿಗೆ ಅನಾರೋಗ್ಯವಾದರೆ ಹರಕೆ ಹೊರಲು ಎರಡು ದೇವರುಗಳು – ಒಂದು ಮುಸ್ಲಿಂ ಮತ್ತೊಂದು ಹಿಂದೂ. ಒಬ್ಬ ತೀರಿಕೊಂಡ ಗುರು ಮತ್ತೊಬ್ಬ ಭೂತಾರಾಧನೆಯಲ್ಲಿ ಆರಾಧಿಸಲ್ಪಡುವವ. ಅದಲ್ಲದೆ ಮತ್ತೊಬ್ಬ ಗೋಪಾಲಕೃಷ್ಣದೇವ.

ನಮ್ಮ ಹಳ್ಳಿಯಲ್ಲಿ ಗೋ ಆಸ್ಪತ್ರೆಗಳಿಲ್ಲ. ೧೯೫೦ರ ದಶಕದಲ್ಲಿ ವಿಟ್ಲಕ್ಕೆ ಒಂದು ಗೋ ಆಸ್ಪತ್ರೆಯ ನೆಲೆ ಉಂಟಾದುದು. ಸರಿಸುಮಾರು ೧೯೭೦-೮೦ರವರೆಗೂ ಸುತ್ತಮುತ್ತಲಿನ ಹಳ್ಳಿಗಳಲ್ಲಿ ದನಕರುಗಳಿಗೆ ಔಷಧಿ ಕೊಡುವವರು ಹಳ್ಳಿಯ ವೈದ್ಯರೆ. ಅವರಲ್ಲಿ ಮಂಜು ಸಪಲ್ಯ ಹಾಗೂ ಸುಲೇಮಾನ್ ಬ್ಯಾರಿ ಎಂಬಿಬ್ಬರ ಬಗ್ಗೆ ಈಗಾಗಲೇ ಹೇಳಿದ್ದೇನೆ.

ನಮ್ಮ ಪಡ್ನೂರು ಗ್ರಾಮದಲ್ಲಿ ದನಕರುಗಳಿಗೆ ಕಾಯಿಲೆ ಆದರೆ ಮಂಗಳೂರಿನ ಸಮೀಪದ ಉಳ್ಳಾಲದ ದರ್ಗಾಕ್ಕೆ ಹರಕೆ ಹೇಳುವ ಕ್ರಮ. ನಮ್ಮ ಹಳ್ಳಿಯಿಂದ ನಲವತ್ತು ಮೈಲು ದೂರದ ಆ ಜಾಗಕ್ಕೆ ಮೊದಲಿಗೆ ನೇತ್ರಾವತಿ ನದಿ ದಾಟಿ

ಹೋಗಬೇಕಾದ ಕಷ್ಟ. ಹಾಗಾಗಿ ಅಲ್ಲಿಗೆ ವಾರ್ಷಿಕ ಉರುಸ್‌ಗೆ ಹೋಗುವವರ ಬಳಿ ಅಥವಾ ತಮ್ಮ ಹರಕೆ ಸಲ್ಲಿಸಲು ಹೋಗುವವರ ಬಳಿ ಇನ್ನೊಬ್ಬರೂ ಹರಕೆ ಕಳುಹಿಸಬಹುದಾಗಿತ್ತು. ಅಲ್ಲಿನ ಉರುಸ್‌ಗೆ ಹಿಂದೂಗಳೂ ಮುಸ್ಲಿಮರ ಜೊತೆ ಹರಕೆ ಸಲ್ಲಿಸಲು ಹೋಗುವ ಕ್ರಮ ಇತ್ತು. ನಮ್ಮ ಬೈಲಿನಲ್ಲಿ ನಮ್ಮ ಮನೆಗೆ ಅಥವಾ ಪಕ್ಕದ ಮನೆಯವರ ತೋಟಗಳಿಗೆ ಕೆಲಸಕ್ಕೆ ಬರುವ ಮುಸ್ಲಿಮರ ಮೂಲಕ ಹರಕೆ ಕಳುಹಿಸುವವರೂ ಇದ್ದರು. ನಮ್ಮ ಮನೆಯ ದನಕರುಗಳಿಗೆ ರೋಗ ತಗುಲಿದ್ದಾಗ, ಉಳ್ಳಾಲದ ದರ್ಗಾಕ್ಕೆ ಹೇಳಿದ ಹರಕೆಯನ್ನು ನಮ್ಮ ಮನೆಯ ಕೆಲಸದ ಮುಸ್ಲಿಂ ಒಬ್ಬ ಅವರ ಹರಕೆಗಾಗಿ ಉಳ್ಳಾಲಕ್ಕೆ ಹೋಗುತ್ತಿದ್ದಾಗ ನಮ್ಮ ಅಜ್ಜಿ ಅವನ ಬಳಿ ಕಳುಹಿಸಿಕೊಟ್ಟುದು ನನಗಿನ್ನೂ ನೆನಪಿದೆ.

**ಖಾಜೀ ಬಂದೇ ನವಾಜ್ ದರ್ಗಾ :** ಹಿಂದೂಗಳು ದರ್ಗಾಗಳಲ್ಲಿ ಹರಕೆ ಒಪ್ಪಿಸುವುದು ಒಂದು ಸಾಮಾನ್ಯ ಪದ್ಧತಿ ಎಂದು ತೋರುತ್ತದೆ. ನಾನು ಮೊದಲ ಸಲ ಗುಲ್ಬರ್ಗಾದ ಖಾಜೀ ಬಂದೇ ನವಾಜ್ ದರ್ಗಾಕ್ಕೆ ನೋಡಲು ಹೋಗಿದ್ದಾಗ ಅಲ್ಲಿ ಹಿಂದೂ ಧರ್ಮಕ್ಕೆ ಸೇರಿದ ಹಳ್ಳಿಯ ಸಾಮಾನ್ಯ ವ್ಯಕ್ತಿಯೊಬ್ಬ ತನ್ನ ಕುಟುಂಬದವರೊಡನೆ ಬಂದು ತಾನು ಮಾಡಿ ತಂದ ಊಟವನ್ನು ಭಿಕ್ಷುಕರಂತೆ ತೋರುವ ಜನರಿಗೆ ಬಡಿಸುತ್ತಿದ್ದ. ನಾನು ವಿಚಾರಿಸಿದಾಗ ಅವನು ಕೋರ್ಟು ಕೇಸು ಒಂದರಲ್ಲಿ ಜಯಗಳಿಸಿದ್ದಾಗಿ ತಿಳಿಯಿತು. ಹಾಗೆ ಜಯಗಳಿಸಿದರೆ ತಾನು ದರ್ಗಾದಲ್ಲಿ ಮೂವತ್ತು ಜನ ಫಕೀರರಿಗೆ ಊಟ ಹಾಕುವುದಾಗಿ ಹರಕೆ ಹೊತ್ತಿದ್ದನಂತೆ. ಹಾಗೆಯೇ ಅಲ್ಲೆ ಪಕ್ಕದಲ್ಲಿ ಇನ್ನೊಬ್ಬ ಹಿಂದೂ ತನ್ನ ಸಹೋದರನ ಕೈಗಳನ್ನು ಪಂಚೆಯೊಂದರಲ್ಲಿ ಕಟ್ಟಿ ಹಿಡಿದುಕೊಂಡು ತನ್ನ ಕುಟುಂಬದವರೊಡನೆ ನಿಂತಿದ್ದ. ನಾನು ವಿಚಾರಿಸಿದಾಗ, ಅವನ ತಮ್ಮನಿಗೆ ಮಾನಸಿಕ ರೋಗ ಎಂದು ತಿಳಿಯಿತು. ಮಾನಸಿಕ ಅಸ್ವಸ್ಥರಿಗೆ ಬೇಗನೆ ಗುಣವಾಗಲೆಂದು ಗುಲ್ಬರ್ಗಾದ ದರ್ಗಾಕ್ಕೆ ಹರಕೆ ಹೊರುವ ಕ್ರಮ ಇದೆಯಂತೆ.

ನಮ್ಮ ಪಡ್ನೂರು ಗ್ರಾಮದಲ್ಲಿ ದನಗಳ ಕಾಯಿಲೆಗೆ ದರ್ಗಾಕ್ಕೆ ಹರಕೆ ಹೇಳಿದಂತೆ ಗಡಸುಗಳು ಕರು ಹಾಕದಿದ್ದರೆ ನಮ್ಮ ಪಕ್ಕದ ಸೀಮೆಯಾದ ಕುಂಬಳೆಯ ಗೋಪಾಲಕೃಷ್ಣ ದೇವಸ್ಥಾನಕ್ಕೆ ಹರಕೆ ಹೇಳುವ ಕ್ರಮ. ಅದರಂತೆ ಕರು ಹಾಕದ ಗಡಸು ಕರು ಹಾಕಿದರೆ ಅದರ ಶುದ್ಧದ ದಿನ (ಅಂದರೆ ಕರು ಹಾಕಿದ ಹನ್ನೊಂದನೇ ದಿನ)ದ ಹಾಲನ್ನು ತೆಗೆದುಕೊಂಡು ಹೋಗಿ ಗೋಪಾಲಕೃಷ್ಣ ದೇವಸ್ಥಾನಕ್ಕೆ ಕೊಟ್ಟು ಬರುವ ಕ್ರಮ. ನನ್ನ ತಾಯಿಯ ತವರು ಕಡೆಯಿಂದ ಬಂದ ಸಿಂಧಿ ಜಾತಿಗೆ ಹತ್ತಿರವಾದ ಒಂದು ದನ ಇತ್ತು. ಅದರ ಮಗಳು ಕರು ಹಾಕಲಿಲ್ಲ ಎಂದು ನನ್ನ ಅಮ್ಮ ಗೋಪಾಲಕೃಷ್ಣ ದೇವಸ್ಥಾನಕ್ಕೆ ಹೇಳಿದ ಹರಕೆಯ ಹಾಲನ್ನು ನಾನೇ ತೆಗೆದುಕೊಂಡುಹೋಗಿ ಕೊಟ್ಟುಬಂದಿದ್ದೆ. ಹಾಗೆ ದನಗಳಿಗೆ ಹುಷಾರಿಲ್ಲದಿದ್ದಾಗ ಉಳ್ಳಾಲಕ್ಕೆ ಹರಕೆ ಹೇಳುವುದೂ ಸಾಮಾನ್ಯ ಸಹಜ. ಒಂದೇ ಹಟ್ಟಿಯ ಒಂದು ದನಕ್ಕೆ ಉಳ್ಳಾಲದ ದರ್ಗಾಕ್ಕೆ ಮತ್ತೊಂದು ಕರುಹಾಕದ ಗಡಸಿಗೆ ಗೋಪಾಲಕೃಷ್ಣ ದೇವಸ್ಥಾನಕ್ಕೆ ಹರಕೆ ಹೇಳುವುದು ಯಾವ ಸಮಸ್ಯೆಯೂ ಇಲ್ಲದ ಸಹಜ ನಂಬುಗೆಯಾಗಿತ್ತು. ನಮ್ಮ ಮನೆಯಲ್ಲಿ ಅವೆರಡೂ ಸಾಮಾನ್ಯ ಎಂಬಂತೆ ನಡೆಯುತ್ತಿತ್ತು.

**ಕೊರಗ್ಗು ಭೂತದ ಜವಾಬ್ದಾರಿ :** ಆ ಕಾಲಕ್ಕೆ ನಮ್ಮ ಹಳ್ಳಿಯಲ್ಲಿ ಬೆಳಿಗ್ಗೆ ಅಕ್ಕಚ್ಚುಕೊಟ್ಟ ಬಳಿಕ ದನಗಳನ್ನು ಗುಡ್ಡಕ್ಕೆ ಹುಲ್ಲು ಮೇಯಲು ಬಿಡುವ ಕ್ರಮ ಇತ್ತು. ಗುಡ್ಡೆಗೆ ದನಗಳನ್ನು ಎಬ್ಬಿ ಬಂದರೆ ಸಂಜೆಗೆ ಅವು ಹಿಂತಿರುಗುತ್ತಿದ್ದವು. ಒಮ್ಮೊಮ್ಮೆ ದನಗಳು ಸಂಜೆ ಹಿಂದಕ್ಕೆ ಬಾರದೆ ಇರುವುದು ಇತ್ತು. ಅಪರೂಪಕ್ಕೆ ಒಮ್ಮೊಮ್ಮೆ ಗುಡ್ಡಗಳ ಕಿಬ್ಬಿನಲ್ಲಿ ಎತ್ತರದಿಂದ ದನಗಳು ಕಾಲು ಜಾರಿ ಗುಂಡಿಗೆ ಬಿದ್ದು ಸತ್ತುಹೋಗುತ್ತಿದ್ದವು. ಹೀಗೆ ಗುಡ್ಡೆಗಳಿಗೆ ಬಿಡುವ ದನಗಳನ್ನು ಕಾಯುವುದು ಮತ್ತು ಅವನ್ನು ಜೋಪಾನವಾಗಿ ಸಂಜೆ ಹಟ್ಟಿಗೆ ಹಿಂತಿರುಗಿ ಕರಕೊಂಡು ಬರುವುದು ಕೊರಗ್ಗು ಭೂತದ ಜವಾಬ್ದಾರಿ.

ದಕ್ಷಿಣ ಕನ್ನಡ ಜಿಲ್ಲೆ ಭೂತಾರಾಧನೆಗೆ ಪ್ರಸಿದ್ಧ. ಭೂತಗಳಲ್ಲೂ ಸಾಕಷ್ಟು ಶ್ರೇಣಿಗಳಿದ್ದವು. ನಮ್ಮ ಊರಲ್ಲಿದ್ದ ಎರಡು ದೈವಸ್ಥಾನಗಳಲ್ಲಿ (ಭೂತಾರಾಧನೆಯ ಈ ದೈವ ಸ್ಥಾನಗಳಿಗೆ 'ಬದಿ' ಎಂದು ಹೆಸರು) ಮಲರಾಯನೇ ದೊಡ್ಡ ದೈವ. ಅವನಿಗೆ ಅಟ್ಟಣಿಗೆ ಕಟ್ಟಿದ ವೇಷ. ವಲ್ಸಾರಿಯಲ್ಲಿ ಅವನು ಹಿಂದೆ ಮುಂದೆ ಹೋಗುವಾಗ ಬ್ಯಾಂಡ್‌ವಾದ್ಯಗಳ ಗೌಜಿ. ಆ ಶ್ರೇಣಿಯಲ್ಲಿ ಕೊರಗ್ಗು ಭೂತಕ್ಕೆ ಮತ್ತಿನ ಸ್ಥಾನ.

ಕೊರಗ್ಗು ಭೂತ ಹೆಚ್ಚು ಕಮ್ಮಿ ಕೊನೆಗೆ ಬರುವ ಭೂತ. ಕೊರಗ್ಗು ಭೂತದ ಆಗಮನ ಆಗುವಾಗ ಹಗಲಾಗುತ್ತಿತ್ತು. ಯಜಮಾನರದ್ದೊಂದು ಸಾಮಾನ್ಯ ಪ್ರಾರ್ಥನೆ. ಅಟ್ಟಣಿಗೆ ಭೂತದ ಎದುರು ಸಿಂಗಾರ, ಎಲೆ ಅಡಿಕೆ ಹಿಡಿದು ಕೈಮುಗಿದು ಬಾಗಿ ನಿಲ್ಲುವ ಹಿಲಾಲು ಬೆಳಕಿನ ಗೌಜಿ ಬೇರೆ. ಕೊರಗ್ಗು ಭೂತದೊಡನೆ "ಕೈಂಕಂಜಿಲೆನು ಕಾದುದು ಕೊರೊಡು" (ದನಕರುಗಳನ್ನು ಕಾಪಾಡಿಕೊಡಬೇಕು) ಎಂದು ಬೇಡಿಕೊಳ್ಳುವ ವಿನಯದ ಕ್ರಮ ಬೇರೆ.

**ಸರಳ ಆಕಾರ :** ಕೊರಗ್ಗುವ ಭೂತದ ಆಕಾರವೂ ಸರಳ. ಬರಿ ಮೈಗೆ ಕಪ್ಪು ಬಣ್ಣ, ತಲೆಗೆ ಕಿರೀಟ ಇಲ್ಲ, ಬದಲಾಗಿ ಮುಟ್ಟಾಳೆ (ಅಡಿಕೆ ಹಾಳೆಯ ಟೊಪ್ಪಿ), ಕಪ್ಪು ಬಳಿದ ಮುಖಕ್ಕೆ ಬಿಳಿ ಬೊಟ್ಟುಗಳು, ಕೆಂಪುಗೆರೆ. ಕಾಲಿಗೆ ಗೆಜ್ಜೆ. ಸೊಂಟಕ್ಕೆ ತೆಳ್ಳಗಿನ ಹಸಿರು ಒಲಿ (ತೆಂಗಿನ ಸೋಗೆಯ ಹಸಿರು ಪಟ್ಟಿ). ಕೈಯಲ್ಲೊಂದು ಕಬ್ಬಿಣದ ಕೋಲು. ಮಲರಾಯ ಭೂತದಂತೆ ಖಡ್ಗ ಅಲ್ಲ. ಕೊರಗ್ಗು ಭೂತಕ್ಕೆ ದೊಡ್ಡ ಹರಕೆ ಎಂದರೆ ಅದರ ಕೋಲಿಗೊಂದು ಬೆಳ್ಳಿಯ ಕಟ್ಟು ಹಾಕಿಸುವುದು.

ಆದರೆ ಕೊರಗ್ಗು ಭೂತ ಬರುವವರೆಗೆ ಹರಕೆ ಹೇಳಿಕೊಂಡ ಹೆಂಗಸರು ಎದ್ದುಹೋಗರು. ಕೊರಗ್ಗು ಭೂತದ ಮುಟ್ಟಾಳೆಗೆ ಚಿಲ್ಲರೆ ನಾಣ್ಯದ ಕಾಣಿಕೆ. ಆದರೆ ಆ ವರುಷ ದನ ಕಳಕೊಂಡವರು, ಬೆಟ್ಟದಲ್ಲಿ ದನಕರು ಬಿದ್ದು ಸತ್ತುಹೋದ ಮನೆಯ ಹೆಣ್ಣು ಮಕ್ಕಳು ತಮ್ಮ ಹರಕೆ ಒದಿಸಿ ಭೂತಾರಾಧನೆಯ ಸಂದರ್ಭದಲ್ಲಿ ಹರಕೆ ಹೇಳಿಯೇ ಹೊರಡುವವರು. ಕೊರಗ್ಗು ಭೂತ ದನಕರುಗಳಿಂದಾಗಿ ಹೆಣ್ಣುಮಕ್ಕಳಿಗೆ ಹತ್ತಿರದ ಭೂತ. ಹಾಲು ಕರೆಯುವುದು, ಹುಲ್ಲು ಮಾಡುವುದು, ಅಕ್ಕಚ್ಚು ಕೊಡುವುದು ಹೀಗೆ ದನಕರುಗಳ ಹೆಚ್ಚಿನ ಕೆಲಸ ಹೆಣ್ಣುಮಕ್ಕಳ ಜವಾಬ್ದಾರಿ.

ಇಂತಹ ಕೆಲಸಗಳಲ್ಲಿ ತೊಡಗಿರುವ ಮನೆಯ ಹೆಂಗಸರಿಗೆ ಕಿದೆ ಅಥವಾ ಹಟ್ಟಿಯ ದನಕರುಗಳೆಂದರೆ ಮನೆಯ ಸದಸ್ಯರ ಹಾಗೆ. ನಮ್ಮ ಮನೆಯಲ್ಲಿದ್ದ ಗಾಡಿ ಎತ್ತುಗಳಿಗೆ ಗಂಡಸರು ಮಾಲೀಸು ಮಾಡುತ್ತಿದ್ದರು. ಗದ್ದೆ ಹೂಟೆಯ ಎತ್ತುಗಳು ಹಾಗೂ ಕೋಣಗಳ ಜೊತೆಗಳಿಗೆ ಸಂಜೆ ಕುಡು (ಹುರುಳಿ) ಕೊಡುವ ಕೆಲಸ ಗಂಡಸರದ್ದು. ಹಾಲು ಕರೆಯುವುದು, ದನಕರುಗಳನ್ನು ನೋಡಿಕೊಳ್ಳುವುದೆಲ್ಲಾ ಹೆಂಗಸರು. ಹೂಟೆ (ಗದ್ದೆ ಉಳುವುದು) ಎತ್ತು ಕೋಣಗಳನ್ನು ಹಾಗೂ ಗಾಡಿ ಎತ್ತುಗಳನ್ನು ಬೆಳಿಗ್ಗೆ ಮೇದುಕೊಂಡು ಬರಲು ಗುಡ್ಡಕ್ಕೆ ಎಬ್ಬುವ ಕ್ರಮ ಇರಲಿಲ್ಲ. ಹಾಗಾಗಿ ಗುಡ್ಡಕ್ಕೆ ಹೋಗುವವು ದನಕರುಗಳು ಹಾಗೂ ಬೀಜಕ್ಕೆಂದು ಬಿಟ್ಟ ಹೋರಿ (ಬಸವ) ಮಾತ್ರ. ಬೀಜದ ಬಸವ ಒಂದು ದಿನ ಬಾರದಿದ್ದರೆ ಮನೆಯಲ್ಲೇನೂ ಗಲಾಟೆ ಇಲ್ಲ, ಅದು ಯಾವುದೇ ಬೆದೆಗೆ ಬಂದ ದನದ ಜೊತೆ ಇನ್ನೊಂದು ಹಟ್ಟಿಗೆ ಹೋಗಿದೆ ಎಂದು ಲೆಕ್ಕ. ಆದರೆ ದನಕರುಗಳು ಸಂಜೆ ಬಾರದಿದ್ದರೆ ಗೌಜಿಯಾಗುತ್ತಿತ್ತು. ಹುಡುಕಿಕೊಂಡು ಗುಡ್ಡೆಗೆ ಹೋಗುತ್ತಿದ್ದರು. ಸಿಗದಿದ್ದಾಗ ಕೊರಗ್ಗು ಭೂತಕ್ಕೆ ಗಂಜಿ ಇಡುವ ಹರಕೆ.

**ಭೂತಕ್ಕೆ ಗಂಜಿ :** ಕೊರಗ್ಗು ಭೂತಕ್ಕೆ ಗಂಜಿ ಇಡುವುದಕ್ಕೆ ವಿಶಿಷ್ಟವಾದ ಒಂದು ನೇಮವುಂಟು. ಅದಕ್ಕಾಗಿ ಮೊದಲು ಅಡಿಕೆ ಮರದ ಹಸಿ ಹಾಳೆಯ ಪಡಿಗೆ ಮಾಡಬೇಕು. ಪಡಿಗೆ ಅಂದರೆ ಅಡಿಕೆ ಹಾಳೆಯನ್ನು ಕತ್ತರಿಸಿ ಚೌಕಾಕಾರದಲ್ಲಿ ಕೂರಿಸಿ ಅಡಿಕೆ ಹಾಳೆ ನಾರು ಅಥವಾ ಮಡಲಿನ ಕಡ್ಡಿಗಳಿಂದ ಬಂಧಿಸಿ ಮಾಡುವ ಪಾತ್ರೆ ರೂಪ. ಅದರಲ್ಲಿ ಕುಚ್ಚಿಲು ಅಕ್ಕಿ ಗಂಜಿಯನ್ನು ತುಂಬಿಸಿ ಉಪ್ಪು ಹಾಕಬೇಕು. ಆಮೇಲೆ ಮಡಲು (ತೆಂಗಿನ ಗರಿ) ಕಡ್ಡಿಯನ್ನು ಮಾಡಿ ಅದಕ್ಕೆ ತೆಳ್ಳಗಿನ ನೆಣೆ (ಬಟ್ಟೆ) ಸುತ್ತಿ ಅದನ್ನು ತೆಂಗಿನ ಎಣ್ಣೆಯಲ್ಲಿ ಅದ್ದಬೇಕು. ಅಂತಹ ಎರಡು ಕಡ್ಡಿಗಳಿಗೆ ಬೆಂಕಿ ಹಚ್ಚಿ ಗಂಜಿ ಪಡಿಗೆಯ ಎರಡು ತುದಿಗೆ ಕುತ್ತಬೇಕು. ಮುಸ್ಸಂಜೆ ಕಳೆದು ಹೊತ್ತು ಕಂತುವಾಗ ಮನೆಯ ಪಾಗಾರದ ಹೊರಗೆ ರಸ್ತೆಯ ಮೂಲೆಯೊಂದರಲ್ಲಿ ಉರಿವ ಕಡ್ಡಿಗಳೊಂದಿಗೆ ಈ ಗಂಜಿಯನ್ನು ಇಡಬೇಕು. ಹಾಗೆ ಕೊರಗ್ಗು ಭೂತಕ್ಕೆ ಗಂಜಿ ಇಟ್ಟರೆ ಕಳೆದುಹೋದ ದನಕರು ಹಿಂತಿರುಗುತ್ತವೆ ಎಂಬ ನಂಬುಗೆ. ಒಮ್ಮೊಮ್ಮೆ ದನಕರು ಹಿಂತಿರುಗಿದ ಮೇಲೆ ಗಂಜಿ ಇಡುತ್ತೇನೆ ಎಂದು ಕೊರಗು ಭೂತಕ್ಕೆ ಹರಕೆ ಹೇಳುವ ಕ್ರಮವೂ ಇತ್ತು.

ಭೂತಾರಾಧನೆ ದಿನ ಬದಿಯ (ದೈವಸ್ಥಾನ) ಜಾತ್ರೆಗೆ ಬರುವ ಮುಸ್ಲಿಂ ಗಂಡು - ಹೆಣ್ಣುಗಳೂ ಭೂತಗಳಿಗೆ ಹರಕೆ ಹಾಕುತ್ತಿದ್ದರು. ಹೆಚ್ಚಾಗಿ ಮುಸ್ಲಿಂ ಗಂಡು-ಹೆಣ್ಣುಗಳೂ ಅಲ್ಲಿರುವ ಪರಿಚಯದ ಹಿಂದುಗಳ ಕೈಯಲ್ಲಿ ದುಡ್ಡು ಕೊಟ್ಟು ಅವರ ಪರವಾಗಿ ಹಾಕುವಂತೆ ಹೇಳುತ್ತಿದ್ದರು. ಚೆಯ್ಯಮ್ಮ ಅಂತ ಒಬ್ಬಾಕೆ ಮುಸ್ಲಿಂ ಹೆಣ್ಣುಮಗಳು ಅವಳ ಗಂಡ ಜಾಗ್ರತೆ ಮನೆಗೆ ಹಿಂದಿರುಗಲಿ ಎಂದು ಹರಕೆ ಹೇಳುತ್ತಿದ್ದಳು. ಮತ್ತೊಬ್ಬಳು ಮುಸ್ಲಿಂ ಹೆಂಗಸು ಪ್ರತಿ ವರುಷ ಎಂಬ ಹಾಗೆ ಮನೆ ಬಿಟ್ಟು ಓಡಿ ಹೋದ ಮಗ ಪುನಃ ಮನೆಗೆ ವಾಪಾಸು ಬರಬೇಕು

---

ಮೊಹರಮ್ ಬಂತೆಂದರೆ ನನಗೆ ಮೈ ಮರೆಯುವ ಖುಷಿ. ದೂರದ ನೆಂಟರು ಮತ್ತು ಅವರ ಮಕ್ಕಳು ಬಂದು ಮನೆ ಮನೆಗಳಿಗೆ ಹೊಸಕಳೆ ಬರುತ್ತಿತ್ತು. ವರ್ಷವಿಡೀ ಕಟ್ಟಿಗೆಯ ಟ್ರಂಕಿನಲ್ಲಿರುತ್ತಿದ್ದ ಬಾಬಯ್ಯ ಮೊಹರಮ್ ಬಂತೆಂದರೆ ಹೊರಕ್ಕೆ ಬರುತ್ತಿದ್ದ. ಬಾಬಯ್ಯನ ಹಸ್ತಗಳನ್ನು ಆರಡಿ ಕೋಲಿಗೆ ಕಟ್ಟಿ ಅದರ ಮೇಲೆ ಜರಿಯಿಂದ ಕೂಡಿದ ಮಿಂಚುವ ಬಟ್ಟೆಗಳನ್ನು ಇಳಿಬಿಡುತ್ತಿದ್ದರು. ಹಸ್ತ ಮುಖದಂತೆಯೂ ಬಟ್ಟೆ ಹೊದಿಕೆಯಿಂದಾವೃತ ಭಾಗ ದೇಹದಂತೆಯೂ ಕಾಣಿಸುತ್ತಿತ್ತು. ಅದಕ್ಕೊಂದು ದೈವೀ ಆಕಾರ ಮತ್ತು ಕಳೆ ಮೇಳೈಸಿಕೊಳ್ಳುತ್ತಿದ್ದವು. ಖತಲ್ ರಾತ್ರಿಯ ದಿನ ಹದಿನೈದು ಅಡಿ ವ್ಯಾಸದ ಕೊಂಡವೊಂದನ್ನು ಬಾಬಯ್ಯನ ಗುಡಿಯ ಎದುರಾಗಿ ಅಗೆದು ನಿರ್ಮಿಸಿ ಅದರಲ್ಲಿ ಕಟ್ಟಿಗೆಯ ದೊಡ್ಡ ದೊಡ್ಡ ಕೊರಡುಗಳನ್ನು ತಂದುಹಾಕಿ ಅದಕ್ಕೆ ಉರಿ ಹಚ್ಚುತ್ತಿದ್ದರು.

ಎಂದು ಹರಕೆ ಹೇಳುತ್ತಿದ್ದಳು. ನಮ್ಮ ಊರಿನ ಸಾಕಷ್ಟು ಶ್ರೀಮಂತ ಬ್ರಾಹ್ಮಣರೊಬ್ಬರಿಗೆ ಐದು ಜನ ಗಂಡು ಮಕ್ಕಳು. ಅವರಲ್ಲೊಬ್ಬನಿಗೆ ಮೋಟಾರು ಬೈಕು ಇತ್ತು. ಅವನಿಗೊಮ್ಮೆ ಆ್ಯಕ್ಸಿಡೆಂಟ್ ಆದಾಗ ಭೂತಾರಾಧನೆ ದಿನ ಅವನ ತಾಯಿ ಬೇಗ ಗುಣವಾಗಲಿ ಎಂದು ಹರಕೆ ಹೇಳಿ ಹಣ ಹಾಕಿದಳು. ಆಮೇಲೆ ಮುಂದಿನ ವರುಷದ ಭೂತ ಕೋಲಗಳಲ್ಲಿ ಆ ತಾಯಿ ಮಗನಿಗೆ ಮೋಟಾರು ಬೈಕಿನಲ್ಲಿ ಏನೂ ಅಪಾಯ ಆಗದಿರಲಿ ಎಂದು ಹರಕೆ ಹೇಳುತ್ತಿದ್ದಳು.

ಇವನ್ನೆಲ್ಲಾ ಇಷ್ಟು ವಿವರವಾಗಿ ಯಾಕೆ ಹೇಳಿದೆ ಎಂದರೆ ನಮ್ಮ ಪಡ್ನೂರಿನ ಜನ ಯಾವ ಧರ್ಮದ ಹಂಗೂ ಇಲ್ಲದೆ ತಮ್ಮ ಮನೆ ಮಂದಿ, ಸುತ್ತಲಿನ ಜನ ನೆಮ್ಮದಿಯಾಗಿ ಜೀವನ ಮಾಡುವ ಹಾಗಾಗಲಿ ಎಂದು ಬಯಸುತ್ತಿದ್ದರು. ತಮ್ಮ ಸಣ್ಣಪುಟ್ಟ ಆಸೆಗಳನ್ನು ತೀರಿಸಿಕೊಂಡು ಅವರು ನೆಮ್ಮದಿಯಿಂದ ಬದುಕಲು ಪ್ರಯತ್ನಿಸುತ್ತಿದ್ದರು. ೧೯೬೦ರ ದಶಕದ ಕೊನೆಯಲ್ಲಿ ಹಾಲು ಮಾರಾಟ ನಮ್ಮ ಹಳ್ಳಿಯಲ್ಲಿ ಬೆಳೆದಿರಲಿಲ್ಲ. ಹಾಲಿನ ಸೊಸೈಟಿಯೂ ಪಡ್ನೂರಿನಲ್ಲಿ ಇರಲಿಲ್ಲ. ಯಾರಿಗೆ ಬೇಕಾದರೂ ಮಜ್ಜಿಗೆ ಉಚಿತ. ಮನೆಯಲ್ಲೆ ಮೊಸರು ಕಡೆದು ಮಾಡಿದ ಬೆಣ್ಣೆಯಿಂದ ತಯಾರಿಸಿದ ತುಪ್ಪ ಮಾರಿದ ದುಡ್ಡು ಹೆಂಗಸರಿಗೆ. ಆಗ ಇನ್ನೂ ದೇವರಿಗಾಗಿ ತುಪ್ಪ ಕೇಳುವ ಅಯ್ಯಪ್ಪ ಭಕ್ತರು ಇಷ್ಟು ತುಂಬಿರಲಿಲ್ಲ. ಮುಸ್ಲಿಂ ಮನೆಗಳಲ್ಲಿ ಮದುವೆಗೆ 'ನೈಚೋರ್' ಅಂದರೆ ತುಪ್ಪದ ಅನ್ನ ಬಹಳ ಅಗತ್ಯವಾದ ಖಾದ್ಯ. ಸುತ್ತಮುತ್ತಲಿನ ಮುಸ್ಲಿಂ ಮದುವೆಗಳಾಗುವಾಗ ಹಿಂದೂಗಳ ಮನೆಗಳಲ್ಲಿ ಸಂಗ್ರಹವಾದ ತುಪ್ಪ ಒಮ್ಮೆಗೆ ಖಾಲಿಯಾಗುತ್ತಿತ್ತು.

*(ಮುಂದುವರಿಯುತ್ತದೆ)*

**ಎಸ್. ಆರ್. ವಿಜಯಶಂಕರ**
ಸಿ-೨/೧೦೩, ಓಂಕಾರ್ ಅಪಾರ್ಟ್‌ಮೆಂಟ್ಸ್, ೮ನೇ ಮುಖ್ಯರಸ್ತೆ
ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩

# ನಾನು ಆ ಹೆಣ್ಣಿನಂತಲ್ಲ



ರೆಶ್ವರ್ ನಾಹೀದ್ ಹುಟ್ಟಿದ್ದು ಉತ್ತರ ಪ್ರದೇಶದ ಬುಲಂದ ಶಹರದಲ್ಲಿ, ೧೯೪೦ರಲ್ಲಿ. ಭಾರತ ತುಂಡಾದಾಗ ಈ ಏಳು ವರ್ಷದ ಬಾಲೆ ಪಾಕಿಸ್ತಾನಕ್ಕೆ ಓಡಿಹೋಗಬೇಕಾಯ್ತು. ಮಹಿಳೆಗೆ ಶಿಕ್ಷಣದ ಅವಕಾಶವೇ ಇಲ್ಲದ ಲಾಹೋರ್‌ನಲ್ಲಿ ಪ್ರತಿ ಹೆಜ್ಜೆಗೂ ಹೋರಾಡುತ್ತ ದೂರಶಿಕ್ಷಣದ ಮೂಲಕ ಡಿಪ್ಲೋಮ ಪಡೆದು, ಪಂಜಾಬ್ ವಿಶ್ವವಿದ್ಯಾಲಯದಿಂದ ಅರ್ಥಶಾಸ್ತ್ರದ ಸ್ನಾತಕೋತ್ತರ ಪದವಿ ಪಡೆಯುತ್ತಾರೆ. ೧೯೬೮ರಲ್ಲಿ ಲಬ್-ಎ-ಗೋಯಾ ಕವನ ಸಂಕಲನ, ೨೦೦೧ರಲ್ಲಿ ದಶ್ತ್ - ಎ - ಗೈಸ್ ಮೇಲೈಲಾ ಎಂಬ ಬೃಹತ್ ಸಂಕಲನ ತರುತ್ತಾರೆ. ಜಗತ್ತಿನ ಅನೇಕ ಭಾಷೆಗಳಲ್ಲಿ ಈ ಕವಿತೆಗಳು ಅನುವಾದವಾಗಿವೆ. ಜಿಯಾ ಉಲ್ ಹಕ್‌ನ ಆಡಳಿತದಲ್ಲಿ ಪಾಕಿಸ್ತಾನ ನರಳುತ್ತಿದ್ದಾಗ ಈಕೆಯೂ ಸೇರಿದಂತೆ ಅನೇಕ ಕಲಾವಿದರು ಮಾನವೀಯತೆಯ ಪರವಾಗಿ ದನಿ ಎತ್ತಿದ್ದರು.

ಪ್ರಸ್ತುತ ಕವನದ ಬಗ್ಗೆ ಸ್ವಲ್ಪ ಹೇಳಬೇಕು. ಪದವಿಪೂರ್ವ ಇಂಗ್ಲಿಷ್ ಪಠ್ಯದಲ್ಲಿ ಸ್ಥಾನಗಳಿಸಿರುವ ಈ ಕವನವನ್ನು ನಿರೀಕ್ಷಿಸಿದ್ದಂತೆ ಕೆಲವರು ವಿರೋಧಿಸಿದರು. ಬಹಳಷ್ಟು ಜನ ಬೆಂಬಲಿಸಿದರು. ಹೆಚ್ಚಾಗಿ ನಮ್ಮ ವಿದ್ಯಾರ್ಥಿಗಳು ಅತ್ಯಂತ ಆರೋಗ್ಯಕರವಾಗಿ ಪ್ರತಿಕ್ರಿಯಿಸಿದರು.

ಈ ಕವನವನ್ನು ವಿರೋಧಿಸುವವರನ್ನು ಕುರಿತೇ ಕವನ ದೃಢವಾದ ದನಿಯೆತ್ತುತ್ತಿದೆಯಾದ್ದರಿಂದ ಚರ್ಚೆ ಅನಗತ್ಯ. ಕಾಲಾಂತರದಿಂದ ಜಗತ್ತಿನೆಲ್ಲೆಡೆ ಹೆಣ್ಣಿನ ಮೇಲೆಯೇ ಯುದ್ಧ ಸಾರುತ್ತಿರುವ 'ಸೇನೆ'ಗಳು, 'ಲಷ್ಕರಿ'ಗಳು, ಮನುವಾಣಿಗಳು, ತಾಲಿಬಾನಿಗಳು ಯಾವ ದೇವರ ಬಗ್ಗೆ ಮಾತನಾಡುತ್ತಾರೋ, ಯಾವ ಧರ್ಮ ಪಾಲಿಸುತ್ತಾರೋ, ಯಾವ ಸಂಸ್ಕೃತಿಯನ್ನು ಉಳಿಸುತ್ತಾರೊ...

ಪರಲೋಕದಲ್ಲಿರುವ ಓ ಅವರ ತಂದೆಯೇ
ಅವರನ್ನು ಎಂದಿಗೂ ಕ್ಷಮಿಸದಿರು
ಅವರೇನು ಮಾಡುತ್ತಿದ್ದಾರೆಂದು ಅವರಿಗೆ ಚೆನ್ನಾಗಿ ತಿಳಿದಿದೆ !

*　　*　　*

ನಾನು ಆ ಹೆಣ್ಣಿನಂತಲ್ಲ
ನಿನಗಾಗಿ ಬೂಟು - ಸಾಕ್ಸುಗಳನ್ನು ಮಾರುವವಳಲ್ಲ ನಾನು.
ನೆನಪಿರಲಿ ನಿನಗೆ
ನಿನ್ನಿಂದ ಕಲ್ಲುಗೋಡೆಗಳಲ್ಲಿ ಮುಚ್ಚಲ್ಪಟ್ಟವಳು ನಾನು
ಸುಳಿಗಾಳಿಯಂತೆ ಮನಬಂದಂತೆ ಹಾಯುವ
ನಿನಗೆ ಗೊತ್ತಿರಲಿ
ಬಂಡೆಗಳಡಿ ಅಡಗಿಸಿಡಲಾರೆ ನನ್ನ ದನಿಯನ್ನು ನೀನು.
ನಿನ್ನ ಪರಂಪರೆ ಸಂಪ್ರದಾಯಗಳ ಸುತ್ತಿಗೆ -
ಯಡಿ ನುಚ್ಚುನೂರಾದವಳು ನಾನೇ !
ಗೊತ್ತಿರಲಿ ನಿನಗೆ
ಒಂದು ಕುಡಿಬೆಳಕನ್ನೂ ಅಮುಕಿಡಲಾರೆ
ಕತ್ತಲಲ್ಲಿ ನೀನು

ನೆನಪಿರಲಿ ನಿನಗೆ
ನನ್ನ ಮಡಿಲೊಳಗಿನ ಹೂವು ಕದ್ದವನು ನೀನೇ
ಮಡಿಲೊಳಗೆ ನಿಗಿನಿಗಿ ಮುಳ್ಳು ನೆಟ್ಟವನೂ ನೀನೇ

ಗೊತ್ತಿರಲಿ ನಿನಗೆ
ಸುಗಂಧವನ್ನು ಸಂಕೋಲೆಗಳಿಂದ ಬಂಧಿಸಲಾಗದು ಕಣೋ !

ನೀನು ಮಾರಿದ್ದು ; ನೀನು ಕೊಂಡಿದ್ದು ಕನ್ಯಾ
ಮಣಿಯ ಹೆಸರಿನಲ್ಲಿ ನನ್ನನ್ನೇ
ಗೊತ್ತಿರಲಿ ನಿನಗೆ
ಪಾತಾಳದಾಳಕ್ಕೆ ಅದುಮಿದರೂ
ನೆಟ್ಟಗೆ ನಡೆಯಬಲ್ಲೆ ನೀರಿನ ಮೇಲೆ !

ಸಪ್ತಪದಿ ತುಳಿಸಿ, ತುಳಿದು ನನ್ನ
ನಿನ್ನ ಭಾರವನ್ನು ನೀಗಿಸಿಕೊಂಡವನೇ
ಗೊತ್ತಿರಲಿ ನಿನಗೆ
ಗುಲಾಮಿ ಮನಸ್ಸುಗಳ ಈ ದೇಶ ಎಂದಿಗೂ ಸ್ವತಂತ್ರವಾಗದು ಕಣೋ !
ನಿನ್ನ ವಹಿವಾಟಿನಲ್ಲಿ ಸರಕಾದವಳು ನಾನು
ನನ್ನ ಶೀಲ; ನನ್ನ ನಿಷ್ಠೆ ; ನನ್ನ ತಾಯ್ತನ.
ಈಗ...
ಈಗ ಸ್ವಚ್ಛಂದ ಅರಳಬಯಸುವ ಹೂವು ನಾನು
ಬೂಟು - ಸಾಕ್ಸುಗಳ ಜಾಹೀರಾತಿನ ಪೋಸ್ಟರಿನಲ್ಲಿರುವ ಅರೆ !
- ಬೆತ್ತಲೆ ಹೆಣ್ಣಲ್ಲ ನಾನು
ಅಲ್ಲ, ಖಂಡಿತವಾಗಿ ಅಲ್ಲ
ನಾನು ಆ ಹೆಣ್ಣಿನಂತಲ್ಲ

ಮೂಲ : **ಕಿಶ್ವರ್ ನಾಹೀದ್**
ಕನ್ನಡಕ್ಕೆ : **ವಿಜಯವಾಮನ**
ಪ್ರಾಚಾರ್ಯರು, ಶ್ರೀ ಆದಿಚುಂಚನಗಿರಿ
ಪದವಿಪೂರ್ವ ಕಾಲೇಜು, ಶಿವಮೊಗ್ಗ



■ ಎಸ್. ಆರ್. ಗುರುನಾಥ್

# ವರ್ಣಾವಲಕ್ಷಣಂ

**ಹ**ಲವಾರು ತಿಂಗಳು ಖಾಲಿಬಿದ್ದಿದ್ದ ಆ ಮನೆಗೆ ಯಾರೋ ಬಂದು ಸೇರಿಕೊಂಡರು ! ಯಥಾರೀತಿ ಅವರ ಬಗ್ಗೆ ಈ ವಠಾರದ ಜನರಿಗೆ ಎಲ್ಲಿಲ್ಲದ ಕುತೂಹಲ. 'ಅವರು ಉತ್ತಮರಾದರೆ ಸಂತೋಷ; ನಮ್ಮವರೇ ಆಗಿಬಿಟ್ಟರೆ ಇನ್ನೂ ಸಂತೋಷ. ಹಾಗಾಗದೆ ಬೇರೆ ಯಾರೋ ಆಗಿಬಿಟ್ಟರೆ ?'

ಪೋತಪ್ಪನಿಗಂತೂ ಅವರ ಹೆಸರೇನು ? ಯಾವ ಊರು ? ಎಂಬುದಕ್ಕಿಂತ ಮುಖ್ಯವಾಗಿ ಯಾವ ಜಾತಿ ಎಂಬುದನ್ನು ತಿಳಿಯುವ ಕುತೂಹಲ; ಕಾತುರ ! ಇಂಥ ವಿಷಯ ತಿಳಿಯಲು ತರಾವರಿ ಕಷ್ಟಪಡುವುದಕ್ಕಿಂತ ನೇರವಾಗಿ 'ನಿಮ್ಮದು ಯಾವ ಜಾತಿ ?' ಎಂದು ಕೇಳಿಬಿಟ್ಟರೆ ಸಲೀಸು. ಆದರೆ ಅಂಥ ಧೈರ್ಯ ನಮಗ್ಯಾರಿಗೂ ಇಲ್ಲವಲ್ಲ ಎಂಬ ಅಸಮಾಧಾನದಲ್ಲಿ ಒಳ ಒಳಗೇ ಚಡಪಡಿಸಿದ.

ಆ ಮನೆಯಲ್ಲಿ ಬಾಡಿಗೆಗೆ ಇರುವವರೆಂದರೆ ಗಂಡ-ಹೆಂಡತಿ ಮಾತ್ರ. ಅವರಿಗೆ ಯಾವ ಸಂಕೋಚವೋ ಎಂತಹ ಮಡಿವಂತಿಕೆಯೋ ಅನಗತ್ಯವಾಗಿ ಹೊರಕ್ಕೆ ತಲೆಹಾಕುವುದಿಲ್ಲ; ಮುಚ್ಚಿದ ಬಾಗಿಲನ್ನು ತೆರೆಯುವುದಿಲ್ಲ! ಹೀಗಿರುವಾಗ ಅವರನ್ನು ಮಾತಿಗೆಳೆಯುವುದು ಹೇಗೆ ? ಮುಖ್ಯ ವಿಷಯ ತಿಳಿಯುವುದು ಯಾವಾಗ ? ಹೀಗಂದುಕೊಳ್ಳುತ್ತಿರುವ ಈ ವಠಾರದ ಜನರು ತೀರಾ ದಡ್ಡರೂ ಅಲ್ಲ; ಅಮಾಯಕರೂ ಅಲ್ಲ. ಶೇಕಡ ತೊಂಭತ್ತೈದರಷ್ಟು ಜನ ಸ್ವಂತ ಮನೆಯ ಸ್ಥಳೀಯರೇ. ಆದುದರಿಂದ ಯಾರು ಯಾರಿಗೂ ಕಡಿಮೆಯಲ್ಲ. ಒಂದೆರಡು ಬಾರಿ ಭೇಟಿಯಾಗಲು ಅಥವಾ ನಾಲ್ಕು ಮಾತಾಡಲು ಅವಕಾಶ ಸಿಕ್ಕರೆ ಎಂತಹವರ ಜನ್ಮವನ್ನಾದರೂ ಜಾಲಾಡಿಸಿಬಿಡಬಲ್ಲರು! ಅದರಲ್ಲೂ ಪೋತಪ್ಪ ಪೊಲೀಸ್ ನಾಯಿಯ ಹಾಗೆ! ವಾಸನೆ ಹಿಡಿಯುವುದರಲ್ಲಿ ನಿಸ್ಸೀಮ ! ಆದುದರಿಂದ ಕೆಲವರು ಇವನು 'ಬಲು ಬುದ್ವಂತ' ಅಂದು ಕೊಂಡಿರುವುದೂ ಉಂಟು ! ಆ ಮನೆಯವರ ವಿಷಯ ಪ್ರಸ್ತಾಪ ವಾದಾಗಲೆಲ್ಲ ಹಲವರು 'ಅವರ್‍ಯಾರೆಂಬುದು ನಿನಿಗಿನ್ನೂ ಗೊತ್ತಾಗಿಲ್ವಾ ? !' ಎಂಬಂತೆ ಇವನನ್ನು ನೋಡುತ್ತಾರೆ! ಇಂತಹ ಸಂದರ್ಭದಲ್ಲಿ ಆದಷ್ಟು ಬೇಗನೆ ಪತ್ತೆಹಚ್ಚಿ ವಠಾರಕ್ಕೆಲ್ಲಾ ಸಾರಿಬಿಡಬೇಕೆಂದುಕೊಳ್ಳುವ ಇವನಿಗೆ ಬದುಕಿನಲ್ಲಿ ಜಾತಿಯ ವಿಷಯವೇ ಮುಖ್ಯ. 'ನಮ್ಮದು ದೊಡ್ಡ ಧರ್ಮ; ಈಗ ಕಾಲ ಕೆಡುತ್ತಿರುವ ಹಾಗೆ ನಮ್ಮ ಸಂಪ್ರದಾಯ ಹಾಳಾಗಬಾರದು. ಆದ್ದರಿಂದ ನಮ್ಮಂಥವರ ಏರಿಯಾದಲ್ಲಿ ಯಾರು ಯಾರೋ ಬಂದು ಸೇರಿ ಕೊಂಡರೆ ಹೇಗೆ ? !' 'ಬಾಡಿಗೆಗೆ ಯಾರಿರಬೇಕು, ಯಾರಿರಬಾರದು ಎಂಬ ಪರಿಜ್ಞಾನವೇ ಆ ಮನೆಯ ಮಾಲೀಕರಿಗೆ ಇದ್ದಂತಿಲ್ಲ. ಅವರು ನೌಕರಿಯ ನಿಮಿತ್ತ ಉತ್ತರ ಭಾರತದಲ್ಲೆಲ್ಲೋ ನೆಲೆಸಿದ್ದು ಎರಡು-ಮೂರು ವರ್ಷಗಳಿಗೊಮ್ಮೆಯಾದರೂ ಇತ್ತ ಕಾಲು ಹಾಕುವುದಿಲ್ಲ. ಆ ಮನೆಯ ಉಸ್ತುವಾರಿಯನ್ನು ವಹಿಸಿಕೊಂಡಿರುವ ಅವರ ಗೆಳೆಯ ಬಾಡಿಗೆ ವಸೂಲು ಮಾಡಿ ಅವರಿಗೆ ರವಾನಿಸಿಬಿಟ್ಟರೆ ಮುಗಿಯಿತು. ಬಾಡಿಗೆದಾರರು ಯಾರು ? ಎಂಥವರು ? ಎಂಬುದರ ಬಗ್ಗೆ ಕಿಂಚಿತ್ತಾದರೂ ಯೋಚಿಸುವುದು ಬೇಡವೆ !' ಎಂಬುದು ಪೋತಪ್ಪನ ಅಸಮಾಧಾನ.

ಹಿಂದೆ ಆ ಮನೆಯಲ್ಲಿ ಆರೇಳು ವರ್ಷ ಜೋಸೆಫ್ ಎಂಬುವವರೂ, ನಂತರ ಏಳೆಂಟು ವರ್ಷ ಖಾದರ್ ಎಂಬುವವರೂ ಕುಟುಂಬದೊಂದಿಗೆ ವಾಸವಾಗಿದ್ದರು. ಅವರೊಂದಿಗೆ ಈ ವಠಾರದ ಜನ ತುಂಬಾ ತುಂಬಾ ಪ್ರೀತಿ ವಿಶ್ವಾಸದ ಒಡನಾಟ ಬೆಳೆಸಿಕೊಂಡಿದ್ದರು. ಇದೆಲ್ಲಾ ಸಾಮಾನ್ಯ ಎಂಬಂತೆ ಅವರ ಮನೆಗೆ ಇವರು ಹೋಗುತ್ತಿದ್ದರು; ಇವರ ಮನೆಗಳಿಗೆ ಅವರು ಬರುತ್ತಿದ್ದರು. ಕಾಫಿ ತಿಂಡಿ ಅಷ್ಟೇ ಅಲ್ಲ, ಊಟ ಔತಣಗಳ ವಿನಿಮಯವೂ ನಡೆಯುತ್ತಿದ್ದಿತು. ಇವರಲ್ಲಿ ಬಹಳಷ್ಟು ಜನರ ಹಾಗೆ ಪೋತಪ್ಪನೂ ಮಾಂಸಾಹಾರಿಯೇ ಆದುದರಿಂದ ಅವರ ಮನೆಯಿಂದ ಹೊಮ್ಮುತ್ತಿದ್ದ ಮಸಾಲೆಯ ವಾಸನೆಯಿಂದಲೇ ಮಾಂಸದ ಅಡುಗೆ ಕೋಳಿಯದೋ ಕುರಿಯದೋ ಅಥವಾ ಇನ್ನೂ ದೊಡ್ಡದರದೋ ಎಂಬುದನ್ನು ನಿಖರವಾಗಿ ಗ್ರಹಿಸಿಬಿಡುತ್ತಿದ್ದ! ದೊಡ್ಡ ಪ್ರಾಣಿಯ ಮಾಂಸದ ಅಡುಗೆಯ ಬಗ್ಗೆ 'ಅವರ ಊಟ ಅವರಿಗೆ ನಮ್ಮ ಊಟ ನಮಗೆ, ಇದರಾಗೆ ತಪ್ಪೇನೈತೆ !' ಎನ್ನುತ್ತಿದ್ದ. ಅಂದಹಾಗೆ ವಠಾರದ ಯಾವುದೇ ವಿಷಯದಲ್ಲೂ ಇವನ ಬಾಯಿ ಮೊದಲು; ಕಾಲು ಮುಂದು. ಚುನಾವಣೆ, ಗಣೇಶೋತ್ಸವ, ಹಬ್ಬ-ಜಾತ್ರೆ ಮುಂತಾದ ಸಂದರ್ಭಗಳಲ್ಲಿ ಇವನದೇ ಬಾಯಿ; ಇವನದೇ ಕಾಲುಗಳು, ಒಟ್ಟಾರೆ ವಠಾರದ ಮೆಜಾರಿಟಿ ಮನುಷ್ಯ ಎಂದರೆ ಈಯಪ್ಪನೇ.

ಖಾದರ್ ಕುಟುಂಬ ಆ ಮನೆಯನ್ನು ಖಾಲಿ ಮಾಡಿದ ನಂತರ ಬೇರೊಂದು ಕುಟುಂಬ ಬಂದು ಸೇರಿಕೊಂಡಿತು. ಯಥಾರೀತಿ ಆ ಕುಟುಂಬ ಯಾತರದು ಎಂಬುದರ ಬಗ್ಗೆ ವಠಾರ ತಲೆಕೆಡಿಸಿ ಕೊಂಡಾಗ ಒಂದು ದಿನ ಪೋತಪ್ಪ ಆ ಮನೆಯ ಸಣ್ಣ ಹುಡುಗನನ್ನು ಪ್ರೀತಿಯಿಂದ ಮಾತಾಡಿಸಿ, ಅನುನಯದಿಂದ 'ನಿನ್ನ ಹೆಸರೇನು ?' ಎಂದು ಕೇಳಿದ. ಆ ಹುಡುಗ 'ಜಗಜೀವನ್‌ರಾಮ್' ಎಂದ. ನಂತರದ 'ಯಾವ ಜಾತಿ ?' ಎಂಬ ಪ್ರಶ್ನೆಗೆ 'ಏಕೆ' ಎಂಬ ಉತ್ತರ. ತಕ್ಷಣ ಪೋತಪ್ಪ ಏಡ್ಸ್ ರೋಗಕ್ಕೆ ಔಷಧಿ ಕಂಡುಹಿಡಿದವನ ಹಾಗೆ ದೊಡ್ಡ ದನಿಯಲ್ಲಿ 'ಯುರೇಕಾ ! ಯುರೇಕಾ... !' ಎಂದು ಕೂಗಿಕೊಂಡ ! ಕೇಳಿಸಿಕೊಂಡವರು 'ಏನು ? ! ಹಾಗಂದ್ರೇನು ? !...' ಎಂದೆಲ್ಲಾ ಪ್ರಶ್ನಿಸಿದರು. ಪೋತಪ್ಪ ಯಾವಾಗಲೋ ಯಾರಿಂದಲೋ ಕೇಳಿಸಿಕೊಂಡಿದ್ದ ಕಥೆ ಹೇಳಿದ. 'ಹಿಂದೆ ಯಾವ್ದೋ ಒಂದೇಶ್ದಲ್ಲಿ ಒಬ್ಬ

ರಾಜನಿದ್ದ. ಅವನು ಒಂದಿನ ಒಬ್ಬ ಬುದ್ಧಂತನನ್ನು ಕರೆದು – ನನ್ನ ಕಿರೀಟನ ಕರಗಿಸ್ದೇ ಮುರೀದೇ ಗಾತ್ರ ಕಂಡಿಡೀಬೇಕು. ಇಲ್ಲಾದ್ರೆ ನಿನ್ನ ಸಾಯಿಸ್ಬಿಡ್ತೀನಿ - ಅಂತ ಹೆದರಿಸ್ದ. ಆ ಬುದ್ಧಂತಗೆ ಚಿಂತೆ ಶುರುವಾಯ್ತು. ಆದೇ ಚಿಂತೀಲಿ ಒಂದಿನ ಫುಲ್ ತುಂಬಿದ್ದ ಸ್ನಾನದ ತೊಟ್ಟಿಗಿಳಿದು ಮುಣುಗಿದ. ಆವಾಗ ಒಂದಿಷ್ಟು ನೀರು ಹೊರಕ್ಕೆ ಚೆಲ್ಲಿತು. ನೀರು ಚೆಲ್ಲಿದ್ದು ನನ್ನ ಗಾತ್ರದಷ್ಟೇ ಅಲ್ಲವೆ! ಈ ಥರಾ ಕಿರೀಟದ ಗಾತ್ರನ ಕಂಡು ಹಿಡೀಬೌದು ಅನ್ನೋ ಖುಷೀಲಿ ಯಂಗಿದ್ದನೋ ಅಂಗೇ ಯುರೇಕಾ! ಯುರೇಕಾ! ಅಂತ ಕೂಗ್ತಾ ಅರಮನೆಯತ್ತ ಓಡಿದ! ಅಂದ್ರೇ, ಗೊತ್ತಾಯ್ತು! ಗೊತ್ತಾಯ್ತು! ಅಂತ ಅರ್ಥ. ಅಂಗೇ ಈಗ ನನಗೂ ಗೊತ್ತಾಯ್ತು ಅವುರು ಕೆಳಜನ...!'

'ಎಲಾ! ಅವುರಿಗೆಷ್ಟು ಧೈರ್ಯ! ನಮ್ಮ ವಠಾರಕ್ಕೆ ಬಂದೀದಾರಲ್ಲ!' ಅಂದುಕೊಂಡು ಕೆಲವರು ಅವರನ್ನು ಹೆದರಿಸಿ ಬೆದರಿಸಿ, ರಾತ್ರಿ ಹೊತ್ತಿನಲ್ಲಿ ಮನೆಯ ಮೇಲೆ ಕಲ್ಲು ಎಸೆದು, ಇಲ್ಲಿಂದ ಓಡಿಸಬೇಕೆಂದು ಹುರುಕಾಯಿಸಿದರು! ಮತ್ತೆ ಕೆಲವರು ಕಾನೂನು ಹಾಗೂ ದಲಿತ ಸಂಘಗಳಿಗೆ ಅಂಜಿಕೊಂಡರು! ಒಟ್ಟಾರೆ ಬಹಳಷ್ಟು ಜನ ಅವರ ವಿರುದ್ಧ ಕೆಂಡಕಾರುತ್ತಾ, ಸಾಧ್ಯವಾದಷ್ಟೂ ಅವರಲ್ಲಿ ಭಯ ಹುಟ್ಟಿಸಲೆತ್ನಿಸಿದರು. ಸರಿ, ನಾಲ್ಕೇ ದಿನಗಳಲ್ಲಿ ಅವರು ಯಾವುದೇ ಪ್ರತಿರೋಧ ವ್ಯಕ್ತಪಡಿಸದೆ ಮನೆಯನ್ನು ಖಾಲಿ ಮಾಡಿ ಹೊರಟುಹೋದರು. 'ಅವುರೇನಾದ್ರೂ ತಿರುಗಿಬಿದ್ದು, ಪೊಲೀಸು ಕೇಸು, ದಲಿತ ಸಂಘ ಅಂದಿದ್ದರೆ ಏನೇನು ರಾದ್ಧಾಂತ ಆಗ್ತಿತ್ತೋ! ಭಗುವಂತನ ದಯದಿಂದ ಏನೂ ಆಗ್ಲಿಲ್ಲ. ಒಟ್ನಲ್ಲಿ ನಮಗೇ ಜಯ!' ಅಂದುಕೊಂಡ ಪೋತಪ್ಪ ಮತ್ತಿತರರು ಆನಂದತುಂದಿಲರಾದರು. ನಂತರ ಹಲವಾರು ತಿಂಗಳುಗಳಾದರೂ ಆ ಮನೆಗೆ ಯಾರೂ ಬಾಡಿಗೆಗೆ ಬರಲಿಲ್ಲ! ಅದರಲ್ಲಿ ಕೆಳಜಾತಿಯವರಿದ್ದರು ಎಂಬುದೇ ಅದಕ್ಕೆ ಕಾರಣ!

ಈಗ ಆ ಮನೆಯಲ್ಲಿರುವವರು ನುಣ್ಣಗೆ ಬಣ್ಣವಾಗಿದ್ದರೆ. ಹರಿಶಿಣ, ಕುಂಕುಮ ಶೋಭಿತೆಯಾದ ಆ ಹೆಂಗಸು ಪ್ರತಿ ಮುಂಜಾನೆ ಮನೆಯ ಅಂಗಳವನ್ನು ಗುಡಿಸಿ, ನೀರು ಹಾಕಿ, ಸುಂದರವಾದ ರಂಗೋಲಿ ಬಿಡಿಸಿ, ಹೊಸ್ತಿಲ ಪೂಜೆ ಮಾಡುತ್ತಾಳೆ. ಆದ್ದರಿಂದ 'ಅವರು ನಮ್ಮ ಗುಂಪಿನವರೆಂಬುದೇನೋ ಖಾತರಿಯಾಯ್ತು. ಆದ್ರೆ ಕ್ಲಾಸ್ಸು?! ಅದೇ ಮುಖ್ಯವಲ್ಲವಾ!' ಅಂದುಕೊಂಡ ಪೋತಪ್ಪನಿಗೆ ವಿಲವಿಲನೆ ಒದ್ದಾಡುವಂತಾಯಿತು. ವಠಾರದ ಮುಂದಾಳತ್ವವನ್ನೂ ಸ್ವಪ್ರತಿಷ್ಠೆಯನ್ನೂ ಉಳಿಸಿಕೊಳ್ಳಬೇಕಲ್ಲ. ಆದ್ದರಿಂದ ಸೋಲದ ಸರದಾರನಂತೆ ಸೂಕ್ಷ್ಮವಾಗಿ ಅವರ ನಡೆ - ನುಡಿಯನ್ನೂ ಹಾಲು, ಮೊಸರು, ಪೇಪರು, ಹೂವು, ತರಕಾರಿ ಮುಂತಾದವರೊಂದಿಗೆ ವ್ಯವಹರಿಸುವ ರೀತಿಯನ್ನೂ ಗಮನಿಸಲಾರಂಭಿಸಿದ! ಒಮ್ಮೆ ಆಕೆ ಹೊರಬಂದು ಗಾಡಿಯಿಂದ ತರಕಾರಿ ಕೊಳ್ಳುತ್ತಿರುವಾಗ ಪೋತಪ್ಪನ ಹೆಂಡತಿ ಹಲ್ಲುಬೀರವ್ವ ಮಾತನಾಡಿಸಿ, ಮೇಲುಮೇಲಿನ ವಿಷಯ ತಿಳಿದುಕೊಂಡುಬಿಟ್ಟಳು. ಅವರದು ದೂರದ ಯಾವುದೋ ಒಂದು ಹಳ್ಳಿಯಂತೆ. ಆತ ಕಚೇರಿಯೊಂದರ ನೌಕರನಂತೆ. ಅವರಿಬ್ಬರ ಹೆಸರು ಮಂಜುನಾಥ - ಮಾದೇವಿ. ಇಷ್ಟಕ್ಕಿನ್ನ ಹೆಚ್ಚಿಗೆ ತಿಳಿದುಕೊಳ್ಳಲಾಗಲಿಲ್ವಲ್ಲ ಎಂಬ ಚಡಪಡಿಕೆಯಲ್ಲಿ ಕೆಲವು ಅಂಗಾಂಗಗಳನ್ನು ತುರಿಸಿಕೊಂಡಳು.

ಇನ್ನೊಂದು ದಿನ ಅದೇ ತರಕಾರಿ ಗಾಡಿಯ ಬಳಿ ಮಹಾದೇವಿಯನ್ನು ಸಮೀಪಿಸಿದ ಇನ್ನೊಬ್ಬಾಕೆ ''ನಿಮ್ಮ ಲಗ್ನ ಆಗಿ ಏಸು ವರ್ಸ ಆದ್ವು? ಮಕ್ಳು ಯಾಕಾಗಿಲ್ಲ? ನಿಮ್ಮನಿಯೋರಿಗೆ ಸಂಬ್ಳ ಎಷ್ಟು?'' ಎಂಬಂಥ ಪ್ರಶ್ನೆಗಳನ್ನು ಕೇಳಿದ ನಂತರ ನೀವು ಮಾಂಸ ತಿಂತೀರಾ ಎಂದು ಕೇಳಲು ಯಾಕೋ ಸಾಧ್ಯವಾಗಲಿಲ್ಲವಂತೆ! ಸಾಧ್ಯವಾಗಿದ್ದಿದ್ದರೆ ಅರ್ಧದಷ್ಟು ವಿಷಯವೇ ಗೊತ್ತಾಗಿಬಿಡುತ್ತಿತ್ತು! ಎಂದೆಲ್ಲಾ ಪೇಚಾಡಿಕೊಳ್ಳುತ್ತಾ ಸರೀಕರ ಎದುರು ತಲೆ ತಗ್ಗಿಸಿದಳು!

ಪೋತಪ್ಪನಂತೂ ಬೆಳಿಗ್ಗೆ ಹಾಗೂ ಸಂಜೆ ಅಡುಗೆಯ ಸಮಯದಲ್ಲಿ ಮೂಗಿನ ಹೊಳ್ಳೆಗಳನ್ನು ಅರಳಿಸಿಕೊಂಡು ಆ ಮನೆಯ ಬಳಿ ಸುಳಿದಾಡಲಾರಂಭಿಸಿದ. ವಾಸನೆಯಿಂದ ಅವರು ಯಾವ ಗುಂಪಿನ ಜನ ಎಂಬುದಾದರೂ ತಿಳಿಯುತ್ತದಲ್ಲಾ ಎಂಬ ನಿರೀಕ್ಷೆ

## ಸಾದರ ಸ್ವೀಕಾರ

**ಅರುಹು ಕುರುಹು** (ತ್ರೈಮಾಸಿಕ)
*ಸಂ. ಲಿಂಗದೇವರು ಹಳೆಮನೆ*
**ಪುಟ : ೧೨೦** *(ಬಿಡಿ ಪ್ರತಿ)* **ಬೆಲೆ : ರೂ. ೧೦೦**
'ಮೌನ', ಎಲ್-೭, ೧ನೇ ತಿರುವು, ೧ನೇ ಹಂತ, ಕುವೆಂಪುನಗರ, ಮೈಸೂರು.

**ತಳಮಳದ ಹಾದಿ** (ವಿಮರ್ಶಾತ್ಮಕ ಟಿಪ್ಪಣಿಗಳು)
*ಡಾ|| ಆನಂದ್ ಋಗ್ವೇದಿ*
**ಪುಟ : ೧೨೦** **ಬೆಲೆ : ರೂ. ೮೦**
**ಪಲ್ಲವ ಪ್ರಕಾಶನ**, ಚನ್ನಪಟ್ಟಣ ಅಂಚೆ, ಎಮ್ಮಿಗನೂರು ಮಾರ್ಗ, ಬಳ್ಳಾರಿ - ೫೮೩೧೧೩

**ಚಮಕ್ ಚಮಕ್ ಚಿನ್ನಾರಿ** (ಮಕ್ಕಳ ಪದ್ಯಗಳು)
*ವೈ. ಗಿರಿಜಾ ದಿನಕರ*
**ಪುಟ : ೧೦೦** **ಬೆಲೆ : ರೂ. ೬೦**

**ಆಗು - ಹೋಗು** (ಲೇಖನ ಸಂಗ್ರಹ) *ಶಿವಾನಂದ ತಗಡೂರು*
**ಪುಟ : ೧೫೪** **ಬೆಲೆ : ರೂ. ೯೦**

**ಸಂಪ್ರೀತಿ** (ಲೇಖನ ಸಂಗ್ರಹ) *ಡಾ|| ಶಿವಕುಮಾರ ಕಣಸೋಗಿ*
**ಪುಟ : ೧೩೦** **ಬೆಲೆ : ರೂ. ೭೫**
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ರಚನಾ ಪ್ರಕಾಶನ**, ನಂ. ಇ-೯೯, ೨ನೇ ಹಂತ, ಕೆ.ಹೆಚ್.ಬಿ. ಕಾಲೋನಿ, ಕುವೆಂಪುನಗರ, ಮೈಸೂರು-೨೩.

**ಭಾರತೀಯ ಸಂಸ್ಕೃತಿ ಅಂದು - ಇಂದು** *ಎಂ. ವಿ. ಭಟ್*
**ಪುಟ : ೧೮೨** **ಬೆಲೆ : ರೂ. ೧೦೦**
**ಯುಗ ಪುರುಷ ಪ್ರಕಟಣಾಲಯ**, ಕಿನ್ನಿಗೋಳಿ - ೫೭೪೧೫೦ (ದ.ಕ.)

**ಸ್ನೇಹಗೂಡು** (ಕವನ ಸಂಕಲನ)
*ಸಂ. ನಾಗಶೆಟ್ಟಿ ಪಾಟೀಲ್ ಗಾದಗಿ*
**ಪುಟ : ೧೮೪** **ಬೆಲೆ : ರೂ. ೧೨೦**
**ಜನಪ್ರಿಯ ಪ್ರಕಾಶನ**, ಅಂ. ಪೆ. ೬೪, ಗವಾನ ಚೌಕ್, ಬೀದರ - ೦೧

**ಈದ್ಗಾ ಮತ್ತು ಬೆಳಕಿನ ಕಡೆಗೆ** (ನಾಟಕ) *ಆರ್. ವಿ. ಭಂಡಾರಿ*
**ಪುಟ : ೪೪** **ಬೆಲೆ : ರೂ. ೨೫**
**ರಂಗಾಯಣ**, ಕಲಾಮಂದಿರ ಕಾಂಪ್ಲೆಕ್ಸ್, ವಿನೋಬಾ ರಸ್ತೆ, ಮೈಸೂರು.

**ಪಡುವಣದ ಕಡಲು** (ಅಂಕಣ ಬರಹಗಳು)
*ಸುನಂದಾ ಪ್ರಕಾಶ ಕಡಮೆ*
**ಪುಟ : ೧೦೪** **ಬೆಲೆ : ರೂ. ೪೫**
**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩೧೦೩

**ಹೇಮೆಯೊಡಲಲ್ಲಿ...** (ಅಂಕಣ ಬರಹ) *ರೂಪ ಹಾಸನ*
**ಪುಟ : ೧೧೪** **ಬೆಲೆ : ರೂ. ೬೫**
**ವೈದ್ಯನಾಥೇಶ್ವರ ಪ್ರಕಾಶನ**, ನಂ ೧೦೬೩/೪೪, ೧ನೇ ಮೇನ್, ೫ನೇ ಕ್ರಾಸ್, ವಿದ್ಯಾರಣ್ಯಪುರಂ, ಮೈಸೂರು-೮

**ಹೆಬ್ಬೆಟ್ಟಿನ ಗುರುತು** (ಕವನ ಸಂಕಲನ)
*ಮಾಯಣ್ಣ ಸ್ವಾಮಿ ಕಿರಂಗೂರು*
**ಪುಟ : ೬೦** **ಬೆಲೆ : ರೂ. ೪೦**
**ಮಾಯಣ್ಣ ಸ್ವಾಮಿ ಕಿರಂಗೂರು**, ನಂ. ಎನ್. ಎ. ೫೦, ಬಿಇಎಲ್ ಕಾಲೋನಿ, ಜಾಲಹಳ್ಳಿ ಅಂಚೆ ಬೆಂಗಳೂರು - ೫೬೦೦೧೩

**ಕೊನೆಯ ಜಿಗಿತ** (ಕಾದಂಬರಿ)
*ಶಿವಮೂರ್ತಿ, ಅನು: ಆರ್.ಪಿ. ಹೆಗಡೆ*
**ಪುಟ : ೧೨೦** **ಬೆಲೆ : ರೂ. ೬೦**

**ಸುಗಂಧ ಸಸ್ಯಗಳು** *ಡಾ|| ಎಂ.ಎ. ನಾರಾಯಣ ರೆಡ್ಡಿ*
**ಪುಟ : ೧೭೬** **ಬೆಲೆ : ರೂ. ೯೫**

**ಹುತಾತ್ಮ ಭಗತ್ ಸಿಂಗ್** ಬದುಕು - ಚಿಂತನೆ
*ಎ. ಬಿ. ಬರ್ಧನ್, ಅನು : ಹಲೀಮತ್ ಸ-ಅ-ದಿಯ*
**ಪುಟ : ೩೨** **ಬೆಲೆ : ರೂ. ೧೨**

**ಬ್ಯಾಂಕ್ ವಂಚನೆಗಳು** - ಶೋಧನೆ ಮತ್ತು ನಿಯಂತ್ರಣ
*ಎಸ್. ಸೀತಾರಾಮು*
**ಪುಟ : ೧೦೪** **ಬೆಲೆ : ರೂ. ೬೦**
ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦೦೦೧

**ನಾಗಭೂಷಣ ಶಾಸ್ತ್ರಿಗಳು** *ಎಚ್. ಎಸ್. ಪಾಟೀಲ*
**ಪುಟ : ೧೦೮** **ಬೆಲೆ : ರೂ. ೫**

**ಚೆನ್ನಬಸವಪ್ಪ ಬೆಟ್ಟದೂರು** *ಗುರು ಬಸವಯ್ಯ ಅಮ್ಮಾಪುರ*
**ಪುಟ : ೬೯** **ಬೆಲೆ : ರೂ. ೧೦**

**ವಚನ ಸಂಕಲನ** (ಸಂಪುಟ-೭)
*ಸಂ. ಡಾ|| ವೀರಣ್ಣ ರಾಜೂರ*
**ಪುಟ : ೧೧೩** **ಬೆಲೆ : ರೂ. ೭೫**

**ಕರಸ್ಥಲ ಬಸವಲಿಂಗದ ಮಹತ್ವ ಹಾಗೂ ಅದರ ರಚನಾ ವಿಧಾನ** *ಗುರುಸಿದ್ದಪ್ಪ ಮೆಣಸಿನಕಾಯಿ*
**ಪುಟ : ೮೯** **ಬೆಲೆ : ರೂ. ೧೦೦**

**ಮೋಕ್ಷದರ್ಶನ ಸಂಗ್ರಹ** *ಸಂ. ಪ್ರೊ|| ಜಿ. ಎ. ಶಿವಲಿಂಗಯ್ಯ*
**ಪುಟ : ೧೨೬** **ಬೆಲೆ : ರೂ. ೭೫**
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಲಿಂಗಾಯುತ ಅಧ್ಯಯನ ಸಂಸ್ಥೆ**, ಎಡೆಯೂರು ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ, ಗದಗ.

ಅವನದು. ಆದರೆ ಕೇವಲ ಕರಿಯುವ - ಹುರಿಯುವ ಒಗ್ಗರಣೆಯ ವಿನಾ ಅನುಮಾನಾಸ್ಪದವಾದ ಮಸಾಲೆ-ಮಾಂಸದ ವಾಸನೆಯೇ ಹೊಡೆಯಲಿಲ್ಲ! ಆದ್ದರಿಂದಲೇ ಅವರನ್ನು ಉತ್ತಮರು ಅನ್ನಲಾದೀತಾ! ಈ ಕಲಿಯುಗದಲ್ಲಿ ಎಷ್ಟೋ ಮಂದಿ ಕೆಳಜಾತಿಯವರೇ ಮಾಂಸಾಹಾರವನ್ನು ತ್ಯಜಿಸಿದ್ದಾರೆ! ಹೆಂಡ ಸಾರಾಯಿಯನ್ನು ದೂರೀಕರಿಸಿದ್ದಾರೆ! ದಿನವೂ ಸ್ನಾನ ಮಾಡಿ, ಇಸ್ತ್ರಿ ಬಟ್ಟೆಗಳಲ್ಲಿ ಮಿಂಚುತ್ತಾರೆ! ಬೆಳ್ಳಗಿರೋದೆಲ್ಲಾ ಹಾಲಲ್ಲ. ಅಂದಹಾಗೆ ಮೇಲು ನೋಟದಿಂದಲೇ ಜಾತಿಯನ್ನು ತಿಳಿಯುವುದು ಸಾಧ್ಯವಿಲ್ಲ ಎಂಬಂಥ ವೇದಾಂತ ಊದುವ ಪೋತಪ್ಪ ಜವಾನನಾಗಿರುವ ಆಫೀಸಿಗೆ ವರ್ಗವಾಗಿ ಬಂದ ಇಬ್ಬರು ನೌಕರರು ಕೆಲಸ ಕಾರ್ಯಗಳಲ್ಲಿ ಪ್ರಬುದ್ಧರಾಗಿ, ನಡೆ - ನುಡಿಯಲ್ಲಿ ನಾಜೂಕಿಗಳಾಗಿ, ವಾರ ತುಂಬುವುದರೊಳಗೆ ಎಲ್ಲರ ಗೌರವಾದರಗಳನ್ನು ಗಳಿಸಿಬಿಟ್ಟರು. ಹೀಗಾಗಿ ಶುಕ್ರವಾರದ ಪೂಜೆಯ ಪ್ರಸಾದ ಹಂಚುವ ಪವಿತ್ರ ಕಾರ್ಯವೂ ಅವರಿಗೇ ವಹಿಸಲಾಯಿತು. ಪೋತಪ್ಪನಿಗೆ ಒಂದು ಬಗೆಯ ಸಂಕೋಚ! ಉತ್ತಮರೊಂದಿಗೆ ಯಂಗಿರಬೇಕೋ ಅಂಗಿರಬೇಕಲ್ಲ! ಎಲ್ಲರಂತೆ ಅವರಿಬ್ಬರೂ ಬಳಸುವ ನೀರಿನ ಫಿಲ್ಟರನ್ನು ಮುಟ್ಟಲೂ ಅಳುಕು ಉಂಟಾಯಿತು! ಮಾಂಸಾಹಾರಿಯಾದ ನಾನು ಮುಟ್ಟಿದರೆ ಹೇಗೆ ಎಂಬ ಸಂಕೋಚ! ಹೀಗೇ ಇರುವಾಗ, ಅವರು ಸೇವೆ ಸಲ್ಲಿಸಿದ್ದ ಹಿಂದಿನ ಆಫೀಸಿನಿಂದ ಬಂದ 'ಸೇವಾ ದಾಖಲಾತಿ ಪುಸ್ತಕ'ದಿಂದ ಅವರಿಬ್ಬರೂ 'ಪರಿಶಿಷ್ಟ ಜಾತಿ'ಯವರೆಂಬುದು ತಿಳಿದುಬಿಟ್ಟಿತು! ಆದರೂ ಏನೂ ಮಾಡುವಂತಿಲ್ಲವಲ್ಲ! ಸರ್ಕಾರಿ ಕಚೇರಿ! ಎಸ್ಸೆಸ್ಸೆಲ್ಸಿಯವರೆಗೆ ಓದಿರುವ ಶ್ರೀಮಾನ್ ಪೋತಪ್ಪನಾಯಕರು ತಮ್ಮದೇ ಆದ ರೀತಿಯಲ್ಲಿ ಒಳಒಳಗೇ ಹಪಹಪಿಸಲಾರಂಭಿಸಿದರು. ಭಗವಂತ ಎಂಬುವವನು ಎಲ್ಲರನ್ನೂ ಒಂದೇ ತರಹ ಹುಟ್ಟಿಸಿಬಿಟ್ಟಿದ್ದಾನೆ! ನಡೆ - ನುಡಿ ನೋಡಿ ಮರುಳಾಗಬಾರದು; ಗುರು-ಹಿರಿಯರ ದಾರೀಲೇ ನಡೆಯಬೇಕು; ನಮ್ಮ ನಮ್ಮ ಸಂಪ್ರದಾಯಗಳನ್ನು ಬಿಡಬಾರದು; ಹೊಸಗಾಳಿಯಲ್ಲಿ ಕೊಚ್ಚಿಹೋಗಬಾರದು. ಅಂಥ ಗಂಡಾಂತರ ವಕ್ಕರಿಸಿದರೆ ಧರ್ಮವೆಂಬ ಕಂಭವನ್ನು ಬಿಗಿಯಾಗಿ ತಬ್ಬಿಕೊಳ್ಳಬೇಕು... ಎಂಬಂಥ ವಿಚಾರ ಲಹರಿಯಲ್ಲೂ ಒಮ್ಮೊಮ್ಮೆ 'ಮಂಜುನಾಥ್ ಮಹಾದೇವಿ ಅವರು ಉತ್ತಮರೇ ಯಾಕಾಗಿರಬಾರದು!' ಎಂದೂ ಯೋಚಿಸುವನು!



...ಸೋತೆ ಅಂತ ಚಿಂತೆ ಮಾಡ್ಬೇಡಿ... ನಂ ಪಕ್ಷಕ್ಕೆ ಬಂದು ಆಪರೇಶನ್ ಮಾಡ್ಕೊಳ್ಳಿ... ಗೆದ್ದಷ್ಟೆ ಸಂತೋಷ ವಾಗುತ್ತೆ ಸಾರ್...!!

ಬರಬರುತ್ತಾ ವಠಾರದ ಕೆಲವು ಹೆಂಗಸರು ಸಹಜವಾಗಿಯೇ ಮಹಾದೇವಿಯೊಂದಿಗೆ ಮಾತುಕತೆಗೆ ಮುಂದಾದರು. ಮೆಲ್ಲಮೆಲ್ಲನೆ ಹಾಲು, ಸಕ್ಕರೆ, ಉಪ್ಪಿನಕಾಯಿ ಮುಂತಾದವುಗಳ ವಿನಿಮಯ ಶುರುಮಾಡಿದರು. ಅವರಲ್ಲಿ ಕೆಲವು ಮಾಂಸಾಹಾರಿಗಳು ''ನಾವು ಮಾಂಸ ಮಡ್ಡೀನ ಎಡಗೈಲೂ ಮುಟ್ಟೋದಿಲ್ಲ. ಯಂಡ ಸಾರಾಯಿನಂತೂ ಮೂಗಿಗೂ ಸೋಕ್ಸೋದಿಲ್ಲ'' ಎಂದರೆ ಮತ್ತೆ ಕೆಲವರು ''ನಾವು ಅಂತಿಂಥವ್ರಲ್ಲ, ತುಂಬಾ ಸಂಪ್ರದಾಯಸ್ಥರು. ಬೇರೆಯೋರ್ನ ಮುಟ್ಟಿದಾಗ ಮೂರು ಸಾರಿ ಸೋಪು ಹಚ್ಚಿ ಕೈತೊಳ್ಕೋತೀವಿ...'' ಎನ್ನುವರು. ಹೀಗೆ ಆಕೆಯ ಸ್ನೇಹ ವಿಶ್ವಾಸ ಗಳಿಸಲೆತ್ನಿಸುತ್ತಾ, ನಾಮಕರಣ, ಸೀಮಂತ, ಸೋಬನ ಮೊದಲಾದಂಥ ಕಾರ್ಯಗಳಿಗೆ ಆಹ್ವಾನಿಸುವುದೇ ಒಂದು ದೊಡ್ಡಸ್ತಿಕೆ ಎನ್ನುವಂತಾಯಿತು! ಮಂಜುನಾಥ್ ಎಂದರೆ ತುಂಬಾ ಘನ ಗಾಂಭೀರ್ಯದ ವ್ಯಕ್ತಿ, ನಡೆ ನುಡಿಯಲ್ಲಿ ನಯ ನಾಜೂಕು. ಕೆಲವರು ಆತನನ್ನು ಕಂಡೊಡನೆ ತಮಗರಿವಿಲ್ಲದೆಯೇ ಕೈ ಜೋಡಿಸಿ ''ನಮಸ್ಕಾರ ಸಾ'' ಎಂದುಬಿಡುತ್ತಿದ್ದರು! ಮತ್ತೆ ಕೆಲವರು ''ನಿಮ್ಮಂಥವರು ಈ ವಠಾರದಲ್ಲಿರೋದೇ ನಮ್ಮ ಪುಣ್ಯ ಸಾರ್'' ಎನ್ನುತ್ತಿದ್ದುದೂ ಉಂಟು! ಮಹಾದೇವಿಯೂ ಕೂಡ ಹೆಸರಿಗೆ ತಕ್ಕಂಥ ಮಹಿಳೆ; ಸದ್ಗೃಹಿಣಿ. ಹಲವು ಹೆಂಗಸರು ಆಕೆಯಿಂದ ಕಸೂತಿ ಹಾಕುವುದನ್ನು, ಹೊಸ ಹೊಸ ರಂಗೋಲಿ ಬಿಡಿಸುವುದನ್ನು, ವಿಶೇಷ ತಿಂಡಿ ತಿನಿಸುಗಳ ತಯಾರಿಸುವುದನ್ನು ಕಲಿಯಲೆತ್ನಿಸಿದರು.

ಒಡನಾಟದ ಸಲುಗೆಯಿಂದ ಒಮ್ಮೆ ಹಲ್ಲುಬೀರವ್ವ ಕೇಳಿಬಿಟ್ಟಳು ; ''ಮಾದೇವಮ್ಮ, ಇಂಗೆಲ್ಲಾ ಕೇಳ್ತೀನಂತ ಬ್ಯಾಜಾರು ಮಾಡ್ಕಂಬೇಡಿ, ನೀವು ಯಾ... ಮತಸ್ಥರು?'' ಮಹಾದೇವಿ ಮುಗುಳ್ನಗುತ್ತಾ ''ನಮ್ಮ ಬಗ್ಗೆ ನಿಮಗೇನನ್ಸುತ್ತೋ ಅದೇ ಅಂದ್ಕೊಳ್ಳಿ'' ಎನ್ನುವುದೆ! ಹಲ್ಲುಬೀರವ್ವ ಪೆಚ್ಚಾಗಿ, ಮತ್ತೆ ಉಸಿರೆತ್ತುವ ಧೈರ್ಯ ತೋರಲಿಲ್ಲ; ಒಳಗಿನ ಅನುಮಾನವನ್ನು ಹತ್ತಿಕ್ಕಲಿಲ್ಲ.

ಕೆಲವರಿಗಂತೂ ಅನುಮಾನವೋ ಅನುಮಾನ! 'ಈ ಕಾಲ್ದಾಗೆ ಯಾರ್ನೂ ನೆಂಬಬಾರ್ದು, ಒಂದೊಂದ್ಸಲ ಹಿತ್ತಾಳೆ ಬಂಗಾರ್ದಂಗೆ, ಕಾಗೆ ಕೋಗುಲೆಯಂಗೆ, ಸುಣ್ಣದ ನೀರು ಹಾಲಿನಂಗೆ ಕಾಣಲ್ವಾ?! ಒಂದೇ ಒಂದ್ಸಲ ಮುಟ್ಟುಬಾರುದ್ನ ಮುಟ್ಟಬಿಟ್ರೆ ಯಂಥಾ ಸೋಪಾಕಿ ತೊಳಕಂಡ್ರೂ ಮೈಲಿಗೆ ಒಗಲ್ಲ. ಮ್ಯಾಗಳ ಬಣ್ಣ ನೋಡಿ ಮರುಳಾಗಬಾರ್ದು, ಉಸಾರಾಗಿರ್ಬೇಕು...' ಅಂದುಕೊಂಡರು. ಇನ್ನು ಕೆಲವರಂತೂ ಅವರು ಯಾರೆಂಬುದೂ ಖಾತರಿಯಾಗಿಲ್ವಲ್ಲ ಅಂದುಕೊಂಡು ಯಾವುದೇ ಸಂಪರ್ಕಕ್ಕೂ ಮುಂದಾಗಿರಲಿಲ್ಲ! ಅತ್ತ ತಿರುಗಿಯೂ ನೋಡುತ್ತಿರಲಿಲ್ಲ! ಯಾರಾದರೂ ಬಂದು 'ಮಂಜುನಾಥ್ ಎಂಬುವವರ ಮನೆ ಯಾವುದು?' ಎಂದು ವಿಚಾರಿಸಿದರೂ 'ಗೊತ್ತಿಲ್ಲ' ಎಂದುಬಿಡುತ್ತಿದ್ದರು!

ಒಮ್ಮೆ ವಠಾರದ ಕೆಲವರು ಯಾವುದೋ ಕಾರಣಕ್ಕೆ ಒಂದೆಡೆ ಸೇರಿದಾಗ ಅದೇ ಮಂಜುನಾಥ್-ಮಾದೇವಿ ಅವರ ಬಗ್ಗೆ ಚರ್ಚೆ ಶುರುವಾಯಿತು. ಒಟ್ಟು ಹತ್ತು ಮಂದಿಯಲ್ಲಿ ಐವರು ''ಅವರು ನಮಗಿನ್ನ ಉತ್ತಮರು'' ಎಂದು ವಾದಿಸಿದರು. ಇನ್ನು ಮೂವರು ''ನಮಗಿನ್ನ ಕೆಳಗಿನವರು'' ಎಂದು ಸಾಧಿಸಿದರು. ಇನ್ನುಳಿದ ಇಬ್ಬರು ''ಜಾತಿ ಜಾತಿ ಅಂತ ಯಾಕೆ ಸಾಯ್ಬೇಕು, ಮನುಷ್ಯರು ಅಂದ್ರೆ ಎಲ್ಲರೂ ಒಂದೇ ಅಲ್ವಾ!'' ಅಂದರು. ಇದರಿಂದ ಮೊದಲಿನ ಎಂಟು ಮಂದಿಯೂ ಅಸಮಾಧಾನದಿಂದ ಕುದಿಯಲಾರಂಭಿಸಿದರು. ಮೂವರಲ್ಲಿ ಒಬ್ಬನಾದ ಪೋತಪ್ಪ ''ಮೇಲು ಕೀಳು ಅಂಬುದು ನಾವು ಮಾಡಿದ್ದಲ್ಲ, ದೇವುರ ಸಮಾನರಾದ ನಮ್ಮ ಹಿರೀಕರು ಮಾಡಿದ್ದು, ಅದುನ್ನ ನಾವು ಉಳಿಸ್ಕಂಬೇಕು'' ಎಂದ. ಮುಂದುವರಿದ ಚರ್ಚೆಯಲ್ಲಿ ಪೋತಪ್ಪನ ಬಾಯಿಗೇ ಗೆಲುವು!

ಸಂಜೆ ಆಫೀಸಿನಿಂದ ಪೋತಪ್ಪ ಮನೆಗೆ ಬಂದೊಡನೆ ಹಲ್ಲುಬೀರವ್ವ ಅಂಚೆ ಲಕೋಟೆಯೊಂದನ್ನು ಕೈಗಿಡುತ್ತಾ ''ಇದು ಯಾರ್‍ಯಾರ ಕೈಯಿಂದ್ಲೋ ನಮ್ಮನಿಗೆ ಬಂತು ನೋಡಿ, ಏನ್ಮಾಡ್ತೀರಿ?'' ಎಂದಳು. ವಿಳಾಸದ ಪ್ರಕಾರ ಆ ಮನೆಯ ಮಂಜುನಾಥ್ ಅವರದೇ ಎಂದು ಖಾತರಿಯಾಯಿತು. 'ಸರಿ, ಇದೊಳ್ಳೆ ಅವ್ಕಾಶ' ಅಂದುಕೊಂಡು ಆ ಮನೆಗೆ ನಡೆದ. ಮಂಜುನಾಥ್ ಗೌರವದಿಂದ ಇವನನ್ನು ಒಳಕ್ಕೆ ಆಹ್ವಾನಿಸಿ, ಕುಳಿತುಕೊಳ್ಳಲು ಸೋಫಾ ತೋರಿಸಿ, ಮೊದಲೇ ಒಡೆಯಲಾಗಿದ್ದ ಲಕೋಟೆಯನ್ನು ಕೈಗೆ ತೆಗೆದುಕೊಂಡು ''ಥ್ಯಾಂಕ್ಸ್'' ಎಂದರು. ಪೋತಪ್ಪನಿಗೆ ಯಾಕೋ ಮಂಕು ಕವಿದಂತಾಯಿತು. 'ಈ ಮನೆಯೊಳಕ್ಕೆ ಬಂದುಬಿಟ್ಟೀದೀನಿ, ನನ್ನಿಂದ ಮನೆ ಮೈಲಿಗೆಯೋ! ಮನೆಯಿಂದ ನಾನೇ ಮೈಲಿಗೆಯೋ!' ಎಂಬುದಾಗಿ ಮನಸ್ಸು ಚಡಪಡಿಸಿತು. ಅತ್ಯಂತ ಶುಭ್ರವಾದ ನೆಲ, ಅಚ್ಚುಕಟ್ಟಾಗಿ ಜೋಡಿಸಲಾದ ಪೀಠೋಪಕರಣಗಳು. ಇದೂ ಒಂದು ಗ್ರಂಥಾಲಯವೋ ಎನಿಸುವಂಥ ಪತ್ರಿಕೆ-ಪುಸ್ತಕಗಳ ರಾಶಿ. ಇಂಚು ಇಂಚಿನಲ್ಲೂ ಸದಭಿರುಚಿಯ ಅಚ್ಚುಕಟ್ಟುತನ!

ಮಂಜುನಾಥ್ ಒಳಕ್ಕೆ ಹೋಗಿ ಕಾಫಿ ತಂದಿಟ್ಟು ''ದಯವಿಟ್ಟು ತಗೊಳ್ಳಿ'' ಎಂದರು. ಪೋತಪ್ಪ 'ಈ ಮನಿಯಾಗೆ ಕಾಫಿ ಕುಡಿಯಾಕೆ ನಾನು ಯೋಗ್ಯನೆ?' ಎಂಬಂಥ ಮುಜುಗರದಲ್ಲೇ ಬಟ್ಟಲನ್ನು ಕೈಗೆತ್ತಿಕೊಂಡಾಗ ಬುದ್ಧಿ ಚುರುಕಾಯಿತು. ''ಈ ಮನಿಯಾಗೆ ನಿಮಗಿನ್ನ ಮದುಲು ಯಾರಿದ್ರು ಗೊತ್ತಾ ಸಾ?'' ಎಂದು ಪ್ರಶ್ನಿಸಿದ. ಮಂಜುನಾಥ್ ಮುಗುಳ್ನಗುತ್ತಾ ''ಗೊತ್ತು'' ಎಂದರು. ''ಅಂಗಾದ್ರೆ ಇದುನ್ನ ಸುದ್ದೀನೋ ಶುದ್ಧೀನೋ ಅಂತಾರಲ್ಲ ಅದುನ್ನ ಮಾಡಿಸ್ಬೇಕಾಗಿತ್ತಲ್ಲಾ ಸಾ'' ಎಂದ. ''ಮೊದಲು ಈ ವಠಾರದ ಮನಸುಗಳ ಶುದ್ಧಿ ಆಗ್ಬೇಕು...'' ಎಂದಾಗ ಪೋತಪ್ಪ ತಬ್ಬಿಬ್ಬಾಗಿ ಎದ್ದು ನಿಂತು ಗೋಡೆಯ ಕಡೆಗೆ ನೋಡಿದ. ಅಲ್ಲಿ ದೊಡ್ಡ ಅಂಬೇಡ್ಕರ್ ಭಾವಚಿತ್ರ! ತಕ್ಷಣವೇ ಅವನು ''ಯುರೇಕಾ! ಯುರೇಕಾ!...'' ಎನ್ನುತ್ತಾ ಹೊರಕ್ಕೆ ಧಾವಿಸಿದ!

ಎಸ್. ಆರ್. ಗುರುನಾಥ್
ಶ್ರೀ ನಿವಾಸ, ೧೧ನೇ ಕ್ರಾಸ್, ಐ.ಯು.ಡಿ.ಪಿ. ಬಡಾವಣೆ, ಚಿತ್ರದುರ್ಗ - ೫೭೭ ೫೦೧

# ಶ್ರೀ ಎಂ. ಮುಕುಂದನ್ ಅವರೊಡನೆ ಸಂದರ್ಶನ

ಶ್ರೀ ಎಂ. ಮುಕುಂದನ್ ಮಲಯಾಳಂನ ಬಹಳ ದೊಡ್ಡ ಲೇಖಕರು; ಕಾದಂಬರಿಕಾರರು. ಫ್ರೆಂಚ್ ಕಾಲನಿಯಾಗಿದ್ದ ಮಾಹೆಗೆ ಸೇರಿದ ಮಯ್ಯಳಿಯಲ್ಲಿ ಹುಟ್ಟಿ ಬೆಳೆದ ಅವರಿಗೆ ಫ್ರೆಂಚ್ ಭಾಷೆ ಮತ್ತು ಫ್ರಾನ್ಸಿನ ಜನತೆಯೊಂದಿಗೆ ನಿಕಟ ನಂಟು ಇದೆ. ಅನೇಕ ವರ್ಷಗಳ ಕಾಲ ದಿಲ್ಲಿಯ ಫ್ರೆಂಚ್ ಎಂಬೆಸಿಯಲ್ಲಿ ದುಡಿದವರು ಅವರು. ಪ್ರಸ್ತುತ ಕೇರಳ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾರೆ.
ಅವರು ಇತ್ತೀಚೆಗೆ ಕುಂದಾಪುರದ ಸಾಂಸ್ಕೃತಿಕ ವೇದಿಕೆಯಾದ ಕೈರಳಿ ಯುಕ್ತದ್ವಾರಿ ನಡೆಸಿದ ಸಮಾರಂಭವೊಂದಕ್ಕೆ ಅತಿಥಿಗಳಾಗಿ ಬಂದಿದ್ದ ಸಂದರ್ಭದಲ್ಲಿ ಪ್ರೊ|| ಪಾರ್ವತಿ ಜಿ. ಐತಾಳ್ ಅವರು, ಮುಕುಂದನ್ ಅವರ ಜತೆಗೆ ನಡೆಸಿದ ಸಂದರ್ಶನ ಇಲ್ಲಿದೆ. ಸಂದರ್ಶನ ನಡೆಯುವಾಗ ಮುಕುಂದನ್ ಜತೆಗೆ ಅವರ ಪತ್ನಿ ಶ್ರೀಜಾ ಅವರೂ ಇದ್ದರು.

**ಪ್ರಶ್ನೆ** : ನಾನು ನಿಮ್ಮ 'ದೈವತ್ತಿಂಡೆ ವಿಕೃತಿಗಳ್' ಎಂಬ ಕಾದಂಬರಿಯನ್ನು ಓದಿದ್ದೇನೆ. ಅದಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ಬಂದಿದೆ; ಮತ್ತು ಅಕಾಡೆಮಿಯು ಅದನ್ನು ಕನ್ನಡಕ್ಕೂ ಅನುವಾದ ಮಾಡಿಸಿದೆ. ಕಾದಂಬರಿಯು ವಸಾಹತೋತ್ತರ ಪ್ರತಿರೋಧವನ್ನು ಬಹಳ ಚೆನ್ನಾಗಿ ಚಿತ್ರಿಸಿದೆ. ಫ್ರೆಂಚ್ ವಸಾಹತುಶಾಹಿಯು ಮಯ್ಯಳಿಯನ್ನು ಬಿಟ್ಟು ಹೋದ ನಂತರ ಮಯ್ಯಳಿಯ ಜನಜೀವನದಲ್ಲಿ ಸಂಭವಿಸಿದ ಪಲ್ಲಟಗಳ ಸೂಕ್ಷ್ಮ ವಿವರಣೆಗಳು ಓದುಗರಿಗೆ ಅದ್ಭುತ, ರೋಮಾಂಚನಕಾರಿ ಅನುಭವ ನೀಡುತ್ತವೆ. ನೀವು ನಿಮ್ಮ ಜೀವಿತಾವಧಿಯಲ್ಲಿ ಕೇವಲ ಇಪ್ಪತ್ತನೇ ವಯಸ್ಸಿನ ತನಕ ಮಾತ್ರ ಮಯ್ಯಳಿಯಲ್ಲಿ ಕಳೆದಿರಿ ಎಂದು ಕೇಳಿದ್ದೇನೆ. ನೀವು ಈ ಎಲ್ಲ ಸಂಗತಿಗಳನ್ನು ಇಷ್ಟು ಸೂಕ್ಷ್ಮವಾಗಿ ಅಷ್ಟೊಂದು ಚಿಕ್ಕ ವಯಸ್ಸಿನಲ್ಲಿ ಗಮನಿಸಿದಿರಾ ?

**ಉತ್ತರ** : ನಾನು ಮಯ್ಯಳಿಯನ್ನು ನನ್ನ ಇಪ್ಪತ್ತನೇ ವಯಸ್ಸಿನಲ್ಲೇ ಬಿಟ್ಟು ದಿಲ್ಲಿಗೆ ಹೋಗಿ ನೆಲೆಸಿದ್ದು ನಿಜ. ೧೯೬೨ರಲ್ಲಾಗಿತ್ತು ಅದು. ನಂತರ ನಾನು ೪೦ಕ್ಕೂ ಹೆಚ್ಚು ವರ್ಷಗಳ ಕಾಲ, ನಾನು ಫ್ರೆಂಚ್ ಎಂಬೆಸಿಯಿಂದ ನಿವೃತ್ತನಾಗುವ ತನಕ, ಅಲ್ಲೇ ಕಳೆದು ೨೦೦೩ರಲ್ಲಿ ತಿರುಗಿ ಮಯ್ಯಳಿಗೆ ಬಂದು ನೆಲೆಸಿದೆ. ಆದರೆ... ಈ ನಲವತ್ತು ವರ್ಷಗಳ ಕಾಲವೂ ನಾನು ದಿಲ್ಲಿಯಲ್ಲಿ ಜೀವಿಸಿದ್ದು ಭೌತಿಕವಾಗಿ ಮಾತ್ರ. ಮಯ್ಯಳಿಯಿಂದ ನನ್ನ ಮನಸ್ಸನ್ನು ಪ್ರತ್ಯೇಕಿಸುವುದು ನನ್ನಿಂದ ಎಂದೂ ಸಾಧ್ಯವಾಗಲಿಲ್ಲ. ನಾನು ಮಯ್ಯಳಿಯಲ್ಲಿ ಕಳೆದ ನನ್ನ ಬದುಕಿನ ಮೊದಲ ವರ್ಷಗಳು ನನ್ನನ್ನು ಸದಾ ತೀವ್ರವಾಗಿ ಕಾಡುವ ನೆನಪುಗಳಾಗಿ ನನ್ನಲ್ಲಿ ಉಳಿದವು. ಅಲ್ಲಿನ ಹಬ್ಬ-ಉತ್ಸವಗಳು, ನದಿ, ಮಳೆ, ಜನರು - ಮಾತ್ರವಲ್ಲ ಆಡು-ಹಸುಗಳು ಕೂಡ ನನ್ನ ನೆನಪುಗಳ ಭಾಗವಾಗಿದ್ದವು. ಆದ್ದರಿಂದ ಎಂಬೆಸಿಯ ಬಿಡುವಿಲ್ಲದ ಕೆಲಸಗಳ ಒತ್ತಡದ ನಡುವೆಯೂ ವರ್ಷದಲ್ಲೊಂದು ಬಾರಿ ಅಲ್ಲಿಗೆ ಭೇಟಿಯಿತ್ತು ಎಷ್ಟು ಸಾಧ್ಯವೋ ಅಷ್ಟು ದಿನಗಳನ್ನು ಅಲ್ಲಿ ಕಳೆಯಬೇಕೆಂಬ ಸಂಕಲ್ಪವನ್ನು ನನಗೆ ನಾನೇ ವಿಧಿಸಿಕೊಂಡೆ. ಹಾಗೆ ಹೋದಾಗಲೆಲ್ಲ ಮಯ್ಯಳಿಯ ಬದುಕಿನ ಶೈಲಿಯಲ್ಲಿ ತೀವ್ರ ಪರಿವರ್ತನೆಗಳಾಗುತ್ತಿರುವುದನ್ನು ನಾನು ಗಮನಿಸುತ್ತ ಬಂದೆ. ನಾನು ಗಮನಿಸಿದ ಎಲ್ಲ ಸಂಗತಿಗಳನ್ನೂ 'ದೈವತ್ತಿಂಡೆ ವಿಕೃತಿಗಳ್' ಕಾದಂಬರಿಯಲ್ಲಿ ಚಿತ್ರಿಸಿದ್ದೇನೆ. ಯಾವುದನ್ನೂ ಉದ್ದೇಶಪೂರ್ವಕವಾಗಿ ಗಮನಿಸಿದ್ದಲ್ಲ, ಹಾಗೆ ಮಾಡಬೇಕಾದ ಅಗತ್ಯವೂ ಇಲ್ಲ.

*ಸಂದರ್ಶಿಸಿದವರು : ಪ್ರೊ|| ಪಾರ್ವತಿ ಜಿ. ಐತಾಳ್*

ಯಾಕೆಂದರೆ ನಾನು ಹೋದೆಡೆಗಳಿಗೆಲ್ಲ ನಾನು ನನ್ನ ಮಯ್ಯಳಿಯನ್ನು ಮತ್ತು ಅಲ್ಲಿನ ಜನರನ್ನೂ ನನ್ನೊಳಗೆ ಒಯ್ದಿದ್ದೇನೆ. ಒಂದು ರೀತಿಯಲ್ಲಿ ಹೇಳುವುದಾದರೆ, ನಾನು ಮಯ್ಯಳಿಯ ಪ್ರೇಮಪಾಶದಲ್ಲಿ ಸಿಲುಕಿದ್ದೆ.

**ಪ್ರಶ್ನೆ** : ಸಾಮಾನ್ಯವಾಗಿ, ಬಾಲ್ಯದ ಅನುಭವಗಳು ಬರಹಗಾರರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದು ಅವರ ಬರವಣಿಗೆಯುದ್ದಕ್ಕೂ ಒಂದಿಲ್ಲೊಂದು ರೀತಿಯಲ್ಲಿ ಕಾಣಿಸಿ ಕೊಳ್ಳುತ್ತದೆ. ಅಂಥದೇನಾದರೂ ವಿಶೇಷ ನೆನಪುಗಳು ನಿಮ್ಮಲ್ಲಿದ್ದರೆ ಆ ಬಗ್ಗೆ ಸ್ವಲ್ಪ ಹೇಳುತ್ತೀರಾ ?

**ಉತ್ತರ** : ಅಂಥ ಮರೆಯಲಾಗದ ಕ್ಷಣಗಳು ಹೇಳಿ ಮುಗಿಯದಷ್ಟಿವೆ. 'ದೈವತ್ತಿಂಡೆ ವಿಕೃತಿಗಳ್' ಕಾದಂಬರಿಯ ಮುಖ್ಯ ಪಾತ್ರ ಅಲ್ಫೋನ್ಸಯ್ಯ ಇದ್ದಾನಲ್ಲ, ಅವನ ಸೃಷ್ಟಿಯ ಹಿಂದೆ ಒಬ್ಬ ನಿಜವಾದ ಮನುಷ್ಯನ ವ್ಯಕ್ತಿತ್ವದಿಂದ ಅನೇಕ ಗುಣಗಳನ್ನು ನಾನು ತೆಗೆದುಕೊಂಡಿದ್ದೇನೆ. ಅವನೊಬ್ಬ ಧಡೂತಿ ಮನುಷ್ಯನಾಗಿದ್ದ. ನಾನು ಚಿಕ್ಕವನಾಗಿದ್ದಾಗ ಅವನು ನವನವೀನ ಮಾದರಿಯಲ್ಲಿ ನೀಟಾಗಿ ಸೂಟು-ಬೂಟು-ಹ್ಯಾಟು ಧರಿಸಿ ತನ್ನ ಹೆಂಡತಿ-ಮಕ್ಕಳೊಂದಿಗೆ ಸೇಂಟ್ ಥೆರೇಸಾ ಚರ್ಚಿಗೆ ಹೋಗುತ್ತಿದ್ದುದನ್ನು ನಾನು ಸದಾ ನೋಡುತ್ತಿದ್ದೆ. ಅವನು ಹಾದುಹೋದಾಗಲೆಲ್ಲ ಫ್ರೆಂಚ್ ಪರ್‌ಫ್ಯೂಮಿನ ಪರಿಮಳ ಘಮ್ಮೆಂದು ಮೂಗಿಗೆ ಬಡಿಯುತ್ತಿತ್ತು. ತುಂಬ ವರ್ಷಗಳ ನಂತರ ನಾನು ಆ ಮನುಷ್ಯನನ್ನ ಒಮ್ಮೆ ಮಯ್ಯಳಿಯಲ್ಲಿ ನೋಡಿದಾಗ ನನ್ನಿಂದ ನನ್ನ ಕಣ್ಣುಗಳನ್ನೇ ನಂಬಲಾಗಲಿಲ್ಲ. ಆತ ತೀರಾ ಇಳಿದುಹೋಗಿದ್ದ. ತುಂಬ ದಿನಗಳಿಂದ ಮುಖಕ್ಷೌರ ಮಾಡದಿದ್ದವನಂತಿದ್ದ. ಕೋಟೇನೋ ಧರಿಸಿಕೊಂಡಿದ್ದ, ಆದರೆ ಅದಕ್ಕೆ ಕೊಳೆ ಮೆತ್ತಿಕೊಂಡಿದ್ದು ಅದು ಅಲ್ಲಲ್ಲಿ ಹರಿದುಹೋಗಿತ್ತು. ಆತ ಸೇತುವೆಯ ಮೇಲೆ, ಅದರ ತುಕ್ಕು ಹಿಡಿದ ಸರಳುಗಳ ಮೇಲೆ ಕೈಯೂರಿ ಬಾಗಿ ನಿಂತು ನೀರಿನತ್ತ ದುರುಗುಟ್ಟಿ ನೋಡುತ್ತಿದ್ದ. ತುಂಬ ಹೊತ್ತು ಹಾಗೆಯೇ ಶಿಲಾಪ್ರತಿಮೆಯೇನೋ ಎಂಬಂತೆ ನಿಂತೇ ಇದ್ದ...

ಇನ್ನೊಂದು ಅಚ್ಚಳಿಯದ ನೆನಪು : ಮಯ್ಯಳಿಯು ಫ್ರೆಂಚ್ ವಸಾಹತುಶಾಹಿಯ ಕೈಯಿಂದ ಸ್ವತಂತ್ರವಾದಾಗ, ಅಲ್ಲಿದ್ದ ಎಲ್ಲ ಫ್ರೆಂಚರೂ ತಮ್ಮ ತಮ್ಮ ಕುಟುಂಬ ಗಳೊಂದಿಗೆ ಹಡಗು ಹತ್ತಿ ಹೊರಟರು. ಅವರೆಲ್ಲರೂ ಸಮುದ್ರ ತೀರದ ಮೇಲೆ ಅವರನ್ನು ಬೀಳ್ಕೊಡಲು ನೆರೆದಿದ್ದ ಸ್ಥಳೀಯ ಮಂದಿಯತ್ತ ನೋಡಿ ಕೈ ಬೀಸಿದಾಗ ಎಲ್ಲರೂ ಅತ್ತರು... ಪ್ರಾಯಶಃ ತಮ್ಮನ್ನು ಬಿಟ್ಟು ಹೋಗುತ್ತಿರುವ ವಸಾಹತು ದೊರೆಗಳನ್ನು ಕಳುಹಿಸಿ ಕೊಡುವಾಗ ಊರಿನೊಳಗಣ ಜನರು ಕಣ್ಣೀರು ಸುರಿಸಿದ್ದು ಇಡೀ ಜಗತ್ತಿನಲ್ಲೇ ಎಲ್ಲಿಯೂ ಸಂಭವಿಸಿರಲಿಕ್ಕಿಲ್ಲ. ಅದೊಂದು ಅತ್ಯಂತ ನಾಟಕೀಯ ಸನ್ನಿವೇಶವಾಗಿತ್ತು. ಈ ಕುರಿತು ನಾನು ನನ್ನ 'ಮಯ್ಯಳಿಪ್ಪುಳಯುಡೆ ತೀರಙ್ಙಳಿಲ್' ಎಂಬ ಕಾದಂಬರಿಯಲ್ಲಿ ಬರೆದಿದ್ದೇನೆ...

ನೋಡಿ ಪಾರ್ವತಿ, ಮಯ್ಯಳಿ ನನ್ನನ್ನು ಪೂರ್ತಿಯಾಗಿ ಆವರಿಸಿಕೊಂಡುಬಿಟ್ಟಿದೆ. ನಾನು ನನ್ನೆಲ್ಲ ಪ್ರೀತಿಯನ್ನೂ, ನನ್ನ ಹೃದಯವೇ ಬರಿದಾಗುವಷ್ಟು, ಮಯ್ಯಳಿಗೆ ಧಾರೆ ಎರೆದಿದ್ದೇನೆ. ಎಷ್ಟರ ಮಟ್ಟಿಗೆ ಅಂದರೆ, ಸ್ತ್ರೀಯರು - ಅವರು ಎಷ್ಟೇ ಸುಂದರವಾಗಿದ್ದರೂ – 



ಅವರಿಗೆ ನನ್ನ ಪ್ರೀತಿಯನ್ನು ಕೊಡಲಾಗದಷ್ಟು!

**ಪ್ರಶ್ನೆ** : 'ಮಯ್ಯಳಿಪ್ಪುಳಯುಡೆ ತೀರಙ್ಙಳಿಲ್' ಅನ್ನುವುದು ನಿಮ್ಮ ಪ್ರಧಾನ ಕೃತಿಗಳಲ್ಲೊಂದು. ಮಯ್ಯಳಿ ನದಿಯು ನಿಮ್ಮ ಇತರ ಕಾದಂಬರಿಗಳಲ್ಲಿಯೂ ಪದೇ ಪದೇ ಉಲ್ಲೇಖಿಸಲ್ಪಟ್ಟಿದೆ. ಅದೇನು ಆ ಹೊಳೆಗೆ ನೀವು ಅಷ್ಟೊಂದು ಮಹತ್ವ ಕೊಟ್ಟಿರುವುದು ? ಅದರೊಂದಿಗೆ ನಿಮ್ಮ ಆತ್ಮೀಯ ಬಂಧಕ್ಕೆ ಕಾರಣವೇನಾದರೂ ಇದೆಯಾ ?

**ಉತ್ತರ** : ಮಯ್ಯಳಿಯನ್ನು ಆ ಹೊಳೆ ಮತ್ತು ಅದರ ಮೇಲಿನ ಸೇತುವೆಯ ಹೊರತಾಗಿ ಕಲ್ಪಿಸಿಕೊಳ್ಳುವುದೂ ನನ್ನಿಂದ ಸಾಧ್ಯವಿಲ್ಲ. ನಾನು ಚಿಕ್ಕ ಹುಡುಗನಾಗಿದ್ದಾಗ ಆ ಸೇತುವೆ ಮೇಲಿಂದ ಹೋದಾಗಲೆಲ್ಲ ಅಲ್ಲೇ ಒಂದಷ್ಟು ಹೊತ್ತು ನಿಂತು, ಅದರ ಅಂಚಿನ ಸರಳುಗಳ ಮೇಲೆ ಒರಗಿ ನಿಂತು ಕೆಳಗೆ ಹರಿದುಹೋಗುವ ನೀರನ್ನೇ ನೋಡುತ್ತಿದ್ದೆ. ಅಷ್ಟು ಚಿಕ್ಕ ವಯಸ್ಸಿನಲ್ಲೇ ನನಗೆ ಅನ್ನಿಸುತ್ತಿತ್ತು, ಬದುಕೂ ಈ ಹೊಳೆಯ ಹಾಗೆಯೇ ಅಂತ. ನೀರು ಹರಿದುಹೋಗುತ್ತಲೇ ಇರುತ್ತದೆ; ಆದರೆ ಹೊಳೆ ಸದಾ ಜೀವಂತವಾಗಿರುತ್ತದೆ. ನಾವು ಭಾರತೀಯರು ನಮ್ಮೊಳಗೆ ಸದಾ ಒಂದು ಹೊಳೆಯನ್ನಿಟ್ಟುಕೊಂಡಿರುತ್ತೇವೆ ಮತ್ತು ಅದಿಲ್ಲದೆ ನಾವು ಬದುಕಲಾರೆವು ಎಂದು ನಂಬಿದವನು ನಾನು...

**ಪ್ರಶ್ನೆ** : ನೀವು ಹುಟ್ಟಿ ಬೆಳೆದದ್ದೆಲ್ಲ ಒಂದು ಫ್ರೆಂಚ್ ಕಾಲನಿಯಲ್ಲಿ. ತುಂಬ ವರ್ಷಗಳ ತನಕ ನೀವು ಫ್ರೆಂಚ್ ಎಂಬೆಸಿಯಲ್ಲಿ ಕೆಲಸ ಮಾಡಿದ್ದೀರಿ. ಅಲ್ಲದೆ ಫ್ರಾನ್ಸಿಗೆ ಸ್ವತಃ ಭೇಟಿಯಿತ್ತು ಕೆಲವು ಕಾಲ ಅಲ್ಲೇ ವಾಸಮಾಡಿಯೂ ಬಂದಿದ್ದೀರಿ. ಫ್ರೆಂಚ್ ಜನತೆ, ಅಲ್ಲಿನ ಸಂಸ್ಕೃತಿ, ಜೀವನ ಕ್ರಮ, ಸಾಹಿತ್ಯ ಇತ್ಯಾದಿಗಳ ಬಗ್ಗೆ ನಿಮ್ಮ ಅನ್ನಿಸಿಕೆಗಳೇನು ?

**ಉತ್ತರ** : ಫ್ರೆಂಚ್ ಜನರ ಬಗ್ಗೆ ನಾನು ಗಮನಿಸಿದ ಮೊದಲ ಅಂಶವೆಂದರೆ ಅವರ ಮಾನವೀಯ ಅನುಕಂಪ. ಈ ಭೂಮಿಯ ಮೇಲಿನ ಅತ್ಯಂತ ಸೃಜನಶೀಲರಾಗಿರುವ ಜನರೆಂದರೆ ಫ್ರೆಂಚರು. ಸದಾ ಹೊಸತರ ಹಿಂದೆ ಹೋಗುವವರು ಅವರು. ಸ್ವತಃ ತಮ್ಮನ್ನು ಹೊಸ ವಿಷಯಗಳಿಗೆ ಒಡ್ಡಿಕೊಳ್ಳುವಲ್ಲಿ ಅವರಿಗಿರುವ ಆಸಕ್ತಿ ಬೇರೆ ಯಾರಲ್ಲೂ ಇರಲಾರದು. ಆದರೆ ಅವರಲ್ಲಿ ವ್ಯಾವಹಾರಿಕತೆಯೆಂಬುದು ಸ್ವಲ್ಪವೂ ಇಲ್ಲ. ಅವರಲ್ಲಿ ಆ ಗುಣವಿದ್ದಿದ್ದರೆ ಅವರ ಸೃಜನಶೀಲತೆ ಮತ್ತು ಬುದ್ಧಿಶಕ್ತಿಗಳಿಂದ ಅಮೆರಿಕಾವನ್ನೂ ಹಿಂದಿಕ್ಕಿ ಅವರೇ ಜಗತ್ತನ್ನು ಆಳುವವರಾಗಿಬಿಡುತ್ತಿದ್ದರು. ಕೆಲವೊಮ್ಮೆ ನನಗನ್ನಿಸುತ್ತದೆ – ಕೇವಲ ವ್ಯಾವಹಾರಿಕತೆ ಮತ್ತು ರಾಜಕಾರಣ ಕೌಶಲ್ಯಗಳೇ ಮೇಲುಗೈ ಸಾಧಿಸುವ ಈ ಜಗತ್ತಿನಲ್ಲಿ ಅವರು ತಪ್ಪಿಬಂದಿದ್ದಾರೇನೋ ಅಂತ. ಫ್ರೆಂಚರು ಸಾಹಿತ್ಯಕ್ಕಾಗಿರುವ ನೊಬೆಲ್ ಬಹುಮಾನವನ್ನು ಅನೇಕ ಬಾರಿ ಗೆದ್ದುಕೊಂಡಿದ್ದಾರಾದರೂ, ಈಗ ಅವರ ಸಾಹಿತ್ಯ ಏನೋ ತೊಂದರೆಯಿಂದ ಬಳಲುತ್ತಿದೆ. ಕಳೆದ ವರ್ಷದ ನೊಬೆಲ್ ಬಹುಮಾನ ಪಡೆದ ಲೇ ಕ್ಲಾಸಿಯೋ ಕೂಡ ಮಿಲನ್ ಕುಂದೇರಾ ಅಥವಾ ಜೆ. ಎಂ. ಕೋಟ್‌ಝೀಯವರಷ್ಟು ಉತ್ಕೃಷ್ಟ ಮಟ್ಟದವನಲ್ಲ. ಇಡೀ ಜಗತ್ತಿನ ಸಾಹಿತ್ಯರಂಗದಲ್ಲಿ ಎರಡು ಶತಮಾನಗಳ ಕಾಲ ರಾಜರಾಗಿ ಮೆರೆದ ನಂತರ ಈಗ ಅವರು ಒಂದಷ್ಟು ವಿರಾಮ ತೆಗೆದುಕೊಂಡಿರುವುದು ಸ್ವಾಭಾವಿಕವೂ ಹೌದು.

**ಪ್ರಶ್ನೆ** : ನೀವು ೨೦೦೬ರಿಂದ ಕೇರಳ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದೀರಿ. ಮಲಯಾಳ ಸಾಹಿತ್ಯದ ಈಗಿನ ಸ್ಥಿತಿ-ಗತಿಗಳಲ್ಲಿ ಪ್ರಗತಿ ತರುವ ನಿಟ್ಟಿನಲ್ಲಿ ಏನೇನು ವಿಶೇಷ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಂಡಿದ್ದೀರಿ ?

**ಉತ್ತರ** : ಸಾಹಿತ್ಯ ಅಕಾಡೆಮಿಯಲ್ಲಿ ಅಧ್ಯಕ್ಷರದ್ದೇ ಕೊನೆಯ ಮಾತಲ್ಲ. ಅಲ್ಲೊಂದು ಕಾರ್ಯನಿರ್ವಾಹಕ ಮಂಡಳಿಯಿದೆ, ಒಂದು ಸಾಮಾನ್ಯ ಸಮಿತಿ ಕೂಡ ಇದೆ. ನಾವೆಲ್ಲರೂ ಜೊತೆಗೆ ಕೆಲಸ ಮಾಡುತ್ತೇವೆ. ನಾವು ಅಕಾಡೆಮಿಯ ಚಟುವಟಿಕೆಗಳನ್ನು ಜನಸಾಮಾನ್ಯರ ಬಳಿಗೆ ತೆಗೆದುಕೊಂಡು ಹೋಗಿದ್ದೇವೆ. ಹಳ್ಳಿಗಳಲ್ಲಿ ಸಾವಿರಾರು ಮಂದಿ ರೈತರು ಆತ್ಮಹತ್ಯೆ ಮಾಡಿಕೊಂಡಾಗ ನಾವು ಬರಹಗಾರರು ಅವರ ಬಳಿಗೆ ಹೋಗಿ ಅವರ ದುಃಖಗಳನ್ನು ಹಂಚಿಕೊಂಡಿದ್ದೇವೆ. ಜೈಲುಗಳಿಗೆ ಭೇಟಿಯಿತ್ತು ಅಲ್ಲಿರುವ ಕೈದಿಗಳಿಗಾಗಿ ಜೈಲಿನ ಆವರಣದ ಒಳಗೆ ಕವಿಗೋಷ್ಠಿಗಳನ್ನು ಸಂಘಟಿಸಿದ್ದೇವೆ. ಅಲ್ಲದೆ, ಕ್ಷಿಪ್ರಗತಿಯಲ್ಲಿ ಪಲ್ಲಟಗೊಳ್ಳುತ್ತಿರುವ ಈ ಜಗತ್ತಿನಲ್ಲಿ ಹಿಂದುಳಿಯಲು ಇಷ್ಟವಿಲ್ಲದೆ ಶತಮಾನಗಳಷ್ಟು ಹಳೆಯ ಪುಸ್ತಕಗಳನ್ನೂ ನಿಯತಕಾಲಿಕಗಳನ್ನೂ ಡಿಜಿಟಲ್ ಆಗಿ ಮಾಡುವ ಒಂದು ಬೃಹತ್ ಯೋಜನೆಯನ್ನೂ ಕೈಗೊಂಡಿದ್ದೇವೆ. ಇತ್ತೀಚೆಗಷ್ಟೇ ನಮ್ಮ ಅಕಾಡೆಮಿಯಲ್ಲಿ ಬರೇ ಒಂದು ಗುಂಡಿಯೊತ್ತುವ ಮೂಲಕ ಮಲಯಾಳದ ಎಲ್ಲ ಲೇಖಕರ ಬಗ್ಗೆ ಮಾಹಿತಿಗಳು ಲಭ್ಯವಾಗುವಂತಹ ಒಂದು ಡಿಜಿಟಲ್ ಲೈಬ್ರರಿಯನ್ನು ನಮ್ಮ ಸಂಸ್ಕೃತಿ ಇಲಾಖೆಯ ಸಚಿವರು ಉದ್ಘಾಟಿಸಿದರು. ಅಲ್ಲಿ, ಬಹಳಷ್ಟು ಹಿಂದೆಯೇ ಗತಿಸಿಹೋದ ಪ್ರಸಿದ್ಧ ಲೇಖಕರ ಧ್ವನಿಯನ್ನೂ ಕೇಳಬಹುದಾಗಿದೆ... ಇವು ನಮ್ಮ ಅತ್ಯಲ್ಪ ಸಾಧನೆಗಳಲ್ಲಿ ಕೆಲವು.

**ಪ್ರಶ್ನೆ**: ಮಲಯಾಳದಲ್ಲಿ ಸಾಹಿತ್ಯ ಕೃತಿಗಳ ಅನುವಾದಗಳಿಗಿರುವ ಅವಕಾಶಗಳೇನು ? ಕೇರಳದಲ್ಲಿ ಭಾಷಾಂತರಕಾರರಿಗಿರುವ ಸ್ಥಾನಮಾನಗಳು ಹೇಗಿವೆ ?

**ಉತ್ತರ** : ಭಾರತದ ಇತರ ಪ್ರಾದೇಶಿಕ ಭಾಷೆಗಳಿಂದ ಮಲಯಾಳಕ್ಕೆ ಕೃತಿಗಳನ್ನು ಅನುವಾದಿಸುವ ಕೆಲಸವು ನಮ್ಮ ಸಾಹಿತ್ಯಕ ಚಟುವಟಿಕೆಗಳ ಒಂದು ಅವಿಭಾಜ್ಯ ಅಂಗವಾಗಿದೆ ಎಂದೇ ಹೇಳಬೇಕು. ಕನ್ನಡ, ಬಂಗಾಳಿ, ಹಿಂದಿ ಭಾಷೆಗಳ ಹಳೆಯ ಮತ್ತು ಆಧುನಿಕ ಉತ್ಕೃಷ್ಟ ಸಾಹಿತ್ಯ ಕೃತಿಗಳಲ್ಲಿ ಹೆಚ್ಚಿನವು ಇವತ್ತು ಮಲಯಾಳದಲ್ಲಿವೆ.



*ಶ್ರೀಮತಿ ಶ್ರೀಜಾ, ಶ್ರೀ ಎಂ. ಮುಕುಂದನ್ ಮತ್ತು ಪ್ರೊ॥ ಪಾರ್ವತಿ ಐತಾಳ್*

ಈ ಕೆಲಸ ಮಾಡಲು ನಮ್ಮಲ್ಲಿ ಬಹಳ ಒಳ್ಳೆಯ ಅನುವಾದಕರೂ ಇದ್ದಾರೆ. ಹಾಗಾಗಿ ಬೇರೆ ರಾಜ್ಯಗಳ ಯು. ಆರ್. ಅನಂತಮೂರ್ತಿ, ಮಹಾಶ್ವೇತಾದೇವಿಯವರಂತಹ ಲೇಖಕರು ಕೇರಳದಲ್ಲಿ ತುಂಬ ಜನಪ್ರಿಯರಾಗಿ ಬಿಟ್ಟಿದ್ದಾರೆ. ಅದೇ ವಿಚಾರದಲ್ಲಿ ನಮ್ಮಲ್ಲೊಂದು ಅಸಮಾಧಾನವೂ ಹುಟ್ಟಿಕೊಂಡಿದೆ: ಏನೆಂದರೆ ನಮ್ಮ ಮಲಯಾಳದಿಂದ ಸಾಹಿತ್ಯ ಅಕಾಡೆಮಿ ಮತ್ತು ನ್ಯಾಷನಲ್ ಬುಕ್ ಟ್ರಸ್ಟ್‌ಗಳು ಮಾಡಿಸಿದ ಅನುವಾದಗಳನ್ನು ಬಿಟ್ಟರೆ ನಮ್ಮ ಲೇಖಕರ ಒಳ್ಳೆಯ ಕೃತಿಗಳು ಇತರ ಭಾರತೀಯ ಭಾಷೆಗಳಿಗೆ ಹೋಗಿಲ್ಲ ಅಂತ.

**ಪ್ರಶ್ನೆ** : ಅನುವಾದಕ್ಕಾಗಿ ಒಂದು ಪ್ರತ್ಯೇಕ ಅಕಾಡೆಮಿಯನ್ನು ಮೊತ್ತಮೊದಲ ಬಾರಿಗೆ ಕರ್ನಾಟಕವು ಸ್ಥಾಪಿಸಿದೆ. ಅನೇಕ ಕಾರ್ಯಯೋಜನೆಗಳನ್ನು ಅದು ಈಗಾಗಲೇ ಹಾಕಿಕೊಂಡಿದೆ. ಅಂಥ ಒಂದು ಅಕಾಡೆಮಿಯ ಆವಶ್ಯಕತೆಯನ್ನು ನೀವು ಕಂಡಿಲ್ಲವೆ ?

**ಉತ್ತರ** : ಖಂಡಿತವಾಗಿಯೂ ಅಂಥ ಒಂದು ಅಕಾಡೆಮಿಯ ಅಗತ್ಯ ಕೇರಳಕ್ಕೂ ಇದೆ. ಆದಷ್ಟು ಶೀಘ್ರದಲ್ಲಿ ಅಂಥ ಒಂದು ಅಕಾಡೆಮಿ, ಇಲ್ಲವೇ ಭಾಷಾಂತರಕಾರರಿಗೆ ತರಬೇತಿ ನೀಡುವ ಸಂಸ್ಥೆ ಅಥವಾ ಮಲಯಾಳದಿಂದ ಬೇರೆ ಭಾಷೆಗಳಿಗೂ, ಬೇರೆ ಭಾಷೆಗಳಿಂದ ಮಲಯಾಳಕ್ಕೂ ಕೃತಿಗಳ ಅನುವಾದ ಕಾರ್ಯವನ್ನು ಪ್ರೋತ್ಸಾಹಿಸುವ ವ್ಯವಸ್ಥೆಯನ್ನು ಪ್ರಾರಂಭಿಸಬೇಕೆಂದಿದ್ದೇವೆ. ಕೇರಳದಲ್ಲಿ ಭಾಷಾಂತರವನ್ನು ಒಂದು ವೃತ್ತಿಯಾಗಿ ಯಾರೂ ಪರಿಗಣಿಸುವುದಿಲ್ಲ. ಅದೇ ಒಂದು ಸಮಸ್ಯೆ. ನನ್ನ ಅಭಿಪ್ರಾಯದಲ್ಲಿ ಭಾಷಾಂತರಕಾರರನ್ನು ಸೃಜನಶೀಲರೆಂದೂ ವೃತ್ತಿಪರರೆಂದೂ ಏಕಕಾಲದಲ್ಲಿ ಪರಿಗಣಿಸಬೇಕು.

**ಪ್ರಶ್ನೆ**: ಕೇರಳದಲ್ಲಿ ಪ್ರಗತಿಪರ ಚಿಂತನೆಯುಳ್ಳ ಲೇಖಕಿಯರ ಸ್ಥಾನಮಾನಗಳೇನು ? ಯಾಕೆಂದರೆ ಪ್ರಸಿದ್ಧ ಲೇಖಕಿ ಕಮಲಾ ದಾಸ್ (ಮಾಧವಿ ಕುಟ್ಟಿ) ಅವರು ತುಂಬ ಅವಹೇಳನಕ್ಕೆ ಗುರಿಯಾಗಿದ್ದರು ಎಂದು ಕೇಳಿದ್ದೇನೆ. ಧಾರ್ಮಿಕ ಮತ್ತು ಸಾಂಸ್ಕೃತಿಕ ಸಾಮರಸ್ಯಕ್ಕೆ ಪ್ರಸಿದ್ಧರಾದ ಕೇರಳಿಗರು ಸ್ತ್ರೀ ಸ್ವಾತಂತ್ರ್ಯದ ಬಗ್ಗೆ ಇಷ್ಟು ಸಂಕುಚಿತ ಮನೋಭಾವದವರಾಗಿರುತ್ತಾರೆಂದು ನಂಬುವುದು ಕಷ್ಟವಾಗುತ್ತಿದೆ...

**ಉತ್ತರ** : ಪಾರ್ವತಿ, ನೀವು ತಪ್ಪು ತಿಳಿದುಕೊಂಡಿದ್ದೀರಿ. ಎಲ್ಲ ಕೇರಳಿಗರೂ ಸಂಕುಚಿತ ಮನೋಭಾವದವರಲ್ಲ. ಸಾಮಾನ್ಯವಾಗಿ ನಮ್ಮ ಎಲ್ಲ ಲೇಖಕರುಗಳೂ ಸಾಮಾಜಿಕವಾದ ಮತ್ತು ಸಾಂಸ್ಕೃತಿಕವಾದ ಎಲ್ಲ ವಿಚಾರಗಳ ಬಗೆಗೂ ಬಹಳ ಜಾಗೃತರಾಗಿರುತ್ತಾರೆ; ಅಲ್ಲದೆ ಜಾತ್ಯತೀತವಾದದಲ್ಲಿ ಆಳವಾಗಿ ಬೇರೂರಿರುವ ಸಾಂಸ್ಕೃತಿಕ ಮೌಲ್ಯಗಳನ್ನು ನಮ್ಮೊಳಗೆ ಜೀವಂತವಾಗಿಟ್ಟುಕೊಳ್ಳಲು ನಾವು ಸದಾ ಪ್ರಯತ್ನಿಸುತ್ತೇವೆ. ಆದರೆ ಈಗ, ದುರದೃಷ್ಟವಶಾತ್, ಮಲಯಾಳಿ ಸಮುದಾಯವು ಜಾತಿ - ಧರ್ಮಗಳ ಆಧಾರದ ಮೇಲೆ ಹೆಚ್ಚು ಹೆಚ್ಚು ಸಂಘಟಿತವಾಗುತ್ತಿದೆ. ಈ ದುರದೃಷ್ಟಕರ ವಿದ್ಯಮಾನಕ್ಕೆ ಕಮಲಾ ದಾಸ್ ಬಲಿಯಾದರು ಅಷ್ಟೆ. ಆಕೆ ಇಸ್ಲಾಂ ಧರ್ಮವನ್ನು ಸ್ವೀಕರಿಸಿದಾಗ ಸಮಾಜದ ಒಂದು ವರ್ಗಕ್ಕೆ ಅದರಿಂದ ಅಸಮಾಧಾನವಾಯಿತು. ಅವರು ಆಕೆಗೆ ತೊಂದರೆಯುಂಟುಮಾಡಿದರು.

**ಪ್ರಶ್ನೆ** : ನಿಮ್ಮ ಕಾದಂಬರಿ 'ಪ್ರವಾಸಮ್' ಇತ್ತೀಚೆಗೆ ಬಿಡುಗಡೆಯಾಯಿತೆಂದು ಕೇಳಿದ್ದೇನೆ. ಆ ಕಾದಂಬರಿಯ ಬಗ್ಗೆ ಸ್ವಲ್ಪ ಹೇಳುತ್ತೀರಾ ?

**ಉತ್ತರ** : ಕಳೆದ ಶತಮಾನದ ಆರಂಭದಲ್ಲಿ ಮಲಯಾಳಿಗಳು ಜೀವನೋಪಾಯಕ್ಕಾಗಿ ದೇಶವನ್ನು ಬಿಟ್ಟು ಹೊರಗೆ ಹೋಗತೊಡಗಿದರು. ಮೊದಮೊದಲು ಅವರ ಲಕ್ಷ್ಯ ಬರ್ಮಾ, ಸಿಲೋನ್ (ಈಗ ಶ್ರೀಲಂಕೆ) ಮತ್ತು ಸಿಂಗಾಪೂರವಾಗಿತ್ತು. ಆನಂತರ, ಅರವತ್ತರ ದಶಕದಲ್ಲಿ ಕೊಲ್ಲಿ ರಾಷ್ಟ್ರಗಳಿಗೆ ಜನರು ಪ್ರವಾಹೋಪಾದಿಯಲ್ಲಿ ಹರಿಯಲಾರಂಭಿಸಿದರು. ಈಗ ಅಲ್ಲಿ ೧೫ಲಕ್ಷಕ್ಕೂ ಮಿಕ್ಕಿ ಮಲಯಾಳಿಗಳು ದುಡಿಯುತ್ತಿದ್ದಾರೆ. ಆನಂತರ ವಲಸೆಯ ಗುರಿ ಆಸ್ಟ್ರೇಲಿಯ, ಕೆನಡಾ ಮತ್ತು ಯು.ಎಸ್.ಎ.ಗಳಾದವು. ಸಾವಿರಾರು ನರ್ಸ್‌ಗಳು, ಡಾಕ್ಟರ್ - ಎಂಜಿನಿಯರ್‌ಗಳು ಆ ದೇಶಗಳಿಗೆ ಹೋಗಿ ಈಗ ನೆಲೆಸಿದ್ದಾರೆ. ಈಗ ಅವರು ಕೇರಳಿಗರಾಗಿ ಉಳಿದಿಲ್ಲ. ಅವರಿಗೆ ಮನೆಯೇ ಅವರ ಜಗತ್ತಾಗಿಬಿಟ್ಟಿದೆ. 'ಪ್ರವಾಸಮ್' ಅವರ ಕುರಿತಾದ ಒಂದು ಕಾದಂಬರಿ. ಈ ಕಾದಂಬರಿಯನ್ನು ಮುಗಿಸಲು ನಾನು ಏಳು ವರ್ಷ ತೆಗೆದುಕೊಂಡಿದ್ದೇನೆ. ಅದು ಬಿಡುಗಡೆಯಾಗಿ ಕೆಲವೇ ದಿನಗಳ ಒಳಗೆ ೬೦೦೦ ಪ್ರತಿಗಳು ಮಾರಾಟವಾಗಿ ಹೋದವು. ಕೇರಳದ ಪುಸ್ತಕ ಮಾರಾಟದಲ್ಲಿ ಒಂದು ರೀತಿಯ ದಾಖಲೆಯನ್ನೇ ಇದು ಸೃಷ್ಟಿಸಿದೆ.

**ಪ್ರಶ್ನೆ** : ನೀವು ಕರಾವಳಿ ಕರ್ನಾಟಕಕ್ಕೆ ಮೊದಲ ಬಾರಿ ಬಂದಿದ್ದೀರಿ. ಈ ಜಾಗ ನೋಡಿ ನಿಮಗೆ ಏನನ್ನಿಸುತ್ತದೆ ?

**ಉತ್ತರ** : ತುಂಬ ಖುಷಿಯೆನ್ನಿಸುತ್ತಿದೆ.


ಸಂದರ್ಶಕರು : ಪಾರ್ವತಿ ಜಿ. ಐತಾಳ್
'ಸರಗಂಗಾ', ಬಸರೂರು ರಸ್ತೆ
ಕುಂದಾಪುರ - ೫೭೬ ೨೦೧

# ಧರ್ಮ ಮತ್ತು ರಾಜಕೀಯ

ವಿ. ಎನ್. ಲಕ್ಷ್ಮೀನಾರಾಯಣ

ಹಿಂದೂಗಳ ನಂಬಿಕೆಯಂತೆ ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು ಲಯಗಳಿಗೆ ಕಾರಣರಾಗಿರುವ ದೇವರುಗಳು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರು. ಇವರನ್ನು ತ್ರಿಮೂರ್ತಿಗಳೆಂದು ಕರೆಯುವುದು ವಾಡಿಕೆ. ಇವರಲ್ಲಿ ಬ್ರಹ್ಮನಿಗೆ ನಿತ್ಯಪೂಜೆಯಿಲ್ಲ, ಗುಡಿ, ದೇವಸ್ಥಾನಗಳಿಲ್ಲ. ಧಾರ್ಮಿಕ ಕ್ರಿಯೆಗಳಲ್ಲಿ ಬ್ರಹ್ಮಕಳಶ, ಬ್ರಹ್ಮೋತ್ಸವ, ಬ್ರಹ್ಮಗೋಪುರ ಮುಂತಾದ ಪದಗಳು ಎಲ್ಲಕ್ಕಿಂತ ದೊಡ್ಡದು ಎಂಬ ಅರ್ಥದಲ್ಲಿ ಬಳಕೆಯಾಗುತ್ತವೆಯೇ ಹೊರತು ಪೂಜಾರ್ಹವಾದ ದೇವರು ಎಂದಲ್ಲ. ವೇದಾಂತದಲ್ಲಿ ಬಳಕೆಯಾಗುವ ಬ್ರಹ್ಮನಿಗೂ ಈ ಬ್ರಹ್ಮನಿಗೂ ಸಂಬಂಧವಿಲ್ಲ. ಕುಶಲಕರ್ಮಿಗಳು ಮತ್ತು ಸೃಷ್ಟಿಕ್ರಿಯೆಗೆ ಸಂಬಂಧಿಸಿದ ಕಸುಬುಗಳ ಜನರು ಮಾತ್ರ ಬ್ರಹ್ಮನನ್ನು ಪೂಜಿಸುವ ಸಂಪ್ರದಾಯ ಅಲ್ಲಲ್ಲಿ ಇದೆ. ಬ್ರಹ್ಮನು ವಿಷ್ಣುವಿನ ಹೊಕ್ಕಳಿನಲ್ಲಿನ ಕಮಲದಿಂದ ನೇರವಾಗಿ ಹುಟ್ಟಿದವನು. ನಾಲ್ಕು ಮುಖದ ಮಗನಾಗಿ, ತಂದೆಯ ಆಜ್ಞಾಧಾರಕನಾಗಿ ಸೃಷ್ಟಿಮಾಡುವವನು. ಜೀವಿಗಳ ಹಣೆಬರಹವನ್ನು ಬರೆದು ಅವುಗಳ ಜೀವನದ ಆಗುಹೋಗುಗಳನ್ನು ನಿರ್ಧರಿಸಿ ಸೀಲು ಮಾಡುವ ವಿಧಿ. ವಿಷ್ಣು ಕೊಟ್ಟ ಜವಾಬ್ದಾರಿಯನ್ನು ನಿರ್ವಹಿಸುವ, ಸ್ವತಂತ್ರ ಅಧಿಕಾರವಿಲ್ಲದ ಅಧಿಕಾರಿ. ಸಂಪತ್ತಿನ ಗೊಡವೆಯಿಲ್ಲದ, ಆಭರಣವಿಲ್ಲದ, ಆಯುಧವಿಲ್ಲದ ದೇವರು. ತಾನೇ ಸೃಷ್ಟಿಸಿದ ಸರಸ್ವತಿಯ ರೂಪಕ್ಕೆ ಮರುಳಾಗಿ ಮಗಳನ್ನೆ ಮದುವೆಯಾದವನೆಂಬ ಅಪಖ್ಯಾತಿಗೆ ಗುರಿಯಾದವನು. ಈತನ ಲೋಕ ಬ್ರಹ್ಮಲೋಕ. ಹೆಂಡತಿಯಾದ ಶಾರದೆ ವಿದ್ಯೆಯ ಅಧಿದೇವತೆ. ಮಗ ನಾರದ, ಸಂಗೀತಗಾರನಾಗಿ ತನ್ನ ತಾತನಾದ ವಿಷ್ಣುವನ್ನು ಸದಾ ಸ್ತುತಿಸುತ್ತಾ ತ್ರಿಲೋಕಗಳಲ್ಲಿ, ಕೆಲವು ಸಲ ಭೂಮಂಡಲದಲ್ಲೂ ಸಂಚರಿಸುವವನು. ಲೋಕಕಲ್ಯಾಣಕ್ಕಾಗಿ ಕಲಹ ಹತ್ತಿಸಿ ಜಾರಿಕೊಳ್ಳುವ ಜಾಣ ಮಹರ್ಷಿ. ಇವಿಷ್ಟು ಸ್ಥೂಲವಾಗಿ ಬ್ರಹ್ಮದೇವರ ವಿವರ.

ವೈಕುಂಠದ ಹಾಲ್ಗಡಲಿನಲ್ಲಿ ಆದಿಶೇಷನೆಂಬ ಹಾವಿನ ಮೇಲೆ ಮಲಗಿ ಯೋಗನಿದ್ರೆಯ ಎಚ್ಚರದಲ್ಲೆ ಸೃಷ್ಟಿಯ ಆಗುಹೋಗುಗಳನ್ನು ಗಮನಿಸುತ್ತಿರುವ ದೇವರು ವಿಷ್ಣು. ಜಗತ್ತಿನ ಯಥಾಸ್ಥಿತಿಯನ್ನು ಕಾಪಾಡುವ ಜವಾಬ್ದಾರಿ ಇವನ ಹೆಗಲಮೇಲಿದೆ. ತಂದೆತಾಯಿಗಳ ಹಂಗಿಲ್ಲದ ಸ್ವಯಂಭೂ ಈತ. ಶಂಖ, ಚಕ್ರ, ಗದೆ ಮತ್ತು ಕಮಲದ ಹೂವನ್ನು ಸದಾ ನಾಲ್ಕು ಕೈಗಳಲ್ಲಿ ಹಿಡಿದ ದೇವರು. ಜಗತ್ತಿನಲ್ಲಿ ಅಂದರೆ, ಭರತಖಂಡದಲ್ಲಿ ಅಧರ್ಮ ಜಾಸ್ತಿಯಾಗಿ, ಧರ್ಮ ಕ್ಷೀಣಿಸಿದಾಗಲೆಲ್ಲಾ ಅವತಾರವೆತ್ತಿ ಧರ್ಮ-ಅಧರ್ಮದ ಸಮತೋಲನವನ್ನು ಕಾಯುವುದು, ಇವನು ತನ್ನ ಮೇಲೆ ತಾನೇ ಹಾಕಿಕೊಂಡ ಹೊಣೆ. ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವುದೂ ಈತನ ಕೆಲಸವೇ. ತನ್ನನ್ನು ನಂಬಿದವರಿಗೆ ಕಷ್ಟಬಂದು, ಅವರು ಸಹಾಯಕ್ಕಾಗಿ ಮೊರೆಯಿಟ್ಟಾಗ ಗರುಡವಾಹನನಾಗಿ ಸ್ಥಳಕ್ಕೆ ಧಾವಿಸಿ ಜಾಣ್ಮೆಯಿಂದ, ಚತುರೋಪಾಯಗಳನ್ನು ಬಳಸಿ ಅವರನ್ನು ಕಷ್ಟದಿಂದ ಪಾರುಮಾಡುವ ಆಪದ್ಬಂಧು. ತನ್ನನ್ನು ನಂಬಿದ ದೀನ ದಲಿತರ ಉದ್ಧಾರಕ. ದೇವತೆಗಳ ಪಕ್ಷಪಾತಿ, ರಾಕ್ಷಸರ ವೈರಿ. ಸಂಪತ್ತು ಐಶ್ವರ್ಯಗಳ ಅಧಿದೇವತೆಯಾದ ಲಕ್ಷ್ಮೀ ಈತನ ಮಡದಿ ಹಾಗೂ ಸೇವಕಿ. ಲಕ್ಷ್ಮೀ ಬಳಿಯಿರುವುದರಿಂದ ವಿಷ್ಣು ಶ್ರೀಮಂತನೋ ಅಥವಾ ವಿಷ್ಣುವೇ ಶ್ರೀಮಂತ ದೇವರಾದ್ದರಿಂದ ಲಕ್ಷ್ಮೀ ಈತನ ಮಡದಿಯಾಗಿದ್ದಾಳೋ ಹೇಳುವುದು ಕಷ್ಟ. ಹೇಗೇ ಆದರೂ ವಿಷ್ಣುವಿನ ಬಳಿ ಅತ್ಯಂತ ಬೆಲೆಬಾಳುವ ಮುತ್ತು ರತ್ನಗಳು, ವಜ್ರ-ವೈಡೂರ್ಯಗಳಿಂದ ಖಚಿತವಾದ ಆಭರಣಗಳಿವೆ. ಶತ್ರುಗಳಿಗೆ ಬಲವಾದ ಹೊಡೆತ ಕೊಡಬಲ್ಲ ಗದೆ, ಬೂಮರ್‍ಯಾಂಗನ್ನು ಹೋಲುವ ಸುದರ್ಶನಚಕ್ರ, ಈತನ ಜಾಣ್ಮೆ-ಶಕ್ತಿಗಳಿಗೆ ಸರಿಹೊಂದುವಂತಿವೆ. ಸಮಯ-ಸಂದರ್ಭಗಳಿಗೆ ತಕ್ಕಂತೆ ಆಮೆ, ಮೀನು, ಹಂದಿ, ಭಯಂಕರ ರೂಪದ ನರಸಿಂಹ, ಕೊಡಲಿ ಹಿಡಿದ



ವೀರಬ್ರಾಹ್ಮಣ, ದಾನ ಬೇಡಿ ಮೋಸ ಮಾಡುವ ಕುಳ್ಳ ವಟು, ಬಲಿಷ್ಠ ಬಿಲ್ಲಾಳು, ಮನಮೋಹಕ ರಾಜತಂತ್ರಿ, ಪತಿನಿಷ್ಠ ಹೆಂಗಸರ ಶೀಲ ಕೆಡಿಸುವ ದಿಗಂಬರ, ವಿಧ್ವಂಸಕನಾದ ಭಯಂಕರ ರೂಪದ ಅಶ್ವಾರೋಹಿ – ಹೀಗೆ ಹತ್ತು ಅವತಾರಗಳನ್ನೆತ್ತಿ ಭೂಮಂಡಲದ ಒಂದು ಸಣ್ಣ ಭಾಗವಾದ ಭರತಖಂಡದಲ್ಲಿ ಧರ್ಮಸಂಸ್ಥಾಪನೆ ಮಾಡಿದ ಬಲಿಷ್ಠ ದೇವರು. ಜಗನ್ಮೋಹಿನಿ, ಮೋಹಿನಿ ಮುಂತಾಗಿ ವೇಷ ಹಾಕಿಕೊಂಡು ರಾಕ್ಷಸರನ್ನು ಮೋಸಗೊಳಿಸುವ ಚಾಣಾಕ್ಷ. ತಾನೇ ಕೊಟ್ಟ ವಚನವನ್ನು ಮುರಿದಾದರೂ ತನ್ನ ಗುರಿ ಸಾಧಿಸಿಕೊಳ್ಳುವವ. ಸಮಯ ಬಂದಾಗ ಅರ್ಧಸತ್ಯ, ಜಾಣ್ಮೆಯ ಸುಳ್ಳನ್ನು ಬಳಸಲು ಸ್ವಲ್ಪವೂ ಹಿಂಜರಿಯದ ರಾಜಕಾರಣಿ. ಅಸುರರ ತಂತ್ರಗಳನ್ನು ನಿಷ್ಫಲಗೊಳಿಸುವಂಥ ಮಾಯಾವಿ. ಇಂಥ ವಿಷ್ಣುವಿನ ಎಲ್ಲ ಅನೈತಿಕ ತಂತ್ರಗಳೂ, ಧರ್ಮವನ್ನು ಎತ್ತಿಹಿಡಿಯುವ, ಅಧರ್ಮವನ್ನು ನಾಶಪಡಿಸುವ ಏಕೋದ್ದೇಶಕ್ಕಾಗಿ ಬಳಕೆಯಾಗುತ್ತವೆ. ಹೀಗಾಗಿ ಈತನ ರಣತಂತ್ರ-ವ್ಯೂಹಗಳು ದೋಷಗಳೆನಿಸದೆ, ಸಮರ್ಥನೀಯವೆಂದು ಭಾಗವತ, ವಿಷ್ಣುಪುರಾಣಗಳ ರಚನಕಾರರು ಭಕ್ತಜನರನ್ನು ನಂಬಿಸುತ್ತಾರೆ. ಧರ್ಮ-ಅಧರ್ಮ, ನ್ಯಾಯ-ಅನ್ಯಾಯಗಳ ವಿವೇಚನೆ ಮತ್ತು ನಿಷ್ಕರ್ಷೆಯ ಆಧಾರವೂ ಅಂತಿಮವಾಗಿ ವಿಷ್ಣುವೇ. ಆದ್ದರಿಂದ ಎಲ್ಲ ರೀತಿಯಿಂದಲೂ ಅತ್ಯಂತ ಬಲಶಾಲಿಯಾದ ವಿಷ್ಣುವನ್ನು ಎದುರು ಹಾಕಿಕೊಂಡವರು ಬದುಕಿ ಉಳಿಯುವುದು ಅಸಾಧ್ಯ. ವಿಷ್ಣುದ್ವೇಷಿ ಅಲ್ಪಾಯುಷಿ ಎನ್ನುವ ಜನರ ಅನುಭವದ ಮಾತು ಇದನ್ನೇ ಹೇಳುತ್ತದೆ.

ರಾಜ ಮಹಾರಾಜರು, ವಿಷ್ಣುವಿನ ಅಂಶವನ್ನು ತಮ್ಮಲ್ಲಿ ಇಟ್ಟುಕೊಂಡಿರುವುದರಿಂದ ಭೂಮಿಯ ಮೇಲೆ ಜನರನ್ನು ಆಳುವ ಅಧಿಕಾರ ಪಡೆದವರು. ಅವರ ಕಿರೀಟ, ಸಂಪತ್ತು, ಆಭರಣ, ವೇಷಭೂಷಣಗಳು, ಆಯುಧಗಳು ವಿಷ್ಣುವನ್ನು ನೆನಪಿಸುವಂತಿದ್ದರೆ, ಅವರ ಮಡದಿಯರು ಸಾಧ್ಯವಾದ ರೀತಿಯಲ್ಲೆಲ್ಲಾ ಲಕ್ಷ್ಮಿಯನ್ನು ತಮ್ಮ ಮಾದರಿಯನ್ನಾಗಿ ಸ್ವೀಕರಿಸಿದ್ದಾರೆ. ಮದುವೆಯಾಗುವಾಗ ಹೆಣ್ಣು-ಗಂಡುಗಳನ್ನು ರಾಜರಾಣಿಯರಂತೆ ಸಿಂಗರಿಸಿ ಲಕ್ಷ್ಮಿ ಮತ್ತು ನಾರಾಯಣರೊಂದಿಗೆ ಸಮೀಕರಿಸುವುದು ಈಗಲೂ ರೂಢಿಯಲ್ಲಿದೆ. ಯಾವುದೇ ಬಗೆಯ ಸಂಪತ್ತನ್ನು, ಭೋಗ ಸಾಧನಗಳನ್ನು ಮತ್ತು ಮೇಲ್ಬುಗೈ-ಸಿದ್ಧಿಗಳನ್ನು ಧಾನ್ಯಲಕ್ಷ್ಮಿ, ಗೋಲಕ್ಷ್ಮಿ, ಭಾಗ್ಯಲಕ್ಷ್ಮಿ, ಜಯಲಕ್ಷ್ಮಿ, ವರಲಕ್ಷ್ಮಿ ಮುಂತಾಗಿ ಲಕ್ಷ್ಮಿಯೊಂದಿಗೆ ಸಮೀಕರಿಸುವುದು ಬಹು ಜನಪ್ರಿಯವಾದ ಪದ್ಧತಿ. ಈಗೀಗ ಸಾಯಿಲಕ್ಷ್ಮಿಯೂ ಬಂದಿದ್ದಾಳೆ. ತನ್ನನ್ನು ನಂಬಿದ ದೀನ ದಲಿತರ ಉದ್ಧಾರಕನಾದ ವಿಷ್ಣುವನ್ನು ಕೆಲವು ಸಲ ದರಿದ್ರ ನಾರಾಯಣನೆಂದು ಕರೆದರೂ, ಲಕ್ಷ್ಮಿಯನ್ನು ಮಾತ್ರ ದರಿದ್ರಲಕ್ಷ್ಮಿ, ದೀನಲಕ್ಷ್ಮಿ, ದಲಿತಲಕ್ಷ್ಮಿ ಎಂದು ಅಪ್ಪಿ ತಪ್ಪಿಯೂ ಸಂಬೋಧಿಸಿರುವುದು ಎಲ್ಲಿಯೂ ಕಂಡುಬರುವುದಿಲ್ಲ. ಆದರೆ ಬಡವರ ಮನೆಗಳಲ್ಲೇ ಲಕ್ಷ್ಮಿಯ ಹೆಸರಿನ ಹೆಣ್ಣು ಮಕ್ಕಳು ಹೆಚ್ಚಾಗಿ ದೊರೆಯುವುದು ಒಂದು ವಿಪರ್ಯಾಸ.

ಸಂಘಪರಿವಾರದ ಮಾತೃಸಂಸ್ಥೆಯಾದ ರಾಷ್ಟ್ರೀಯ ಸ್ವಯಂಸೇವಕ ಸಂಘದ ಕೇಂದ್ರೀಯ ನಿಯಂತ್ರಣ, ಮೊದಲಿನಿಂದಲೂ ಚಿತ್ಪಾವನರೆಂಬ ಮರಾಠಿ ವೈಷ್ಣವ ಬ್ರಾಹ್ಮಣರ ಕೈಯಲ್ಲಿದೆ. ವಿಷ್ಣುವಿನ ಅಧಿಕಾರ ರಚನೆ, ಕಾರ್ಯತಂತ್ರ, ಧೋರಣೆಗಳು ಸಂಘಪರಿವಾರದ ಸಂಘಟನೆಗಳಿಗೆ ಮಾದರಿಯಾಗಿರುವುದು ಆಕಸ್ಮಿಕವಲ್ಲ. ಆರೆಸ್ಸೆಸ್ಸಿನ ಕಚೇರಿಗಳು ವಿಷ್ಣುವಿನ ಹೆಸರಿನಿಂದಲೇ ಗುರುತಿಸಲ್ಪಡುತ್ತವೆ. ರಾಮನ ಹೆಸರಿನ ಕಾರ್ಯಕ್ರಮಗಳೆಲ್ಲಾ ಧರ್ಮ ಮತ್ತು ರಾಜಕೀಯಗಳನ್ನು ಸಂಸ್ಕೃತಿಯ ಹೆಸರಿನಲ್ಲಿ ಗೊಂದಲಮಯವಾಗಿ ಬೆರೆಸುವ ಆರೆಸ್ಸೆಸ್ಸಿನ ಸ್ಥಾಯಿ ರಣತಂತ್ರದ ಮಾದರಿಗಳು.

ಸೃಷ್ಟಿಯ ಲಯ ಅಥವಾ ನಾಶದ ಹೊಣೆ ಹೊತ್ತ ದೇವರು ಮಹೇಶ್ವರ. ಇವನ ತಂದೆತಾಯಿಗಳು ಯಾರೆಂದು ತಿಳಿಯದು. ವಿಷ್ಣುವಿನ ಆರಾಧಕರ ದೃಷ್ಟಿಯಲ್ಲಿ ಈತ ವಿಷ್ಣುವಿಗೆ ಅಧೀನ. ಉಳಿದಂತೆ ಸ್ನೇಹಿತ. ಜಡೆಯಲ್ಲಿ ಗಂಗೆ ಇರುವುದರಿಂದ ಗಂಗಾಧರ. ಮುಡಿಯಲ್ಲಿ ಚಂದ್ರನನ್ನು ಧರಿಸಿರುವುದರಿಂದ




ಚಂದ್ರಮೌಳಿ. ಈತನ ನೆಲೆ ಕೈಲಾಸಪರ್ವತ. ಬೂದಿ ಬಳಿದುಕೊಂಡು, ಬ್ರಹ್ಮನ ತಲೆಬುರುಡೆಯಲ್ಲಿ ಮಾಡಿಕೊಂಡ ಬಟ್ಟಲು ಹಿಡಿದು ಭಿಕ್ಷೆಯೆತ್ತಿ ಜೀವನ ನಡೆಸುವ ಅಲೆಮಾರಿ ಶಿವನಿಗೆ ಪ್ರಿಯವಾದ ಜಾಗ ಸ್ಮಶಾನ. ವನ್ಯಜೀವನಕ್ಕೆ ಸಂಬಂಧಿಸಿದ ಆನೆಯ ಚರ್ಮ, ರುದ್ರಾಕ್ಷಿ, ಹಾವು ಚೇಳುಗಳು ಈತನ ವೇಷ-ಭೂಷಣದ ಸಾಮಗ್ರಿಗಳು. ಇವನ ವಾಹನ ನಂದಿ. ಭೂತ ಪ್ರೇತಗಳು ಈತನ ಸಹಚರರು ಹಾಗೂ ಸೇವಕರು. ಪರ್ವತ ಪ್ರದೇಶಕ್ಕೆ ಸೇರಿದ ಗೌರಿ, ತಂದೆಯ ಇಷ್ಟಕ್ಕೆ ವಿರೋಧವಾಗಿ ಬಡ ದೇವರಾದ ಈತನನ್ನು ವರಿಸಿ ಮಡದಿಯಾದವಳು. ನವಿಲುವಾಹನನಾದ ಸುಬ್ರಹ್ಮಣ್ಯ, ಗೌರಿಯ ದೇಹದ ಬೆವರುಮಣ್ಣಿನಿಂದ ನೇರವಾಗಿ ಹುಟ್ಟಿದ, ಇಲಿಯವಾಹನನಾದ, ಆನೆ ಮುಖದ ಗಣೇಶ ಇವರಿಬ್ಬರ ಮಕ್ಕಳು. ಚರ್ಮವಾದ್ಯಗಳನ್ನು ಬಳಸುವ ನೃತ್ಯ, ಲಯ ಮತ್ತು ವ್ಯಾಕರಣದ ಬೀಜಾಕ್ಷರಗಳ ಜನಕ ಹಾಗೂ ಅಧಿದೇವತೆ ಪರಮೇಶ್ವರ. ತ್ರಿಶೂಲ, ಬಿಲ್ಲುಗಳಂಥ ಬುಡಕಟ್ಟು ಆಯುಧಗಳನ್ನು ಅಪರೂಪಕ್ಕೆ ಬಳಸುವ ಸಂಯಮ, ಎದುರಾಳಿಯನ್ನು ಸುಟ್ಟು ಭಸ್ಮ ಮಾಡುವಂಥ ಉಗ್ರ ಕೋಪ, ವಿವೇಚನಾರಹಿತ ದಯೆ, ಈತನ ವಿಶೇಷ ಗುಣಗಳು. ಹೆಂಡ, ಹೆಂಗಸರಿಗೆ ಸುಲಭವಾಗಿ ಮನಸೋತು, ನಾನಾ ಬಗೆಯ ಕಷ್ಟಗಳಿಗೆ ಸಿಲುಕುವ ರಾಕ್ಷಸರು ಈಶ್ವರನ ಪರಮ ಭಕ್ತರು. ದೇವತೆಗಳ ಪಕ್ಷಪಾತಿಯಾದ ವಿಷ್ಣುವಿನ ಕಪಟ-ಜಾಣ್ಮೆಗಳಿಗೆ ಬಲಿಯಾಗುವ ಇವರಿಗೆ ವಿಶೇಷ ಶಕ್ತಿಗಳು ದೊರೆಯುವುದೇ ಶಿವನಿಂದ. ತನ್ನ ಆರಾಧಕರು ಏನನ್ನು ಕೇಳಿದರೂ ಹಿಂದೆ ಮುಂದೆ ನೋಡದೆ ವರ ಕೊಡುವ ಅತ್ಯಂತ ಕರುಣಾಳು ದೇವರು ಈಶ್ವರ. ಅದರಿಂದಾಗಿ ಎಷ್ಟೋ ಸಲ ತಾನೇ ಕಷ್ಟಕ್ಕೆ ಸಿಲುಕಿ ವಿಷ್ಣುವಿನ ಸಹಾಯದಿಂದ ಬಚಾವಾಗುವಂಥ ಮುಗ್ಧ ದೇವರು. ಶಿವಭಕ್ತರು, ಆಸ್ತಿಕರ ಪಾಲಿಗೆ ಜೀವಸೃಷ್ಟಿಗೆ ಪರಸ್ಪರ ಪೂರಕವಾದ ಯೋನಿ-ಲಿಂಗಗಳನ್ನು ಪ್ರತಿನಿಧಿಸುವ ಪೂರ್ಣದೇವರಾಗಿ, ಗಂಡು-ಹೆಣ್ಣಿನ ಲಿಂಗಸಾಮರಸ್ಯವನ್ನು ಸಾಂಕೇತಿಕವಾಗಿ ಸಾರುವ ಅರ್ಧನಾರೀಶ್ವರನಾಗಿ ಮಹಿಳಾ ವಿಮೋಚನೆಯ ವೈಚಾರಿಕರಿಗೂ ಪ್ರಿಯನಾದವನು. ಶಿವೆ, ಗೌರಿ, ಪಾರ್ವತಿ, ದುರ್ಗೆ ಮುಂತಾದ ಹೆಸರುಗಳಲ್ಲಿ ಪೂಜೆಗೊಳ್ಳುವ ಮಹೇಶ್ವರನ ಮಡದಿ ಅಥವಾ ಮಡದಿಯರು ಸಮಾಜದ ಎಲ್ಲ ಸ್ತರದ ಆಸ್ತಿಕರಿಂದ ನಾನಾ ರೀತಿಗಳಲ್ಲಿ ಪೂಜೆಗೊಳ್ಳುವ ಶಕ್ತಿ ಸ್ವರೂಪಿಣಿಯರು. ಇವರ ಭಕ್ತರಲ್ಲಿ ಮಾಂಸಾಹಾರಿಗಳು, ಸಸ್ಯಾಹಾರಿಗಳಿದ್ದಾರೆ. ಮೇಲ್ಜಾತಿ-ಕೆಳಜಾತಿಗಳ ಶಿಷ್ಟರು, ಪರಿಶಿಷ್ಟರಿದ್ದಾರೆ. ಸೌಮ್ಯ ಮತ್ತು ಉಗ್ರದೇವತೆಗಳ ಆರಾಧಕರು ಸಮಾನವಾಗಿ ಶಿವ-ಪಾರ್ವತಿಯರನ್ನು ವಿವಿಧ ರೂಪಗಳಲ್ಲಿ ಪೂಜಿಸುತ್ತಾರೆ. ವಿಷ್ಣುವಿನಂತೆ ಕೇವಲ ಶಿಷ್ಟ ಅಥವಾ ಬ್ರಾಹ್ಮಣೀಕರಣಗೊಂಡ ಜಾತಿಗಳ ಜನರಿಂದ ಮಾತ್ರ ಪೂಜೆಗೊಳ್ಳದೆ, ಬ್ರಾಹ್ಮಣರು, ಶೂದ್ರರು ಮತ್ತು ಶೂದ್ರಾತಿಶೂದ್ರರಿಂದಲೂ ಅವರದೇ ಆದ ರೀತಿಗಳಲ್ಲಿ ಆರಾಧನೆಗೊಳ್ಳುವ ದೇವರು ಪರಮೇಶ್ವರ.

ಚಾರಿತ್ರಿಕ ಮತ್ತು ರಾಜಕೀಯ ಕಾರಣಗಳಿಗಾಗಿ ಮೊಗಲರು, ವಿಷ್ಣುಭಕ್ತರು ಮತ್ತು ಶಿವಭಕ್ತರಾಗಿದ್ದ ರಾಜರು ಹಾಗೂ ಪಾಳೆಯಗಾರರಿಗೆ ಶತ್ರುಗಳಾಗಿದ್ದರು. ಈ ಕಾರಣಕ್ಕಾಗಿ ಹಿಂದೂ ಸೈನಿಕರು ಮಹಮದೀಯರ ವಿರುದ್ಧ ಯುದ್ಧಮಾಡುವಾಗಲೆಲ್ಲ ತಮ್ಮನ್ನು ಹುರಿದುಂಬಿಸಿಕೊಳ್ಳಲು ಉಗ್ರಕೋಪಕ್ಕೆ ಹೆಸರಾದ ಶಿವನ ಹೆಸರೆತ್ತಿ ಹರಹರ ಮಹಾದೇವ ಎಂದು ಉದ್ಘೋಷಿಸಿಕೊಳ್ಳುತ್ತಿದ್ದರು. ಆದರೆ ಸಂಘಪರಿವಾರ ಇದನ್ನು ಜನಾಂಗ ದ್ವೇಷವಾಗಿ, ಮತ-ಧರ್ಮದ ದ್ವೇಷದ ನೆಲೆಯಲ್ಲಿ ನೋಡುತ್ತದೆ. ರಾಜಕೀಯ ಶತ್ರುಗಳ ಭಾವಾವೇಶವನ್ನು ಕೋಮುವಾದವನ್ನಾಗಿ ಪರಿವರ್ತಿಸಿಕೊಳ್ಳುತ್ತದೆ. ಮಹಮದೀಯ ಆಕ್ರಮಣಕಾರರಿಂದ ನಡೆದ ದೇವಸ್ಥಾನಗಳ ಲೂಟಿ ಮತ್ತು ವಿಗ್ರಹಭಂಜಕತೆಯನ್ನು ಹಿಂದೂಗಳ ಮೇಲಿನ ದ್ವೇಷವೆಂದು ಅರ್ಥೈಸುತ್ತದೆ. ಶಿವಸೇನೆ ಆರೆಸ್ಸೆಸ್ಸಗಳು ಶೂದ್ರಮುಖವಾದ ಶಿವನಿಷ್ಠ ಸಂಘಟನೆಗಳು. ಇವೂ ಮಹಾರಾಷ್ಟ್ರದಲ್ಲೆ ಸಂಘಟಿತವಾಗಿರುವುದೂ, ಮಹಮದೀಯರನ್ನು ಅಸಹನೆಯಿಂದ ಕಾಣುವುದೂ ಗಮನಾರ್ಹ ಅಂಶ. ಕರ್ನಾಟಕದಲ್ಲಿ ಸಂಘಪರಿವಾರದೊಂದಿಗೆ ತಮ್ಮನ್ನು ಗುರುತಿಸಿಕೊಳ್ಳುವ ಶೈವರು ಮತ್ತು ವೀರಶೈವರು ತಾವು ಹಿಂದೂಧರ್ಮದ ಒಂದು ಭಾಗವೆನ್ನುತ್ತಾರೆ. ವೈಷ್ಣವ ಸಂಪ್ರದಾಯ ಮತ್ತು ಬ್ರಾಹ್ಮಣೀಕೃತ ಜೀವನಕ್ರಮಗಳನ್ನು ಹೋಲುವ ಚಿಂತನೆ, ಸಾಮಾಜಿಕ

ರೀತಿಗಳ ಬಗ್ಗೆ ಮೃದುಧೋರಣೆಯನ್ನು ಅನುಸರಿಸುತ್ತಾರೆ. ಹವನ, ಹೋಮಗಳನ್ನು ಆಚರಿಸುತ್ತಾರೆ. ಶಿವಸೇನೆ ಅಲ್ಲದೆ, ಸಂಘಪರಿವಾರಕ್ಕೆ ಸೇರಿದ ತ್ರಿಶೂಲ ಹಿಡಿದ ಜನರೂ ವಿಷ್ಣುವಿಗೆ ಅಧೀನನಾದ ಶಿವನನ್ನು ಆರಾಧಿಸುವ ಜನರೇ. ಆದರೆ, ದಲಿತರು ಮತ್ತು ಮಹಮದೀಯ ಸೂಫೀಸಂತರ ಬಗ್ಗೆ ಸಹಾನುಭೂತಿಯುಳ್ಳ ವೀರಶೈವರು ನಂಬಿಕೆಯಲ್ಲಿ ಶೈವರೇ ಆದರೂ, ತಾವು ಹಿಂದೂಗಳಲ್ಲವೆಂದು ಹೇಳುತ್ತಾರೆ. ತಮ್ಮನ್ನು ಲಿಂಗಾಯತರೆಂದು ಕರೆದುಕೊಳ್ಳಲು ಬಯಸುತ್ತಾರೆ. ವಿಷ್ಣುವಿನ ವಿವಿಧ ರೂಪಗಳಾದ ರಾಮ, ಕೃಷ್ಣ ಮುಂತಾದ ಬಲಾಢ್ಯ ದೇವರುಗಳ ಬ್ರಾಹ್ಮಣಧರ್ಮೀಯ ಜೀವನಕ್ರಮಕ್ಕೆ ಪರ್ಯಾಯ ರೂಪಗಳನ್ನು ಪ್ರತಿಪಾದಿಸುತ್ತಾರೆ.

ವಾಲ್ಮೀಕಿಯಿಂದ ಹಿಡಿದು, ವ್ಯಾಸ, ಕಾಳಿದಾಸ ಮೊದಲಾದ ಭಾರತದ ಉದ್ದಗಲಕ್ಕೂ ಹರಡಿರುವ ಕವಿಗಳ ಕಾವ್ಯಗಳಿಗೆ ಆಕರಗಳಾಗಿ, ವಿಷ್ಣು ಮತ್ತು ಅವನ ಅವತಾರಗಳ ಕಥೆಗಳಿವೆ. ಜಯದೇವ, ವಚನಕಾರರು, ಕುಮಾರವ್ಯಾಸ, ಹರಿದಾಸರು, ಮುಂತಾದವರ ಭಕ್ತಿಮೂಲದ ಕೃತಿರಚನೆಗಳಿಗೆ ಆಧಾರವಾಗಿ ವಿಷ್ಣು ಮತ್ತು ಅವನ ಹೆಂಡತಿಯರು ಹಾಗೂ ಸಹಚರರು ಆಧಾರವಾಗಿದ್ದಾರೆ. ವಚನಕಾರರು, ಹರಿಹರ, ರಾಘವಾಂಕ ಮುಂತಾದ ಕವಿಗಳಿಗೆ ಶಿವ ಮತ್ತು ಅವನ ಪರಿವಾರ ಕಾವ್ಯವಸ್ತುವಾಗಿದ್ದಾರೆ. ವಿವಿಧ ಸಾಹಿತ್ಯ ಪ್ರಕಾರಗಳು, ನೃತ್ಯ, ನಾಟಕ, ಚಿತ್ರಕಲೆಗಳಲ್ಲಿ ವಿಷ್ಣು ಮತ್ತು ಪರಮೇಶ್ವರರು ಅವರ ಹೆಂಡತಿ, ಮಕ್ಕಳು ಮತ್ತು ಪರಿವಾರಗಳೊಂದಿಗೆ ಭದ್ರಸ್ಥಾನ ಪಡೆದಿದ್ದಾರೆ. ಉತ್ತರಾದಿ ಸಂಗೀತದಲ್ಲಿ ಕೃಷ್ಣ ಮತ್ತು ಅವನ ಮಡದಿ, ಪ್ರೇಯಸಿಯರ ಗುಣಗಾನ ಮಾಡುವ ರಚನೆಗಳು ಹೇರಳವಾಗಿವೆ. ದಕ್ಷಿಣಾದಿ ಸಂಗೀತದಲ್ಲಿ ವಿಷ್ಣುವಿನ ಅವತಾರಗಳೊಂದಿಗೆ ಪರಮೇಶ್ವರ ಮತ್ತು ಆತನ ಹೆಂಡತಿ-ಮಕ್ಕಳು-ಸಹಚರರ ಮಹಿಮೆಗಳ ಕುರಿತಾದ ಶಿಷ್ಟ ರಚನೆಗಳೂ ಜನಪ್ರಿಯವಾಗಿವೆ. ಮನುಷ್ಯರಿಂದ ಪ್ರತ್ಯೇಕಿಸಿ ಆದರ್ಶೀಕರಿಸಿದ, ತ್ರಿಮೂರ್ತಿಗಳು ಮತ್ತವರ ಕುಟುಂಬಗಳು ಶಿಷ್ಟ ಸಂಸ್ಕೃತಿಯ ಭಾಗವಾಗಿದ್ದಾರೆ. ಅಲೌಕಿಕ ಸಂಬಂಧಗಳ ಉತ್ಪ್ರೇಕ್ಷಿತ, ಸದಾಶಯದ ರೂಪಕಗಳಾಗಿ ಬಿಂಬಿತರಾಗಿದ್ದಾರೆ. ಆದರೆ, ಜಾನಪದ ಸಾಹಿತ್ಯದಲ್ಲಿ, ಶ್ರಮಿಕರು ಮತ್ತು ವ್ಯವಸಾಯ ಸಂಬಂಧಿ ಜನಸಮುದಾಯದ ಪಾಲಿಗೆ, ಎಷ್ಟು ಹಿಗ್ಗಿಸಿದರೂ, ಲೌಕಿಕಬದುಕಿನಿಂದ ಬೇರೆಯಾಗದ, ಮನುಷ್ಯ ಸಂವೇದನೆಗಳಿಗೆ ಹೆಚ್ಚು ಹತ್ತಿರವಾದ ದೇವರುಗಳು, ತ್ರಿಮೂರ್ತಿಗಳ ವಿವಿಧ ರೂಪಗಳಾಗಿ ಚಿತ್ರಿತವಾಗಿದ್ದಾರೆ. ಯಾವುದೋ ಕಾಲದಲ್ಲಿ ಜಾನಪದೀಯ ರಚನೆಗಳೇ ಆಗಿದ್ದಿರಬಹುದಾದ ರಾಮಾಯಣ, ಮಹಾಭಾರತ, ಭಾಗವತ, ಪುರಾಣಗಳ ಮೂಲರೂಪಗಳು ಆಳುವ ವರ್ಗದ ಮತ್ತು ಮೇಲ್ಜಾತಿಗಳ ಯಜಮಾನಿಕೆಯಲ್ಲಿ ಶಿಷ್ಟಸಾಹಿತ್ಯವಾಗಿ ಮಾರ್ಪಾಡಾಗಿರುವುದು ಚರಿತ್ರೆಯ ಅನಿವಾರ್ಯ ಅಂಶ. ಹಾಗೆಯೇ ಯಾವುದೋ ಕಾಲಘಟ್ಟಗಳಲ್ಲಿ ಸಮುದಾಯದ ಒಳಿತಿಗಾಗಿ ಪ್ರಾಣಕೊಟ್ಟ ವೀರರು, ಮುಂದಾಳುಗಳು, ಸಂತರು ಜಾನಪದೀಯ ಕಲ್ಪನೆ-ಆರಾಧನೆಗಳ ಮೂಸೆಯಲ್ಲಿ ವಿವಿಧ ದೇವರುಗಳಾಗಿ, ತ್ರಿಮೂರ್ತಿಗಳಾಗಿ ಧಾರ್ಮಿಕ ಔನ್ನತ್ಯವನ್ನು ಪಡೆದಿದ್ದಾರೆ. ಇವರೇ ಕ್ರಮೇಣ ಆಳುವ ವರ್ಗ ಮತ್ತು ಮೇಲ್ಜಾತಿಗಳ ಕೈಯಲ್ಲಿನ ರಾಜಕೀಯ ಸಾಧನಗಳೂ ಆಗಿರುವುದು ಕೇವಲ ಊಹೆಯಲ್ಲ. ಬ್ರಾಹ್ಮಣಧರ್ಮದ ಆಧಾರಸ್ತಂಭಗಳೆಂದು ನಂಬುವ ವಾಲ್ಮೀಕಿ, ವ್ಯಾಸ, ವಸಿಷ್ಠ, ಮುಂತಾದ ಋಷಿ-ಮುನಿಗಳೆಲ್ಲಾ ವರ್ಣ-ಜಾತಿಗಳ ಕಟ್ಟುಗಳು ಸಡಿಲವಾಗಿದ್ದ ಕಾಲಗಳಲ್ಲಿದ್ದು ಕೃತಿರಚನೆ ಮಾಡಿದ ದಲಿತರೆ. ಅವರೆಲ್ಲಾ ಕಾಲಕ್ರಮೇಣ ಸಾಮಾಜಿಕ ಮೇಲ್‌ಸ್ತರಗಳಿಗೇರಿ, ಊಳಿಗಮಾನ್ಯದ ಶಕ್ತಿ ಕೇಂದ್ರಗಳಾಗಿದ್ದ ರಾಜ ಮಹಾರಾಜರನ್ನು ಬೆಂಬಲಿಸುವ ಧಾರ್ಮಿಕ ಮತ್ತು ಸಾಂಸ್ಕೃತಿಕ ಸಾಹಿತ್ಯದ ರಚನಕಾರರಾಗಿದ್ದಾರೆ. ಆ ಮೂಲಕ ಆಳುವ ವರ್ಗದ ಮೌಲ್ಯಗಳ ಪ್ರತಿಪಾದಕರೆನಿಸಿದ್ದಾರೆ.

**ವಿಶ್ವದ ಪೊಲೀಸೆಂದು, ಪ್ರಜಾಪ್ರಭುತ್ವದ ರಕ್ಷಕನೆಂದು, ಮಾನವಹಕ್ಕುಗಳ ಪ್ರತಿಪಾದಕನೆಂದು ಸಾರುತ್ತಾ ತನ್ನ ದಮನಕಾರಿ ನೀತಿಗಳಿಂದ ಭಯೋತ್ಪಾದಕತೆಯನ್ನು ಹುಟ್ಟುಹಾಕಿದ್ದೆ ಅಮೆರಿಕಾ. ಅದನ್ನು ಈಗಲೂ ಪೋಷಿಸಿ ಬೆಳೆಸುತ್ತಿರುವ ಅಮೆರಿಕಾದ ಸಾಮ್ರಾಜ್ಯಶಾಹಿ ಆರ್ಥಿಕತೆ ಅಮೆರಿಕಾದ ಯುದ್ಧರಾಜಕೀಯದ ಅವಿಭಾಜ್ಯ ಅಂಗ. ಜನಾಂಗೀಯ ದ್ವೇಷ-ಹಿಂಸೆಯ ಆಧಾರದ ಮೇಲೆ ತನ್ನ ಸಾಮ್ರಾಜ್ಯವನ್ನು ಕಟ್ಟಿ ಬೆಳೆಸಿದ ಫ್ಯಾಸಿಸ್ಟ್ ಜರ್ಮನಿಯ ದಕ್ಷತೆ, ಕಾರ್ಯಕ್ಷಮತೆ, ಕ್ರೌರ್ಯಗಳ ಮುಂದುವರಿಕೆ ಅಮೆರಿಕಾದ ಸಾಮ್ರಾಜ್ಯಶಾಹಿ. ಭಾರತದಲ್ಲಿ ಹಿಂದೂಸಂಸ್ಕೃತಿಯ ಪೊಲೀಸೆಂದು, ಬಾಯಲ್ಲಿ ಸ್ವದೇಶೀ ಮಂತ್ರವನ್ನು ಜಪಿಸುತ್ತಾ ಆರ್ಥಿಕವಾಗಿ ಸಾಮ್ರಾಜ್ಯಶಾಹಿಯನ್ನು ಸಮರ್ಥಿಸುವ ಸಂಘಪರಿವಾರಕ್ಕೆ ಈಗಲೂ ಜರ್ಮನಿ, ಅಮೆರಿಕಾಗಳ ಆರ್ಥಿಕ ನೀತಿಗಳೆ ಆದರ್ಶ. ಇಂದಿನ ಭಾರತದ ನಿಜವಾದ ಸಮಸ್ಯೆ ಧರ್ಮ, ಕೋಮುವಾದ, ಭಯೋತ್ಪಾದನೆಯಲ್ಲ, ಸಂಘಪರಿವಾರ ಧರ್ಮ-ಸಂಸ್ಕೃತಿಗಳ ಮುಸುಕಿನಲ್ಲಿ ಮುನ್ನೊತ್ತುತ್ತಿರುವ ಫ್ಯಾಸಿಸಂನ ಆಧುನಿಕ ರೂಪಗಳೇ ಆದ ಬಂಡವಾಳಶಾಹಿ ಮತ್ತು ಸಾಮ್ರಾಜ್ಯಶಾಹಿ.**

ಬುಡಕಟ್ಟು ಸಂಸ್ಕೃತಿಗಳ ಹಿರಿಯರನ್ನು, ಹುತಾತ್ಮರನ್ನು ಪ್ರತಿನಿಧಿಸುವ ದೇವತೆ-ದೇವರುಗಳು, ಮುಖ-ಮೂರ್ತಿಗಳಿಲ್ಲದ ಆದಿಮ ರೂಪಗಳು. ಊಳಿಗಮಾನ್ಯದ ರಾಜ-ರಾಣಿಯರ ವೇಷ-ಭೂಷಣಗಳನ್ನು, ಸೌಂದರ್ಯದ ವಿವರಗಳನ್ನು, ಅವರ ಯುದ್ಧರೀತಿಗಳನ್ನು, ಆಯುಧಗಳನ್ನು ಅನುಕರಿಸಿದ ತಾಂತ್ರಿಕ ಮಾದರಿಗಳನ್ನು ಪಡೆದುಕೊಂಡವು. ಕಾಲಕಳೆದಂತೆ ವಿವಿಧ ಸಂಸ್ಕೃತಿಗಳ ಕೊಡು-ಕೊಳ್ಳುವಿಕೆಯಲ್ಲಿ ತ್ರಿಮೂರ್ತಿಗಳು ಅಮೂರ್ತ ರೂಪ ಪಡೆದರು. ತಾತ್ವಿಕವಾಗಿ ನಿರಾಕಾರ, ನಿರ್ಗುಣ ಬ್ರಹ್ಮದ, ಏಕದೇವೋಪಾಸನೆಯ ಪರಿಕಲ್ಪನೆ ರೂಢಿಗೆ ಬಂದ ಮೇಲೂ ಅನುಷ್ಠಾನದಲ್ಲಿ ಮಾತ್ರ ಈಗಲೂ ಅವರು ಊಳಿಗಮಾನ್ಯ ಜೀವನಕ್ರಮದ ವಿವರಗಳಲ್ಲೇ ಪೂಜೆಗೊಳ್ಳುತ್ತಿದ್ದಾರೆ. ಅವರ ಆಯುಧಗಳು, ವೇಷ-ಭೂಷಣಗಳು, ವಾಹನ, ಧ್ವಜ, ಲಾಂಛನ, ಸಂಕೇತಗಳು ಊಳಿಗಮಾನ್ಯ ಸಂಸ್ಕೃತಿಗೆ ಸೇರಿದವುಗಳು.

ಶೈವಸಂಪ್ರದಾಯ ಮೂಲದ ಆಚಾರ್ಯಪರಂಪರೆಯಲ್ಲಿ ಬಂದ ಶಂಕರಾಚಾರ್ಯರ ಅದ್ವೈತ ಸಿದ್ಧಾಂತ ತಾತ್ವಿಕವಾಗಿ ಬ್ರಾಹ್ಮಣ-ಚಂಡಾಲರ ಸಮಾನತೆಯನ್ನು ಒಪ್ಪುತ್ತದೆ. ಆದರೆ, ಸಾಮಾಜಿಕವಾಗಿ ಶ್ರೇಣೀಕೃತ ಸಂಬಂಧಗಳನ್ನು ಮಾನ್ಯಮಾಡುತ್ತದೆ. ಈ ಇಕ್ಕಟ್ಟನ್ನು ನಿಭಾಯಿಸಲು ವ್ಯಾವಹಾರಿಕ ಸತ್ಯ – ಪಾರಮಾರ್ಥಿಕ ಸತ್ಯ ಎಂಬ ದ್ವಿಮುಖ ಜೀವನದೃಷ್ಟಿಯನ್ನು ಶಂಕರಾಚಾರ್ಯರ ಅನುಯಾಯಿಗಳು ಪ್ರತಿಪಾದಿಸುತ್ತಾರೆ. ಅದ್ವೈತದ ಅನುಭಾವಿಕ ಜೀವನವನ್ನು ನಡೆಸುವ ಬೆರಳೆಣಿಕೆಯ ಸಂತರನ್ನು ಹೊರತುಪಡಿಸಿ ಉಳಿದೆಲ್ಲರೂ ಸಾಮಾಜಿಕ ಅಸಮಾನತೆಯನ್ನು ಒಪ್ಪುತ್ತಾರೆ. ಕೃಷಿ ಮೂಲದ ಸಂಸ್ಕೃತಿಯ ಈ ಜನ ತ್ರಿಮೂರ್ತಿಗಳಲ್ಲಿ ಬಡ ದೇವರಾದ ಶಿವನನ್ನು ಆರಾಧಿಸುತ್ತಾರೆ. ಶಿವನ ಜನ್ಮದಿನವನ್ನು ಆಚರಿಸಲು ಬಡವರಿಗೆ ಹೇಳಿಮಾಡಿಸಿದಂತಿರುವ ಉಪವಾಸವ್ರತವನ್ನು ಕೈಗೊಳ್ಳುತ್ತಾರೆ. ಜಾಗರಣೆ. ಭಜನೆಗಳ ಸಂದರ್ಭಗಳಲ್ಲಿ ಬಳಸುವ ನೈವೇದ್ಯ-ಪ್ರಸಾದ, ಫಲಾಹಾರ ಮುಂತಾದವುಗಳೆಲ್ಲಾ ಕೃಷಿಮೂಲದ ಹಸಿ ಖಾದ್ಯಗಳು ಎನ್ನುವುದು ವಿಶೇಷ.

ಶ್ರೇಣೀಕೃತ ಅಸಮಾನತೆಯನ್ನು ತಾತ್ವೀಕರಿಸಿಯೂ ಬ್ರಾಹ್ಮಣ-ಚಂಡಾಲರ ಸಾಮಾಜಿಕ ಸಮಾನತೆಯನ್ನು ಎತ್ತಿಹಿಡಿಯುವ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಸಿದ್ಧಾಂತ ಭಾವಗೋಚರನಾದ ಕೃಷ್ಣನ ಆರಾಧನೆಯನ್ನು, ಭಕ್ತಿಮೂಲಕ ವೈಷ್ಣವ ಶರಣಾಗತಿಯನ್ನು ಪ್ರತಿಪಾದಿಸುತ್ತದೆ. ಆಳುವ ವರ್ಗದ ಅಧಿಕೃತತೆಯನ್ನು ಪಡೆಯುವುದರೊಂದಿಗೆ ಕೆಳಜಾತಿಯ ರಾಜರು, ಪಾಳೆಯಗಾರರನ್ನು ಬ್ರಾಹ್ಮಣೀಕರಿಸಿ ಮೇಲ್ಜಾತಿಯ ಜನರಿಗೆ ಕೆಳಜಾತಿಯ ಜನ ಶರಣಾಗುವ ಜೀವನಕ್ರಮವನ್ನು ಅಧಿಕೃತಗೊಳಿಸುತ್ತದೆ. ಚಂಡಾಲರು ನಂಬಿಕೆಯಲ್ಲಿ ವೈಷ್ಣವರಾದಾಗಲೂ ಸಾಮಾಜಿಕವಾಗಿ ಬ್ರಾಹ್ಮಣರಿಗಿಂತ ಕೀಳಾಗಿಯೇ ಇರುತ್ತಾರೆ. ಭಕ್ತಿಪಂಥದ

ಹುಸಿ ಸಮಾನತೆಯನ್ನೇ ಸಾಮಾಜಿಕ ಸಮಾನತೆಯೆಂದು ವೈಷ್ಣವಪಂಥದ ಆಳುವ ವರ್ಗ ಪ್ರಚಾರ ಮಾಡುತ್ತದೆ.

ಹರಿಯೇ ಸರ್ವೋತ್ತಮ. ಪ್ರಕೃತಿ, ಮನುಷ್ಯರು ಮತ್ತು ದೇವರು ಒಂದೇ ಆಗಲು ಎಂದಿಗೂ ಸಾಧ್ಯವಿಲ್ಲ, ಪ್ರಾಪಂಚಿಕ ವಾಸ್ತವತೆ ಸತ್ಯವೇ ಹೊರತು, ಮಿಥ್ಯೆಯಲ್ಲ ಎಂದು ಮಧ್ವಾಚಾರ್ಯರ ದ್ವೈತ ಸಿದ್ಧಾಂತ ಅತ್ಯುಗ್ರವಾಗಿ ಪ್ರತಿಪಾದಿಸುತ್ತದೆ. ಶಾಸ್ತ್ರಾಧಾರಿತ ವಿಷ್ಣು-ಲಕ್ಷ್ಮಿಯರ ಅಸ್ತಿತ್ವವನ್ನು, ವಿಶ್ವದ ತಂದೆ-ತಾಯಿಯರಾಗಿ ಅವರಿಗೆ ಅಧೀನವಾದ ಲೌಕಿಕ-ವ್ಯಾವಹಾರಿಕ ಬದುಕಿನ ವಾಸ್ತವತೆಯನ್ನು ತಾತ್ವಿಕವಾಗಿ, ಸಾಮಾಜಿಕವಾಗಿ ಅಧಿಕೃತ ಗೊಳಿಸುತ್ತದೆ. ಅಸಮಾನತೆ, ಲಿಂಗತಾರತಮ್ಯ ಮತ್ತು ವ್ಯಕ್ತಿ-ವ್ಯಕ್ತಿಗಳ ನಡುವಿನ ಶ್ರೇಣೀಕೃತಭೇದಗಳನ್ನು ಅನಿವಾರ್ಯ, ಅಪರಿಹಾರ್ಯ ವಾಸ್ತವಗಳೆಂದು ಯಾವ ಅಳುಕು, ಸಂಕೋಚಗಳೂ ಇಲ್ಲದೆ ಸಾರುತ್ತದೆ. ಸೃಷ್ಟಿಯ ಪರಿಪಾಲಕನಾದ ವಿಷ್ಣುವು ತ್ರಿಮೂರ್ತಿಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠನಾದ ದೇವರೆಂದು, ಶಿವ ಮತ್ತು ಶಿವಭಕ್ತರು ವಿಷ್ಣು ಮತ್ತು ವೈಷ್ಣವರನ್ನು ಅನುಸರಿಸಿ ನಡೆಯಬೇಕಾದ ಅಗತ್ಯವಿದೆಯೆಂದು ಮಧ್ವಾಚಾರ್ಯರ ಅನುಯಾಯಿಗಳು ನಂಬುತ್ತಾರೆ. ಧರ್ಮನಿಷ್ಠೆ-ಆಚಾರನಿಷ್ಠೆಯಲ್ಲಿ ಕಠೋರರಾದ ಮಧ್ವಮತದ ಅನುಯಾಯಿಗಳು ಧಾರ್ಮಿಕವಾಗಿ ಶೈವರಿಗಿಂತ ಹೆಚ್ಚು ಸ್ವಮತಬದ್ಧರೂ, ಸಾಮಾಜಿಕವಾಗಿ ಪರಮತದ ಬಗ್ಗೆ ಅಸಹನಶೀಲರೂ ಆಗಿದ್ದಾರೆ. ಇದಕ್ಕೆ ಅವರ ವಿಷ್ಣುಸರ್ವೋತ್ತಮತೆ ಮತ್ತು ಪಂಚಭೇದದೃಷ್ಟಿ ಪ್ರಮುಖ ಕಾರಣ. ಪಶ್ಚಿಮದ ಕ್ರೈಸ್ತ, ಇಸ್ಲಾಂ, ಯಹೂದಿ ಜನರ ಏಕದೇವೋಪಾಸನೆ ಮತ್ತು ಏಕಸಂಸ್ಕೃತಿಯ ಬಲಾತ್ಕಾರ-ದಬ್ಬಾಳಿಕೆಗಳಿಗೆ ತುಂಬಾ ಹತ್ತಿರವಿರುವ ಸಿದ್ಧಾಂತ ಇದು. ಫ್ಯಾಸಿಸಂ ಎಂದು ಕರೆಯುವ ವೈವಿಧ್ಯವಿರೋಧಿ, ಪ್ರಜಾತಂತ್ರವಿರೋಧಿ ಮತ್ತು ಹುಟ್ಟಿನ ಶ್ರೇಷ್ಠತೆ-ಅಸಮಾನತೆಯ ಜೀವನದೃಷ್ಟಿ ಇದರ ರಾಜಕೀಯ ಆಯಾಮ.

ಶೈವರ ಜೀವನ ದೃಷ್ಟಿಯಲ್ಲಿ ಕಂಡುಬರುವ ಪರಮತಸಹನಶೀಲತೆ ಮತ್ತು ಸಾಮರಸ್ಯ ವೀರಶೈವ ಸಿದ್ಧಾಂತದಲ್ಲಿ ಮತ್ತೆ ಕಾಣೆಯಾಗುತ್ತದೆ. ವಿಷ್ಣುವಿನ ಸ್ಥಾನದಲ್ಲಿ ಶಿವನನ್ನು ಕೂರಿಸಿ ಶಿವನೇ ಸರ್ವೋತ್ತಮ, ಶರಣರು ಮಾತ್ರವೇ ನಿಜವಾದ ಭಕ್ತರು, ಅನ್ಯದೇವರನ್ನು ಭಜಿಸುವವರೆಲ್ಲಾ ಭವಿಗಳು ಎಂದು ವೀರಶೈವಧರ್ಮ ಸಾರುತ್ತದೆ. ತಾತ್ವಿಕವಾಗಿ "ಶಿವೋಹಂ, – ಶಿವನೇ ನಾನು" ಎನ್ನುವ ಅನುಭಾವಿಗಳನ್ನು ಹೊರತುಪಡಿಸಿ, ಸಾಮಾಜಿಕವಾಗಿ ಕಠೋರವಾದ ದ್ವೈತವನ್ನು, ಏಕದೇವೋಪಾಸನೆ, ಏಕಸಂಸ್ಕೃತಿಯನ್ನು ವೀರಶೈವಮತ ಸಾರುತ್ತದೆ. ಈ ಕಾರಣಕ್ಕಾಗಿ ಮಾಧ್ವಮತದಂತೆ, ಇದೂ ಸಹ ರಾಜಕೀಯವಾಗಿ ಫ್ಯಾಸಿಸ್ಟ್ ಜೀವನದೃಷ್ಟಿಗೆ ಹತ್ತಿರವಾಗಿದೆ. ಸಂಘಪರಿವಾರದಲ್ಲಿನ ಒಳಜಗಳ, ಆಂತರಿಕ ಭಿನ್ನಾಭಿಪ್ರಾಯಗಳು ವೈಷ್ಣವ-ವೀರಶೈವ ಮೂಲದ ಅಂದರೆ, ಅಧಿಕಾರ-ಹಣ-ವ್ಯಾಪಾರ-ವ್ಯವಸಾಯ ಜೀವನಕ್ರಮಗಳ ಮೇಲು-ಕೀಳಾಟದ ಆಂತರಿಕ ವೈರುಧ್ಯಗಳನ್ನು ಬಿಂಬಿಸುತ್ತವೆ. ಶಿವಸೇನೆ ಮತ್ತು ಆರೆಸ್ಸೆಸ್ ನಾಯಕತ್ವಗಳ ಒಮ್ಮತ - ಭಿನ್ನಾಭಿಪ್ರಾಯಗಳು ಇದನ್ನೇ ಹೇಳುತ್ತವೆ.

ಈ ಜಗತ್ತಿನ ಸೃಷ್ಟಿಕರ್ತನಾಗಿ ಒಬ್ಬ ಅಥವಾ ಅನೇಕ ದೇವರಿದ್ದಾರೋ ಇಲ್ಲವೋ ಎಂಬುದು ತಾತ್ವಿಕವಾದ ಕುತೂಹಲ. ಇದಕ್ಕೂ ಜನಸಾಮಾನ್ಯರ ದೇವರ ಬಗೆಗಿನ ನಂಬಿಕೆಗೂ ಸಂಬಂಧವಿಲ್ಲ. ಚಿಕ್ಕವರಿದ್ದಾಗ ಕಷ್ಟದ ಸಮಯದಲ್ಲಿ ಕಾಪಾಡಲು, ಭಯ ನಿವಾರಿಸಲು, ನ್ಯಾಯವೊದಗಿಸಲು, ತಾಯಿ ತಂದೆಯರನ್ನು ಆಶ್ರಯಿಸುವಂತೆ ಸಹಾಯಕ್ಕಾಗಿ ಮೊರೆಹೋಗುವಂತೆ, ಬೆಳೆದಮೇಲೆ ಎದುರಾಗುವ ಸ[illegible] ಸಮಯಗಳಲ್ಲಿ, ಬೇರೆಲ್ಲೂ ಸಹಾಯ ಸಿಗದಿದ್ದಾಗ, ಜನರು ಮೊರೆ[illegible]ಗುವ ತಾಯಿತಂದೆಯರ ಮಾನಸಿಕ ಪ್ರತೀಕವೇ ದೇವರು. ದೇವರಿದ್ದಾನೋ ಇಲ್ಲವೋ ಎಂಬ ಪ್ರಶ್ನೆಗಿಂತ, ಸಂಕಷ್ಟದ ಸಮಯದಲ್ಲಿ ಜನರಿಗೆ ವೈಯಕ್ತಿಕವಾಗಿ ದೇವರ ಕಲ್ಪನೆಯ ಅಗತ್ಯವಿದೆಯೋ ಇಲ್ಲವೋ ಎಂಬುದು ಜರೂರಾದ ಪ್ರಶ್ನೆ. ನಿತ್ಯದ ಅನುಭವದಲ್ಲಿ ದೇವರಿಲ್ಲವೆಂದು ತೋರಬಹುದು. ವೈಚಾರಿಕವಾಗಿ ದೇವರ ಅಗತ್ಯ ಇಲ್ಲವೆಂದು ಸಾಧಿಸಬಹುದು. ಆದರೆ ತುಂಬಾ ಜನರು ದೇವರ ಕಲ್ಪನೆಯ ಅಗತ್ಯವನ್ನು ಚಿಕ್ಕಂದಿನಲ್ಲಿಯೇ ಭಾವನಾತ್ಮಕವಾಗಿ ಒಪ್ಪಿಕೊಂಡಿರುತ್ತಾರೆ. ಆದ್ದರಿಂದಲೇ ದೇವರ ನಂಬಿಕೆ ವೈಯಕ್ತಿಕ, ಸಾರ್ವಜನಿಕವಲ್ಲ ಎನ್ನುವುದು. ಸಾರ್ವಜನಿಕವಾಗಿ ಆಚರಿಸುವ ದೇವರ ಸಂಬಂಧದ ಆಚರಣೆಗಳು ಸಾಮಾಜಿಕ ಸಂಬಂಧಗಳನ್ನು ಬೆಸೆಯುವಂಥವು. ದೊಡ್ಡವರು ಬದುಕಿನ ಏಕತಾನತೆಯನ್ನು ಮರೆಸಲು ಸಹಾಯ ಮಾಡುವ ಆಟಗಳು. ಹೀಗೆ ವಿವಿಧೋಪಯೋಗಿಯಾದ ದೇವರ ಕಲ್ಪನೆಯನ್ನು ಆಸ್ತಿಕಜನ ಪರಸ್ಪರರ ನಂಬಿಕೆ, ಒತ್ತಾಸೆಗಳ ಮೂಲಕ ಸದಾ ಚಾಲಗೊಳ್ಳಿಸಿಕೊಳ್ಳುತ್ತಿರುತ್ತಾರೆ. ನಂಬಿಕೆಯು ಮೂಲಕ ಆಸ್ತಿಕರಾಗುವುದು ಸುಲಭ. ಆದರೆ ಕೇವಲ ದೇವರ ಅಸ್ತಿತ್ವವನ್ನು ನಿರಾಕರಿಸುವುದರಿಂದ



## ಕೃಷಾಳ ಶಿಲ್ಪ

ಕಾಲುವೆ ಹಳೆಯದಾದರೇನು
ವರುಷ ವರುಷವೂ ಕಾಣುತ್ತದೆ
ಮುದುಕಿ ಹೇರ್‌ಡೈ ಮಾಡಿಕೊಂಡಂತೆ
ರಿಪೇರಿಯ ಶೃಂಗಾರ
ಹೊಳೆತುಂಬಿ ಹರಿದಾಗ
ಕಾಲುವೆಯೂ ಮೈದುಂಬಿ ನಲಿಯುತ್ತದೆ
ಎರಡೂ ದಡದ ಗಲ್ಲಗಳಿಗೆ
ಪಾಂಡ್ಸ್‌ಕ್ರೀಮ್ ಲೇಪಿಸಿದಂತೆ
ಬೇಸಿಗೆಯಲ್ಲಿಯ ರೂಪು
ಅಧಿಕಾರಿಗಳ, ರಾಜಕಾರಣಿಗಳ ನೆರವು
ಅಕಾಲಿಕ ಮಳೆ ಸುರಿದಂತೆ,
ಹರಿದು ಹಂಬಲಿಸದಿರು ಓ ರೈತ
ಬಂಧು, ನೀ ಬಂದು ಸಾಯದಿರು
ಯುವತಿಯ ಕಂಗಳು ತುಂಬಿಬಂದಂತೆ
ಕೆರೆ ಕಟ್ಟೆಗಳು ತುಂಬಿ
ನುಗ್ಗುತಿವೆ ನುಗ್ಗೇಕಾಯಾಗಿ
ಒಂದಿಲ್ಲ ಒಂದು ದಿನ ಸಾಯಲೇಬೇಕು
ಎಂದು ಇಂದೇ ಸಾಯಲೇನು ಫಲ !

ಕೇಶವ ಉಮರ್ಜಿ
'ಅಗಸ್ತ್ಯಕುಟೀರ', ಹುನ್ನೂರು - ೫೮೭ ೧೧೯
ಬಾಗಲಕೋಟೆ ಜಿಲ್ಲೆ

ನಾಸ್ತಿಕರಾಗುವುದಿಲ್ಲ. ಇದಕ್ಕೆ ನಂಬಿಕೆಯ ಮೂಲವನ್ನೆ ಅರ್ಥಮಾಡಿಕೊಳ್ಳುವ ವೈಚಾರಿಕತೆ ಗಟ್ಟಿಯಾಗುವವರೆಗೂ ನಂಬಿಕೆ ಹೋಗುವುದಿಲ್ಲ. ಇದನ್ನು ಪ್ರಶ್ನಿಸಿ ಅವರ ಮಾನಸಿಕ ಅವಲಂಬನೆಯನ್ನು ಹಾಳುಮಾಡುವ ಯಾವುದನ್ನೂ ಜನಸಾಮಾನ್ಯರು ಇಷ್ಟಪಡುವುದಿಲ್ಲ. ಪುರೋಹಿತರು, ಜಗದ್ಗುರುಗಳು ಮತ್ತು ಪೂಜಾರಿಗಳಿಗೆ ಈ ನಂಬಿಕೆ ಜೀವನೋಪಾಯದ ಪ್ರಶ್ನೆಯಾದ್ದರಿಂದ ನಾಸ್ತಿಕರು ನಿಜವನ್ನೇ ಹೇಳುತ್ತಿದ್ದಾರೆಂದು ಅನ್ನಿಸುವಾಗಲೂ ಪರಮಶತ್ರುಗಳಂತೆ ಕಾಣಿಸುತ್ತಾರೆ. ಜನರ ಭಯ ಮತ್ತು ಆಸೆಗಳನ್ನು ನಗದೀಕರಿಸಿಕೊಳ್ಳುವ ಜ್ಯೋತಿಷಿಗಳು ದೈವಭಕ್ತಿಯನ್ನು, ದೇವರ ಕಲ್ಪನೆಯನ್ನು ಬಲಪಡಿಸುವಂಥ ಯೋಚನಾಕ್ರಮವನ್ನೆ ಪ್ರೋತ್ಸಾಹಿಸುತ್ತಾರೆ. ರಾಜಕೀಯವಾಗಿ ದೇವರ ಕಲ್ಪನೆ ಆಳುವವರ ಕೈಯಲ್ಲಿನ ಅತ್ಯಂತ ಪ್ರಬಲವಾದ ನಯವಂಚನೆಯ ಸಾಧನ. ಭಾವನಾತ್ಮಕವಾಗಿ ಮನದಾಳದಲ್ಲಿ ಬೇರೂರಿರುವ ದೇವರ ಕಲ್ಪನೆಯನ್ನು ಬಹಳ ಸುಲಭವಾಗಿ ಪ್ರಚೋದಿಸಿ ರಾಜಕೀಯ ಬೇಳೆ ಬೇಯಿಸಿಕೊಳ್ಳಬಹುದು. ಸಂಘಪರಿವಾರದ ಆಸ್ತಿಕತೆ, ಧರ್ಮನಿಷ್ಠೆ ಮತ್ತು ನಾಸ್ತಿಕದ್ವೇಷ ಸ್ಪಷ್ಟವಾಗಿ ರಾಜಕೀಯವಾದದ್ದು. ಗತಿಶೀಲ ತಾರ್ಕಿಕತೆ, ವೈಚಾರಿಕತೆ ಮತ್ತು ವೈಜ್ಞಾನಿಕತೆಗಳನ್ನು ಅಡಿಪಾಯವಾಗುಳ್ಳ ಸಮತಾವಾದ, ಧರ್ಮ ಮತ್ತು ರಾಜಕೀಯದ ಈ ಒಳಸಂಬಂಧವನ್ನು ಬಯಲು ಮಾಡುವುದರಿಂದ ಕಮ್ಯುನಿಸ್ಟರನ್ನು ಕಂಡರೆ ಸಂಘಪರಿವಾರಕ್ಕೆ ಬದ್ಧದ್ವೇಷ. ಬಡವರ ಪರವಾಗಿದ್ದು, ತಾತ್ವಿಕವಾಗಿ ಸರಳಜೀವನವನ್ನು ಪ್ರತಿಪಾದಿಸುವ ಗಾಂಧೀಜಿ ಮತ್ತು ಅವರ ಅನುಯಾಯಿಗಳು ಭಜನೆ, ಪ್ರಾರ್ಥನೆಗಳಲ್ಲಿ ನಂಬಿಕೆಯಿಟ್ಟ ಆಸ್ತಿಕರಾಗಿರುವುದು ಅವರ ಕಮ್ಯುನಿಸಂ ಬಗೆಗಿನ ಅಸಹನೆಗಿರುವ ಅನೇಕ ಪ್ರಮುಖ ಕಾರಣಗಳಲ್ಲಿ ಒಂದು.

ಭಾರತದಲ್ಲಿ ಬಹು ಹಿಂದಿನಿಂದಲೂ ವಿಷ್ಣು ಮತ್ತು ಶಿವ ಕಲ್ಪನೆಯ ಮೂಲದ ಜೀವನ ದೃಷ್ಟಿಕೋನ - ರಾಜಕೀಯಗಳ ಸೆಣಸಾಟವಿದೆ. ಕೃಷಿ-ಆಹಾರ ಉತ್ಪಾದನೆ - ಬಡತನಗಳ ಮೂಲದ ಶಿವ, ಅಧಿಕಾರ - ವಾಣಿಜ್ಯ - ಉದ್ದಿಮೆ - ಶ್ರೀಮಂತಿಕೆಗಳ ಮೂಲದ ವಿಷ್ಣುವಿಗೆ ಅಧೀನವಾಗಿರುವ ರಾಜಕೀಯ ಉತ್ತರಭಾರತದಲ್ಲಿ ಎದ್ದು ತೋರುವಂತಿದೆ. ಶೈವ ದೇವಾಲಯಗಳ ಕಲಾಶ್ರೀಮಂತಿಕೆ, ವಿಷ್ಣು-ಕೃಷ್ಣ-ರಾಮನ ದೇವಾಲಯಗಳ ಬೆಲೆಬಾಳುವ ಕಲ್ಲು-ಆಸ್ತಿ-ಹಣ-ಚಿನ್ನ-ಬೆಳ್ಳಿ-ಕಿರೀಟ-ವೈಭವಗಳ ಲೌಕಿಕ ಶ್ರೀಮಂತಿಕೆಯ ಮುಂದೆ ಸೊರಗುತ್ತದೆ. ಧರ್ಮ-ಸಂಸ್ಕೃತಿಯ ಹೆಸರಿನಲ್ಲಿ ಅಮಾಯಕರಿಂದ ಮತ್ತು ವ್ಯಾಪಾರಿಗಳಿಂದ ಸಂಗ್ರಹವಾಗುವ ಅಗಾಧಮೊತ್ತದ ಹಣ, ಮಠ-ಮಾನ್ಯಗಳು, ಧರ್ಮ-ಸಂಸ್ಕೃತಿಯ ಹೆಸರಿನಲ್ಲಿ ರಾಜಕೀಯ ಮಾಡುವ ಸಂಘಪರಿವಾರದ ಕೇಂದ್ರಗಳು ಮತ್ತು ಅವುಗಳ ಅಂಗಸಂಸ್ಥೆಗಳು ದೈತ್ಯಾಕಾರವಾಗಿ ಬೆಳೆಯಲು ಸಹಾಯಮಾಡಿವೆ. ಬಡಜನ ಮತ್ತು ಅಮಾಯಕರ ಆರೋಗ್ಯ-ಆರ್ಥಿಕತೆಯನ್ನು ನಾಶಮಾಡುವ ಹೆಂಡದ ಉದ್ಯಮ ಮತ್ತು ಹೊಗೆಸೊಪ್ಪಿನ ಉದ್ಯಮಗಳು ಸಂಸ್ಕೃತಿಯ ಹೆಸರಿನಲ್ಲಿ ಕಟ್ಟಿಸುವ ದೇವಸ್ಥಾನಗಳಿಗೆ ಖರ್ಚುಮಾಡುವ ಹಣ ವಾಸ್ತವವಾಗಿ ಜನರ ಜೀವನವನ್ನು ಸುಧಾರಿಸಲು ಇವರಿಂದ ಕಲೆಹಾಕಬೇಕಾದ ಸುಂಕದ ವಿನಾಯತಿಯಿಂದ ದೊರೆಯುವಂಥದು. ಹೊರಗಿನಿಂದ ನೋಡಲು ಇವು ಎಷ್ಟು ಆಕರ್ಷಕವೋ ಒಳಹೊಕ್ಕು ನೋಡುವವರಿಗೆ ಜನರಿಗಾಗಿ ಬಳಸಬೇಕಾದ ಸಂಪನ್ಮೂಲಗಳ ಅಪಬಳಕೆಯ ವಿಕಾರ ರೂಪಗಳಾಗಿ ತೋರುತ್ತವೆ. ಇಂಥ ಪ್ರಯತ್ನಗಳನ್ನು ಸಂಘಪರಿವಾರವು ಧರ್ಮಾಭಿಮಾನದ ಸಂಕಲ್ಪ-ಸಾಧನೆಗಳೆಂದು, ಸಂಸ್ಕೃತಿಯ ಉತ್ತುಂಗ ಮಾದರಿಗಳೆಂದು ಪ್ರಚಾರ ಮಾಡುತ್ತದೆ. ಅಂಥ ಕಡೆ ಆಯಕಟ್ಟಿನ ಸ್ಥಳಗಳಲ್ಲಿ ಕೇಸರಿ ಧ್ವಜಗಳನ್ನು ಹಾರಿಸಿ ಅಲ್ಲಿಗೆ ಬರುವವರೆಲ್ಲಾ ಸಂಘಪರಿವಾರದ ಧ್ಯೇಯೋದ್ದೇಶಗಳ ಸಮರ್ಥಕರೆಂಬ ಭಾವನೆ ಇವರನ್ನು ನೋಡಿ ಅವರಿಗೆ, ಅವರನ್ನು ನೋಡಿ ಇವರಿಗೆ ಬರುವಂತೆ ಮಾಡುತ್ತದೆ.

ಕರ್ನಾಟಕದಲ್ಲಿ ಸಂಘಪರಿವಾರದ ಚಟುವಟಿಕೆಗಳು ಹಿಂದೆಂದಿಗಿಂತ ಹೆಚ್ಚಾಗಿ ಹರಡಲು ಕಾರಣ ಭಾಜಪಕ್ಕೆ ಸಿಕ್ಕಿದ ರಾಜ್ಯಾಧಿಕಾರ. ಹರಡಿತು ಎನ್ನುವುದಕ್ಕಿಂತ ಸಂಸ್ಕೃತಿಯ ಮುಸುಕಿನಲ್ಲಿ ಮಠ-ಮಾನ್ಯಗಳಲ್ಲಿ, ಸೇವಾಕೇಂದ್ರಗಳಲ್ಲಿ, ಶಿಕ್ಷಣ, ಕಲೆ, ಸಮೂಹ ಮಾಧ್ಯಮಗಳಲ್ಲಿ ತಲೆಮರೆಸಿಕೊಂಡು ಕೆಲಸಮಾಡುತ್ತಿದ್ದ ಸಂಘಪರಿವಾರದ ಪಡೆಗಳು, ಅಧಿಕಾರ ಸಿಕ್ಕತಕ್ಷಣ ಮುಸುಕನ್ನು ಕಿತ್ತೊಗೆದು ನಗ್ನರೂಪದಲ್ಲಿ ಕಾಣಿಸಿಕೊಂಡವು ಎನ್ನುವುದೇ ಸರಿ. ಧರ್ಮರಕ್ಷಣೆಯ ಹೆಸರಿನಲ್ಲಿ ವೈವಿಧ್ಯವನ್ನು ನಾಶಮಾಡುವುದು, ದೇಶಭಕ್ತಿಯ ಹೆಸರಿನಲ್ಲಿ ಏಕಾಭಿಪ್ರಾಯವನ್ನು ಹೇರುವುದು, ಸಂಸ್ಕೃತಿ ರಕ್ಷಣೆಯ ಹೆಸರಿನಲ್ಲಿ ಇತರರ ಸ್ವಾತಂತ್ರ್ಯವನ್ನು ಹತ್ತಿಕ್ಕುವುದು, ಸಂಘಟಿತ ಹಿಂಸೆ-ದೊಂಬಿಗಳಿಂದ ಜನಸಾಮಾನ್ಯರಲ್ಲಿ ಭಯ ಬಿತ್ತುವುದು, ರಾಜಕೀಯ ಭಯೋತ್ಪಾದನೆಯ ವಿರುದ್ಧ ಗಟ್ಟಿಯಾಗಿ ಕೂಗುತ್ತಾ ತಮ್ಮ ಒಡಲಲ್ಲೆ ಬಚ್ಚಿಟ್ಟುಕೊಂಡಿರುವ ಆರ್ಥಿಕ ದರೋಡೆ, ಸಾಮಾಜಿಕ ಭಯೋತ್ಪಾದಕತೆ ಮತ್ತು ಸಾಂಸ್ಕೃತಿಕ ನಯವಂಚನೆಗಳನ್ನು ಜನರಿಂದ ಮರೆಮಾಚುವುದು, ಹೇಗೇ ನೋಡಿದರೂ ಇವೆಲ್ಲಾ ಫ್ಯಾಸಿಸಂನ ಸ್ಪಷ್ಟ ಕೃತ್ಯಗಳೆ. ವಿಷ್ಣುವಿನ ಮತ್ತು ಅವನ ಅವತಾರಗಳ ಕಲ್ಪನೆಯ ಹಿಂದಿರುವ ಲೋಕಕಲ್ಯಾಣದ ಸದಾಶಯ, ಅಧರ್ಮದ ನಾಶ, ಧರ್ಮಸಂಸ್ಥಾಪನೆಯ ಘನೋದ್ದೇಶ, ಸ್ವಂತಕ್ಕಾಗಿ ಏನನ್ನೂ ಬಯಸದ, ದೀನ ದಲಿತರ ಉದ್ಧಾರದ ಅವತಾರಗಳ ಕಲ್ಪನೆಗಳ ನಿಃಸ್ವಾರ್ಥತೆಗಳನ್ನು ಕೈಬಿಟ್ಟು, ಕೇವಲ ಅವನ ಕಾರ್ಯತಂತ್ರ-ವ್ಯೂಹಗಳಲ್ಲಿನ ಜಾಣ್ಮೆ, ವೇಷಧಾರಿಕೆ, ಕಪಟನಾಟಕ ಸೂತ್ರಧಾರಿತ್ವ, ಮೇಲುಗಾರಿಕೆಯೇ ಮೊದಲಾದ ಘಾತುಕ ಅಂಶಗಳನ್ನು ಮಾತ್ರ ಬಳಸುವ ಸಂಘಪರಿವಾರದ ಎಲ್ಲ ಕೃತ್ಯಗಳ ಹಿಂದೆಯೂ ವ್ಯಾಪಾರಿಗಳ, ಹಣವಂತರ, ಪೂಜಾರಿ, ಪುರೋಹಿತರ ಹಿತಾಸಕ್ತಿ ಅಡಗಿದೆ. ಏನೇ ಮಾಡಿದರೂ, ಕೊಲ್ಲಬೇಕಾದ ಹಾವನ್ನು ಬುಟ್ಟಿಯಲ್ಲಿಟ್ಟು ಹಣಮಾಡಲು ಬಳಸುತ್ತಾ, ಎಲ್ಲರೆದುರು ಹುತ್ತವನ್ನು ಬಡಿಯುತ್ತಾ ಜನರನ್ನು ವಂಚಿಸುವಂತೆ ಸಂಘಪರಿವಾರ ಕೆಲಸಮಾಡುತ್ತದೆ. ಪಾನನಿರೋಧವನ್ನು ತಡೆದಂತೆ ಮಾಡಿ ಹೆಂಡದ ಉದ್ದಿಮೆಗಳನ್ನು ಬಲಪಡಿಸಿ ಹಣ ಮಾಡಿಕೊಳ್ಳುವುದು, ಭ್ರಷ್ಟರಾದ ವಿಪಕ್ಷದ ರಾಜಕಾರಣಿಗಳನ್ನು ಬ್ಲ್ಯಾಕ್‌ಮೇಲ್ ಮಾಡಿ ಬಾಯಿಮುಚ್ಚಿಸಿ ಭೂಮಾಫಿಯಾ, ಭೂಗಳ್ಳತನ, ಭೂಕಬಳಿಕೆಗಳಲ್ಲಿ ತೊಡಗುವುದು, ದೇಶಭಕ್ತಿ, ಸ್ವದೇಶಿತನದ ಬಗ್ಗೆ ಪ್ರಚಾರಮಾಡುತ್ತಾ ದೇಶಬಾಂಧವರ ಜೀವನ ಮತ್ತಷ್ಟು ಮಗದಷ್ಟು ಹದಗೆಡುವಂಥ ಆರ್ಥಿಕನೀತಿಗಳನ್ನು ಜಾರಿಗೊಳಿಸಿ ಆಹಾರ ಮೂಲಗಳಾದ ನೆಲ-ಜಲಗಳನ್ನು ವಿದೇಶಿ ಬಂಡವಳಿಗರಿಗೆ ಮಾರಿಕೊಳ್ಳುವುದು ಇವೆಲ್ಲ ಜನರ ಕಲ್ಯಾಣದ ಹೆಸರಿನಲ್ಲಿ, ದೇಶಭಕ್ತಿ-ದೇಶಪ್ರೇಮಗಳ ಹೆಸರಿನಲ್ಲಿ ಸಂಘಪರಿವಾರ ಎಸಗುತ್ತಿರುವ ಕುಕೃತ್ಯಗಳು.

ವಾಲ್ಮೀಕಿಯ ರಾಮ, ಗಾಂಧೀಜಿಯ ರಾಮ, ಸಂಘಪರಿವಾರದ ರಾಮ ಒಂದೇ ಅಲ್ಲ ಎಂಬ ಅಂಶ ಬೇಗ ಎಲ್ಲರ ಗಮನಕ್ಕೂ ಬರುವುದಿಲ್ಲ. ವಾಲ್ಮೀಕಿಯ ರಾಮ ತಾನೇ ಒಪ್ಪಿದ ಆದರ್ಶಕ್ಕಾಗಿ, ಮತ್ತೊಬ್ಬರಿಗಾಗಿ ಸಾಕಷ್ಟು ನರಳಿ, ಏನೂ ಸುಖಪಡದೆ ದುಃಖದ ಸರಯೂ ನದಿಯಲ್ಲಿ ಮುಳುಗಿಹೋದ. ಆದರೆ ಅತ್ಯಂತ ಜನಾನುರಾಗಿಯಾಗಿ ಇದ್ದಿರಬಹುದಾದ ರಾಜನೊಬ್ಬನನ್ನು, ಮೊದಲು ಬೇಡನಾಗಿದ್ದು, ಆನಂತರ ಸಂತ-ಕವಿಯಾದ ವಾಲ್ಮೀಕಿ ತನ್ನ ಕಾವ್ಯಪ್ರಪಂಚದಲ್ಲಿ ಮೂರ್ತೀಕರಿಸಿದ ಆದರ್ಶ ವ್ಯಕ್ತಿ. ರಾಮನ ಪಾತ್ರದಿಂದಾಗಿ ವಾಲ್ಮೀಕಿರಾಮಾಯಣ ಜನಪ್ರಿಯವಾಯಿತೊ ಅಥವಾ ವಾಲ್ಮೀಕಿ ರಾಮಾಯಣದ ಕಾವ್ಯ ಸೌಂದರ್ಯದ ಜನಪ್ರಿಯತೆಯಿಂದಾಗಿ ರಾಮ ಎಲ್ಲರ ಬಾಯಲ್ಲೂ ನಿಲ್ಲುವಂತಾಯಿತೊ ಹೇಳುವುದು ಕಷ್ಟ. ಅಂತೂ ಮಗುವೊಂದು ಸೀನಿದರೆ, 'ಶ್ರೀರಾಮರಕ್ಷೆ', ಎಂದು ಹರಸುವಷ್ಟು ವಾಲ್ಮೀಕಿ ಸೃಜಿಸಿದ ರಾಜಾರಾಮ ಜನಪ್ರಿಯ. ಈಗ ಮಗುವೊಂದು ಸೀನಿದರೆ, 'ವಾಜಪೇಯಿ ರಕ್ಷೆ', 'ಮನಮೋಹನಸಿಂಗ್ ರಕ್ಷೆ', ಅಥವಾ 'ಯಡಿಯೂರಪ್ಪ ರಕ್ಷೆ' ಎಂದರೆ ಹೇಗಿರುತ್ತದೆ ? ಸಾವಿರಾರು ವರ್ಷಗಳಲ್ಲಿ ವಾಲ್ಮೀಕಿಯ ರಾಮ ಪಡೆದಿರುವ ಜನಪ್ರಿಯತೆ ಅಂಥದು. ಇದನ್ನು ಭ್ರಷ್ಟವಾಗಿಸಿ ತನ್ನ ಲಾಭಕ್ಕಾಗಿ ಬಳಸಿಕೊಳ್ಳುವ ಸಂಘಪರಿವಾರದ ಧೂರ್ತ ರಾಮ ಪ್ರೀತಿಯು ಆಸ್ತಿಕತೆ ಅಥವಾ ಧಾರ್ಮಿಕತೆ ಹೇಗಾದೀತು ?

ಸತ್ಯವೇ ದೇವರು ಎನ್ನುತ್ತಿದ್ದ ಗಾಂಧೀಜಿಯ ರಾಮ, ತೀವ್ರ ಸಂಕಷ್ಟದ ಸಮಯದಲ್ಲಿ ರಾಮನಾಮ ಜಪಿಸಿ ಪಾರಾದ ವೈಯಕ್ತಿಕ ನಂಬಿಕೆಯಿಂದ ಅವರಲ್ಲಿ ನೆಲೆಗೊಂಡ ಮನುಷ್ಯರೂಪಿ ದೇವರು. ಹಿಂದೂ-ಮುಸ್ಲಿಂ ಭೇದ ತೀವ್ರವಾಗಿದ್ದು ಐಕ್ಯತೆ, ಸೌಹಾರ್ದತೆ, ಸಾಮರಸ್ಯಗಳ ಅಗತ್ಯ ತುಂಬಾ ಬೇಕಿದ್ದ ಕಾಲಘಟ್ಟದಲ್ಲಿ ರಾಮ-ರಹೀಮ, ಕೃಷ್ಣ-ಕರೀಮ ಎಂಬ ಸಮೀಕರಣದ ಭಾಗವಾಗಿ ರಾಮಭಜನೆಯನ್ನು ಗಾಂಧೀಜಿ ಬಳಕೆಗೆ ತಂದರು. ಕಬೀರ, ಸೂಫಿ ಸಂತರಲ್ಲಿ, ಇಂಥ ಸಮೀಕರಣ ಸಾಕಷ್ಟು ಪರಿಚಿತ. ಬಾಬಾ ಬುಡನ್‌ಗಿರಿ ಅಲ್ಲಾಕಾ ನಾಮ್ ಮಂಜುನಾಥಶಾಮಿ ಭಕ್ತಿ ಅಲ್ಲಾಕಾ ನಾಮ್ ಎಂಬಂಥ ಫಕೀರರ ಹಾಡು ಮತಧರ್ಮಗಳ ಸಂಕುಚಿತ ಘಟಾಕಾಶಗಳನ್ನು ಒಡೆದು ಜನರನ್ನು ಒಂದುಗೂಡಿಸುವಂಥದು. ಗಾಂಧೀಜಿಯವರ ಆಧ್ಯಾತ್ಮಿಕತೆ ಅನುಭಾವದ ಮಟ್ಟವನ್ನು ಮುಟ್ಟದಿದ್ದರೂ ಭಕ್ತಿಪಂಥದ ರಾಮ-ರಹೀಮರ ಐಕ್ಯತೆಯನ್ನು ಸಾರುವಷ್ಟು ಪಕ್ವವಾಗಿತ್ತು. ಅವರ ಆದರ್ಶ ರಾಜ್ಯದ ಕಲ್ಪನೆಯನ್ನು ಅವರ ಹಿಂದ್ ಸ್ವರಾಜ್‌ನಲ್ಲಿ ಹುಡುಕಬೇಕು, ರಾಮನಲ್ಲಲ್ಲ. ರಾಮರಾಜ್ಯದಲ್ಲಿ ಮನೆಗಳಿಗೆ ಬೀಗವನ್ನೇ ಹಾಕುತ್ತಿರಲಿಲ್ಲ ಎಂದರೆ, ಕಳ್ಳರೇ ಇರಲಿಲ್ಲವೆಂದಲ್ಲ. ಅಥವಾ ಜನರೆಲ್ಲರೂ ಪ್ರಾಮಾಣಿಕರಾಗಿದ್ದರೆಂದೂ ಭಾವಿಸಬೇಕಾಗಿಲ್ಲ. ಆಗಿನ್ನೂ ಬೀಗದ ತಾಂತ್ರಿಕತೆ ಹುಟ್ಟಿರಲಿಲ್ಲ, ಅಷ್ಟೆ. ಹಾಗೆಂದು ಆ ನಂಬಿಕೆಯ ಸದಾಶಯವನ್ನು ನಿರಾಕರಿಸಬೇಕಿಲ್ಲ. ರಾಜನಿದ್ದ ಕಡೆ ಗೂಢಚಾರರು, ಗೂಢಚಾರರಿದ್ದ ಕಡೆ ಸಂಶಯದ ಮನಸ್ಸು ಇರುವುದು ಸಾಮಾನ್ಯ ಸಂಗತಿ. ವಾಲ್ಮೀಕಿಯದಲ್ಲ ಎಂದು ಹೇಳುವ ಉತ್ತರ ರಾಮಾಯಣದಲ್ಲಿ ಋಷಿಪತ್ನಿಯರಿಗೆ ಬಾಗಿನ ಕೊಡಬೇಕೆಂದು ಸೀತೆ ಯಾವಾಗಲೋ ವ್ಯಕ್ತಪಡಿಸಿದ್ದ ಆಸೆಯನ್ನು ಪೂರೈಸುತ್ತಿದ್ದೇನೆಂದು ಸುಳ್ಳು ಹೇಳಿ ತುಂಬುಗರ್ಭಿಣಿಯನ್ನು ಕಾಡಿಗೆ ಅಟ್ಟಿದ ರಾಜಕೀಯದ ರಾಮನ ರಾಜ್ಯ ಹೇಗೆ ತಾನೆ ಆದರ್ಶ ರಾಜ್ಯವಾಗುತ್ತದೆ ? ಇಷ್ಟಕ್ಕೂ ಸತ್ಯಯುಗವಾದ ತ್ರೇತಾಯುಗದಲ್ಲೇ,

ಶ್ರೀರಾಮಚಂದ್ರನಿದ್ದ ಕಾಲದಲ್ಲೆ ಅಲ್ಲವೆ ಒಬ್ಬ ರಾಜನ ಹೆಂಡತಿಯನ್ನು ಮತ್ತೊಬ್ಬ ರಾಜ ಅಪಹರಿಸುವಂಥ ಸಾಮಾಜಿಕ ಸ್ಥಿತಿ ಇದ್ದದ್ದು?

ಹಾಗಿದ್ದರೆ ರಾಮರಾಜ್ಯ ಕಲ್ಪನೆಗೆ ಏನು ಬೆಲೆ? ಆಳುವವರಿಗೆ ತಮ್ಮದೆ ಆದ ಯಾವ ಹಿತಾಸಕ್ತಿಯೂ ಇರಬಾರದು. ಸಾಮಾನ್ಯರಲ್ಲಿ ಸಾಮಾನ್ಯ ಪ್ರಜೆಯಾದ ಅಗಸನೊಬ್ಬನ ತಪ್ಪು ಗ್ರಹಿಕೆಯ ಟೀಕೆಗೂ, ಅಥವಾ ಅವನ ದೃಷ್ಟಿಯಲ್ಲಿ ಸರಿಯೆಂದೇ ಮಂಡಿಸಬಹುದಾದ ಆಳುವವರ ವಿಮರ್ಶೆಗೂ ಅಲ್ಲಿ ಬೆಲೆಯಿದೆ. ಇಂಥ ತಿಳುವಳಿಕೆ, ದೃಷ್ಟಿಕೋನ, ಉದ್ದೇಶಗಳ ಲವಲೇಶವೂ ಇಲ್ಲದ ಸಂಘಪರಿವಾರದ ಕಲ್ಪನೆಯ ರಾಮ, ವಾಲ್ಮೀಕಿ ಕವಿ ಸೃಷ್ಟಿಸಿದ, ಮಾನವಸಹಜ ಗುಣ-ದೋಷಗಳುಳ್ಳ, ಸಾಮಾನ್ಯ ಜನರ ಟೀಕೆ-ವಿಮರ್ಶೆಗಳಿಗೆ ಹೊರತಾಗಿಲ್ಲದ ರಾಮ, ಇಬ್ಬರೂ ಒಂದೇ ಅಲ್ಲ. ಒಂದೇ ಆಗಿದ್ದರೆ, ಸೀತಾಯಣವನ್ನು ಬರೆದ ಪೋಲಂಕಿ ರಾಮಮೂರ್ತಿಯ ಮೇಲೆ ಸಂಸ್ಕೃತಿ ರಕ್ಷಕರಾಗಿ ಹಲ್ಲೆ ಮಾಡಿದ ಸಂಘಪರಿವಾರದ ರಾಮ ಯಾರು? ಗಾಂಧೀಜಿ ಹೇಳುವ ರಾಮ ರಹೀಮನಿರಲಿ ಅಥವಾ ರಹೀಮನೇ ರಾಮನಾಗಿರಲಿ, ಬಾಬ್ರಿ ಮಸೀದಿಯೆಂದು ಕರೆಯುತ್ತಿದ್ದ ಕಟ್ಟಡವನ್ನು ರಣೋತ್ಸಾಹದಿಂದ ಕೆಡವಿ ಅಲ್ಲಿ ರಾಮಮಂದಿರವನ್ನು ಕಟ್ಟುತ್ತೇವೆಂದು ಅನುಕೂಲವಾದಾಗಲೆಲ್ಲಾ ಸಾರುವ ರಾಜಕೀಯ ಜನರ ರಾಮ ಯಾರು? ತಾವು ಒಪ್ಪದ ಜೀವನ ಶೈಲಿಯ ಜನರ ಮೇಲೆ ಹಲ್ಲೆ ಮಾಡುವ, ತಮ್ಮನ್ನು ತಾವೇ ರಾಮಸೇನೆಯೆಂದು ಕರೆದುಕೊಳ್ಳುವ ವಾನರರ ರಾಮ ಯಾರು? ಅತ್ಯಂತ ಸುಸಂಸ್ಕೃತನೂ ಯಾರೊಡನೆ ಹೇಗೆ ಮಾತನಾಡಬೇಕೆಂಬ ಭಾಷಾ ಮರ್ಯಾದೆಯನ್ನು, ವ್ಯಾಕರಣವನ್ನು ಬಲ್ಲವನೂ, ರಾಮನಿಗೆ ಪರಮನಿಷ್ಠನೂ, ಪ್ರಿಯನೂ ಆದ ಹನುಮಂತನ ಹೆಸರಿನಲ್ಲಿ ಅನಾಗರಿಕವಾಗಿ ನಡೆದುಕೊಳ್ಳುವ, ದಾಂಧಲೆ ಎಬ್ಬಿಸುವ ಭಜರಂಗದಳದ ಗೂಂಡಾಗಳ ರಾಮ ಯಾರು? ಖಂಡಿತ ವಾಲ್ಮೀಕಿಯ ರಾಮನಲ್ಲ, ಗಾಂಧೀಜಿಯ ರಾಮನೂ ಅಲ್ಲ, ಗಾಂಧೀಜಿಯನ್ನೇ ಗುಂಡಿಟ್ಟು ಕೊಂದ ಆದರ್ಶರಹಿತ ಪುಂಡು ಜನರಿಗೆ ಅವರ ರಾಮ ಆದರ್ಶವಾಗುವುದಾದರೂ ಹೇಗೆ? ಅಂದರೆ ಜನಸಾಮಾನ್ಯರ ಭಕ್ತಿ-ಗೌರವಗಳನ್ನು ತಲೆ ತಲಾಂತರದಿಂದ ಸಂಪಾದಿಸಿರುವ ರಾಮ, ಸೀತೆ, ಹನುಮಂತರಾದಿಯಾದ ವೈಷ್ಣವ ಮೂಲದ ಪೌರಾಣಿಕ ವ್ಯಕ್ತಿಗಳನ್ನು ಸಂಘಪರಿವಾರದವರು ರಾಜ್ಯಾಧಿಕಾರ ಹಿಡಿಯಲು, ಹಣಮಾಡಲು, ತಮ್ಮ ಸುಳ್ಳು, ಕಪಟತನ, ವಂಚನೆ, ಧೂರ್ತತನ, ಕ್ರೌರ್ಯ, ದುಷ್ಟತನ, ಅಸಹನೆ ಮುಂತಾದ ರಾಕ್ಷಸೀಯ ಗುಣ ಗಳನ್ನು ಜನರಿಂದ ಮರೆಮಾಚಲು ಬಳಸಿಕೊಳ್ಳುತ್ತಿದ್ದಾರೆ. ಇಡೀ ಸಂಘಪರಿವಾರದ ಬುನಾದಿಯೇ ಸುಳ್ಳು, ಕಪಟ ಮತ್ತು ವಂಚನೆ. ಇವರು ಹೇಗೆ ಧಾರ್ಮಿಕರಾಗಿರಲು ಸಾಧ್ಯ? ಯಾವ ಅರ್ಥದಲ್ಲಿ ಇವರು ಹಿಂದೂಧರ್ಮ, ಹಿಂದೂಸಂಸ್ಕೃತಿಗಳ ರಕ್ಷಕರಾಗಲು ಸಾಧ್ಯ?

ಏಸುಕ್ರಿಸ್ತನು ಮೂಲತಃ ಗುಲಾಮರ, ಬಡವರ, ದೀನ ದಲಿತರ, ದುಃಖಿಗಳ, ನಾನಾ ರೀತಿಯಲ್ಲಿ ನರಳುವ ಜನರ ದೇವರು. ಯಹೂದಿಗಳ ಕ್ರೌರ್ಯ ಅಸಹನೆಗಳ ಬಲಿಪಶುವಾಗಿ ದೇವತ್ವಕ್ಕೆ ಏರಿದ ಸಂತ. ಆತನು ಸಾರುತ್ತಿದ್ದ ಪ್ರೇಮ, ಸಹನೆ, ಅನುಕಂಪ, ಕ್ಷಮೆ ಮುಂತಾದ ಮಾನವೀಯ ಗುಣಗಳು ಯಹೂದಿಗಳು ನಂಬುವ ಹಳೆ ಒಡಂಬಡಿಕೆಯ ಕ್ರೌರ್ಯ, ಶಿಕ್ಷೆಗಳ ಜೀವನ ಕ್ರಮಕ್ಕೆ ತದ್ವಿರುದ್ಧವಾಗಿದ್ದವು. ಕಾಲಕ್ರಮೇಣ ವ್ಯಾಪಾರಿಗಳು ಮತ್ತು ಹಣವಂತರು ಲಪಟಾಯಿಸಿ ತಮ್ಮದನ್ನಾಗಿಸಿಕೊಂಡ ಕ್ರೈಸ್ತಧರ್ಮ, ಶ್ರೀಮಂತರ, ಶೋಷಕರ ಕೈಲಿ ಬಡವರನ್ನು ವಂಚಿಸುವ ಸಾಧನವಾಗಿ ಬೃಹತ್ ಪ್ರಮಾಣದಲ್ಲಿ ಬೆಳೆಯಿತು. ಇಂಗ್ಲೆಂಡಿನ ವಸಾಹತುಶಾಹಿಯ ನಯವಂಚನೆಯ ಸಾಂಸ್ಕೃತಿಕ ಮುಖವಾಗಿ ಅದು ಭಾರತದಲ್ಲಿ ಬೇರೂರಿತು. ವಿಶ್ವದ ಉಳಿದೆಲ್ಲ ಧರ್ಮ ಗಳಲ್ಲಿ ಹಾಸುಹೊಕ್ಕಾಗಿರುವ ನೊಂದವರ ಮೇಲ್ಪದರದ ಸಾಂತ್ವನ ಶಕ್ತಿ ಕ್ರೈಸ್ತ ಧರ್ಮದಲ್ಲಿ ವಿಶೇಷರೂಪದಲ್ಲಿ ಇದೆ. ಜೊತೆಗೆ, ಅದಕ್ಕಿರುವ ಹಣಬಲದಿಂದಾಗಿ ದೀನ ದಲಿತರನ್ನು, ಬಡವರನ್ನು ಬಹುಬೇಗ ಆಕರ್ಷಿಸುತ್ತದೆ. ಒಂದು ಧರ್ಮವಾಗಿ ತನ್ನದೇ ಆದ ಅನನ್ಯತೆ, ಗುಣ-ದೋಷಗಳನ್ನು ಹೊಂದಿರುವ ಕ್ರೈಸ್ತಧರ್ಮ, ವಸಾಹತುಶಾಹಿ, ಬಂಡವಾಳಶಾಹಿ ಮತ್ತು ಸಾಮ್ರಾಜ್ಯಶಾಹಿಗಳ ಕೈಲಿ ರಾಜಕೀಯ ಮತ್ತು ಸಾಂಸ್ಕೃತಿಕ ವಿಸ್ತರಣೆಯ ಸಾಧನವಾಗಿ, ಎಲ್ಲ ಅಭಿವೃದ್ಧಿಶೀಲ ದೇಶಗಳಲ್ಲೂ ಬಳಕೆಯಾಗುತ್ತಿದೆ. ಸಂಘಪರಿವಾರದ ಜನರು ಕ್ರೈಸ್ತಮತಪ್ರಚಾರದ ಸಾಮಾಜಿಕ ಆಯಾಮಕ್ಕೆ ಕುರುಡಾಗಿದ್ದರೂ ಅದರ ರಾಜಕೀಯ ಆಯಾಮವನ್ನು ಸರಿಯಾಗಿಯೇ ಗುರುತಿಸುತ್ತಾರೆ. ಆದರೆ ಅವರ ಹೋರಾಟ ಕ್ರೈಸ್ತಧರ್ಮದ ರಾಜಕೀಯ ಮುಸುಕಿನಲ್ಲಿ ಜನರನ್ನು ಆವರಿಸುವ ಬಂಡವಾಳಶಾಹಿ, ಸಾಮ್ರಾಜ್ಯಶಾಹಿಗಳ ವಿರುದ್ಧವಲ್ಲ. ಕ್ರೈಸ್ತಮತದ ರಾಜಕೀಯ ಆಯಾಮವನ್ನು ಎತ್ತಿ ತೋರಿಸಿ ಅದರ ಜಾಗದಲ್ಲಿ ತನ್ನನ್ನು ಹಿಂದೂ ಧರ್ಮದ ಹೆಸರಿನಲ್ಲಿ ಪ್ರತಿಷ್ಠಾಪಿಸಿ

## ಬತ್ತಿದ ಬುಗ್ಗೆ

ಗೆಳೆಯಾ,
ಕಮರಿ ಹೋದ ಕನಸುಗಳ
ಬಗ್ಗೆ ಕೇಳಬೇಡಾ
ನಿನ್ನ ಪ್ರೀತಿಯ
ಬುಗ್ಗೆಯ ಬಗ್ಗೆ
ಏನಂತ ಹೇಳಲಿ
ಬತ್ತಿ ಹೋಯ್ತದು
ಅಲ್ಪ ಕಾವಿಗೆ

**ಕುಸುಮಾ ನಾಕೋಸಾ ಕರಲೆ**
ಉಪನ್ಯಾಸಕರು, 'ನಾಕೋಸಾ', ೧ನೇ ಮೇನ್
ಶ್ರೀನಗರ, ಧಾರವಾಡ - ೫೮೦ ೦೦೩

ಕೊಳ್ಳುವುದು. ಅಂದರೆ ಶೋಷಕರ ಸ್ಥಾನಕ್ಕೆ ತಾನು ಬರುವುದು. ಏಸು ಬೆಕ್ಕನ್ನು ಕೊಂದ, ಗುಬ್ಬಚ್ಚಿಯನ್ನು ತಿಂದ ಎಂದು ಹೇಳುತ್ತಾ ಸಾಮ್ರಾಜ್ಯಶಾಹಿಯು ತಿನ್ನಲು ಹವಣಿಸುವ ಜನತಾ ಗುಬ್ಬಚ್ಚಿಯನ್ನು ತಾನೇ ತಿನ್ನುವುದು. ತನ್ನ ಜನಭಕ್ಷಕ ಗುಪ್ತೋದ್ದೇಶಗಳಿಗೆ, ಸ್ವದೇಶಿತನ, ದೇಶಭಕ್ತಿ, ದೈವಭಕ್ತಿ, ಸಂಸ್ಕೃತಿಯ ರಕ್ಷಣೆಗಳ ಗೋಚರ್ಮವನ್ನು ಹೊದ್ದಿಸಿ, ತಾನೂ ಸಾಮ್ರಾಜ್ಯಶಾಹಿಯ ಕೆಲಸವನ್ನೇ ಮಾಡುವುದು. ಕ್ರೈಸ್ತಮತ ಪ್ರಚಾರದ ರಾಜಕೀಯ ಆಯಾಮವನ್ನು ಎತ್ತಿತೋರಿಸುವ ಸಂಘಪರಿವಾರ ತನ್ನ ಧಾರ್ಮಿಕ ಮುಖದ ಒಳ ರಾಜಕೀಯವನ್ನು ಬಯಲುಮಾಡುವ ಯಾವುದೇ ಪ್ರಯತ್ನವನ್ನು ಮೃಗೀಯ ಬಲಪ್ರಯೋಗಗಳಿಂದ ಹತ್ತಿಕ್ಕುತ್ತದೆ. ಪಬ್‌ಗಳಲ್ಲಿ ಮೋಜುಮಾಡುವ ಮಧ್ಯಮ ವರ್ಗೀಯ ಜನರ ಮೇಲೆ ಸಂಸ್ಕೃತಿಯ ಪೊಲೀಸರೆಂದು ದಾಳಿ ಮಾಡುವ ಸಂಘಪರಿವಾರಕ್ಕೆ ಲಕ್ಷಾಂತರ ಕೆಳ ವರ್ಗದ ಕುಟುಂಬಗಳು ಶ್ರಮದಿಂದ ಸಂಪಾದಿಸಿದ ಪುಡಿಗಾಸುಗಳನ್ನು ಬಸಿದುಕೊಂಡು ಕೋಟ್ಯಧಿಪತಿಗಳಾಗಿ ಸಂಸ್ಕೃತಿಯ ರಕ್ಷಣೆಗೆ ವಂತಿಗೆ ಕೊಡುವ ಹೆಂಡದ ಉದ್ಯಮ, ಅದನ್ನಾಧರಿಸಿದ ಸಾಮ್ರಾಜ್ಯಶಾಹಿ, ಬಂಡವಾಳಶಾಹಿ ರಾಜಕೀಯ ಏಕೆ ಕಾಣಿಸುವುದಿಲ್ಲ? ಪಬ್‌ಗಳಲ್ಲಿ ಕಾಣಿಸುವ ಹೆಂಗಳೆಯರ ಮೇಲೆ ದಾಳಿ ಮಾಡುವುದಕ್ಕಿಂತ ಹೆಂಡದಂಗಡಿಗಳ ಮೇಲೆ ಏಕೆ ದಾಳಿ ಮಾಡುವುದಿಲ್ಲ? ಹೆಂಡ ಮತ್ತು ಹೊಗೆಸೊಪ್ಪಿನ ದೈತ್ಯ ಉದ್ಯಮಗಳ ಮೇಲೆ ಏಕೆ ದಾಳಿ ಮಾಡುವುದಿಲ್ಲ? ಇದು ಅವರ ಅಜ್ಞಾನದ ಫಲವಲ್ಲ, ವರ್ಗಹಿತಾಸಕ್ತಿಯ ರಕ್ಷಣೆ. ಇಂಥ ವಿಚಾರಗಳು ಸಂಘಪರಿವಾರದ ತಳಮಟ್ಟದ ಕಾರ್ಯಕರ್ತರಿಗೆ ಗೊತ್ತಿರಬೇಕೆಂದು ನಿರೀಕ್ಷಿಸುವುದು ಸಾಧುವಲ್ಲ. ಆದರೆ ಭಾವಾವೇಶ ಮತ್ತು ಕುರುಡು ಅಭಿಮಾನಗಳಿಂದ ಪ್ರೇರಿತರಾಗಿ, ತಕ್ಷಣದ ಕ್ಷಣಿಕ ಲಾಭಗಳಿಗಾಗಿ ರಾಜಕೀಯ ನೇತಾರರ ಆಜ್ಞಾಧಾರಕರಾಗಿ ಕಣಕ್ಕಿಳಿದು ಹೋರಾಡುವ ಕಾರ್ಯಕರ್ತರ ಹಿಂದೆ ನಿಂತು ಕಾರ್ಯ ನಿರ್ವಹಿಸುವ ಅಸಾಧಾರಣ ಗ್ರಹಿಕೆಯ ಬೌದ್ಧಿಕ್ ಥಿಂಕ್‌ಟ್ಯಾಂಕ್‌ಗೆ ತನ್ನ ವರ್ಗಹಿತಾಸಕ್ತಿ ಏನೆಂಬುದು ಗೊತ್ತಿದೆ. ಅದರ ಆದ್ಯತೆ, ತಳಮಟ್ಟದ ಬಡ ಕಾರ್ಯಕರ್ತರ ಅರಿವು ವಿಸ್ತಾರವಾಗದಂತೆ ನೋಡಿಕೊಳ್ಳುವ ಕೆಲಸ. ಮಧ್ಯಮವರ್ಗೀಯರ ಸ್ವಧರ್ಮಪ್ರೀತಿಯನ್ನು ಉತ್ತೇಜಿಸಿ ವ್ಯಾಪಾರಿಗಳ ಹಿತಾಸಕ್ತಿಯನ್ನು ಕಾಯುವ, ರಾಜಕೀಯ ಲಾಭವನ್ನು ಒಟ್ಟುಗೂಡಿಸಿಕೊಳ್ಳುವ ಕೆಲಸ.

ಯಾವುದೇ ಮತ-ಧರ್ಮದಲ್ಲಿನ ಭಕ್ತಿಪಂಥ ಬಡವರ ಪಂಥ. ದೀನ ದಲಿತರನ್ನು ಸದ್ಯದ ನೋವುಗಳಿಂದ ತಾತ್ಕಾಲಿಕವಾಗಿ ಪಾರುಮಾಡುವ, ಬಡತನದ ನರಳಿಕೆಯ ವಿರುದ್ಧ ಭ್ರಮಾತ್ಮಕ ಪರಿಹಾರಗಳನ್ನು ಸೂಚಿಸುವ ಭಾವನಾತ್ಮಕ ಉಪಾಯ, ಸಾಮುದಾಯಿಕ ಕ್ರಿಯಾಚರಣೆ. ಪಶ್ಚಿಮ ಬಂಗಾಳ, ಒರಿಸ್ಸಾ ಮತ್ತು ಮಹಾರಾಷ್ಟ್ರದ ಭಕ್ತಿಪಂಥಗಳ ನೇತಾರರು ಸ್ವತಃ ಬಡವರು ಅಥವಾ ಸಹಜೀವಿಗಳ ನರಳಿಕೆಯನ್ನು ನೋಡಲಾಗದ ಭಾವನಾಪ್ರಧಾನ ಸ್ವಭಾವದ ಸಂಘಟಕರು. ತಾತ್ವಿಕ ಮತ್ತು ವೈಚಾರಿಕ ನೆಲೆಗಳಿಂದ ಸಹಜೀವಿಗಳ ನರಳಿಕೆಯನ್ನು ಪರಿಹರಿಸಲೆತ್ನಿಸಿದ ಎಲ್ಲ ಸಂತರೂ ಬಡವರಿಂದ ಸುತ್ತುವರೆದ ಆದರೆ ಅನುಷ್ಠಾನದಲ್ಲಿ ಶ್ರೀಮಂತರ ವರ್ಗ ನೆಲೆಯನ್ನು ವಿರೋಧಿಸದ ಧಾರ್ಮಿಕ ನೇತಾರರೆ. ಈ ಮಿತಿಯಿಂದ ಹೊರಬರಲಾಗದ ಸಂತರು

ಈಗಲೂ ನಮ್ಮ ನಡುವೆ ಇದ್ದಾರೆ. ಇಂಥವರು ವೈಯಕ್ತಿಕವಾಗಿ ಶೋಷಣೆಯ ವಿರುದ್ಧ ಇದ್ದರೂ ಸಾಮಾಜಿಕವಾಗಿ, ತೇಪೆದಾರಿಕೆಯ ಸಮಾಜವಾದವನ್ನು, ಹೆಚ್ಚೆಂದರೆ ವೈಯಕ್ತಿಕ ತ್ಯಾಗ-ಸರಳತೆಗಳನ್ನು ಆಶ್ರಮ ಜೀವನದ ಚೌಕಟ್ಟಿನಲ್ಲಿ ಆಚರಿಸುತ್ತಾರೆ. ಸಾಮಾಜಿಕ ಸಂತರು, ತಾತ್ವಿಕವಾಗಿ ಸಮಾಜವಾದದ ಜೀವನದೃಷ್ಟಿಯನ್ನು ಒಪ್ಪಿದವರು. ವ್ಯಾಪಾರಿಗಳ ದಾನದ ಮೇಲೆ ನಿಂತ ಸೇವಾಸಂಸ್ಥೆಗಳ ಚೌಕಟ್ಟಿನೊಳಗೆ ಸಾಧ್ಯವಾಗುವಷ್ಟು ಸಮಾನತೆಯನ್ನು ಸಹಜೀವಿಗಳು ಮತ್ತು ಅನುಯಾಯಿಗಳ ಜೀವನಕ್ರಮದಲ್ಲಿ ತರಲು ಇವರು ಸಫಲರಾಗುತ್ತಾರೆ. ಇವರ ವೈಯಕ್ತಿಕ ತ್ಯಾಗಜೀವನ, ಅಥವ ಭೋಗಜೀವನ ಹೇಗೇ ಇದ್ದರೂ ಇವರ ಸಾಮಾಜಿಕ ಕೊಡುಗೆ ಗೌಣವಲ್ಲ. ತಮ್ಮ ಹೊರಗಿನ ಮತ್ತು ಒಳಗಿನ ವೈರುಧ್ಯಗಳ ತಾಕಲಾಟವನ್ನು ನಿಭಾಯಿಸಲು ಪ್ರಜ್ಞೆಯ ಮರೆಸು ಉಪಾಯಗಳಾದ ಧ್ಯಾನ, ಜಪ, ಸಾಮೂಹಿಕ ಭಜನೆಗಳೊಂದಿಗೆ, ಆರೋಗ್ಯವನ್ನು ಸುಧಾರಿಸುವ ಯೋಗಾಸನ, ಆಯುರ್ವೇದ, ಮುಂತಾದ ಜನೋಪಯೋಗೀ ಕಾರ್ಯಕ್ರಮಗಳನ್ನು ಈ ಜನ ಹಮ್ಮಿಕೊಳ್ಳುತ್ತಾರೆ. ಅಧಿಕಾರ ಮತ್ತು ಯಥಾಸ್ಥಿತಿವಾದವನ್ನು ಪ್ರತಿನಿಧಿಸುವ ವಿಷ್ಣು ಮತ್ತು ಅವನ ಅನುಚರರ ಪೂಜಕರು, ಕೃಷಿ, ಬಡತನ ಮತ್ತು ಸಾಂಸ್ಕೃತಿಕ ಸೃಜನಶೀಲತೆಗಳನ್ನು ಪ್ರತಿನಿಧಿಸುವ ಶಿವ ಮತ್ತು ಅವನ ಅನುಚರರ ಪೂಜಕರು ಇಲ್ಲಿ ಒಂದುಗೂಡುತ್ತಾರೆ. ಸಂಘಪರಿವಾರಕ್ಕೆ ತನ್ನ ಗುಪ್ತ ಅಜೆಂಡಾವನ್ನು ಹರಡಲು ಇದು ಹೇಳಿಮಾಡಿಸಿದ ಫಲವತ್ತಾದ ಕ್ಷೇತ್ರ. ಜಗದ್ಗುರುಗಳು, ಸಾಧುಸಂತರು, ಮಹಾತ್ಮರು, ಪುಣ್ಯಕ್ಷೇತ್ರಗಳ ಧರ್ಮಾಧಿಕಾರಿಗಳು ಸಂಘಪರಿವಾರವನ್ನು ಆಕರ್ಷಿಸಲು ಇದು ಬಹು ಮುಖ್ಯಕಾರಣ. ಸಂಘಪರಿವಾರದ ಸರ್ಕಾರಗಳು ಧಾರ್ಮಿಕ ಕ್ಷೇತ್ರಗಳಿಗೆ, ಪುಣ್ಯಕ್ಷೇತ್ರಗಳಿಗೆ, ಅಭಿವೃದ್ಧಿಯ ಹೆಸರಿನಲ್ಲಿ ಕೊಡಮಾಡುವ ಹಣ, ಭೂಮಿ ಮುಂತಾದ ವಿಶೇಷ ಸವಲತ್ತುಗಳು ಕೇವಲ ಧರ್ಮಾಭಿಮಾನದಿಂದ ಕೊಟ್ಟವುಗಳಲ್ಲ. ಆ ಕ್ಷೇತ್ರಗಳ ವರ್ತುಲದೊಳಕ್ಕೆ ಬರುವ ಜನರನ್ನು ತಮ್ಮ ತೆಕ್ಕೆಯೊಳಕ್ಕೆ ತೆಗೆದುಕೊಳ್ಳುವ ಗೋಮುಖವ್ಯಾಘ್ರದ ರಾಜಕೀಯಕ್ಕಾಗಿ. ಅದರ ನೇರ ಫಲಾನುಭವಿಗಳು ಮತ್ತೆ ಸಂಘಪರಿವಾರಕ್ಕೆ ಸೇರಿದ ಅಥವಾ ಸಮರ್ಥಿಸುವ ಗುತ್ತಿಗೆದಾರರು ಮತ್ತು ವ್ಯಾಪಾರಿಗಳು. ಹೊರ ನೋಟಕ್ಕೆ ಈ ಕ್ರಮಗಳು ಧಾರ್ಮಿಕ ಉದ್ದೇಶಗಳಿಗಾಗಿ, ಸಂತರು ಮಾಡುವ ಜನಸೇವೆಗಾಗಿ ಕೊಟ್ಟವು ಎಂಬಂತೆ ತೋರುವುದರಿಂದ ಇವನ್ನು ವಿರೋಧಿಸುವವರನ್ನು ಜನಸಾಮಾನ್ಯರು ಅಸಹನೆಯಿಂದ ನೋಡುವುದು ಸಹಜ. ಅವರು ನಾಸ್ತಿಕ ದೃಷ್ಟಿಯ ಕಮ್ಯುನಿಸ್ಟರಾಗಿಯೋ, ವಿರೋಧಪಕ್ಷದ ಭ್ರಷ್ಟರಾಜಕಾರಣಿಗಳಾಗಿಯೋ ಬಿಂಬಿತವಾಗುತ್ತಾರೆ. ಇಂಥವರ ಮೇಲೆ ಅಮಾಯಕರಾದ ಧರ್ಮದ ಅಂಧಾಭಿಮಾನಿಗಳನ್ನು, ಅದರ ಫಲಾನುಭವಿಗಳನ್ನು ಧರ್ಮರಕ್ಷಣೆ - ಸಂಸ್ಕೃತಿರಕ್ಷಣೆಯ ಹೆಸರಿನಲ್ಲಿ ಎತ್ತಿಕಟ್ಟುವುದು ಸಂಘಪರಿವಾರಕ್ಕೆ ನೀರು ಕುಡಿದಷ್ಟು ಸುಲಭ. ಅವರ ಕುಕೃತ್ಯಗಳ ನಿರ್ಲಜ್ಜ ಸಮರ್ಥನೆ, ರಾಜಕೀಯ ಠೇಂಕಾರಗಳ ಹಿಂದೆ ಜನಸಾಮಾನ್ಯರ ದೌರ್ಬಲ್ಯವನ್ನು ಹೀಗೆ ಬಳಸಿಕೊಳ್ಳಬಲ್ಲೆವೆಂಬ ವಿಶ್ವಾಸ, ಭಾವೋದ್ರೇಕ - ಅಧಿಕಾರ - ಹಣಬಲದಿಂದ ಗೆಲ್ಲಬಲ್ಲೆವೆಂಬ ಅಹಂಕಾರಗಳಿವೆ.

ಸಂಘಪರಿವಾರ ಮೇಲ್ನೋಟಕ್ಕೆ, ಬೌದ್ಧಿಕವಾಗಿ ಎಷ್ಟೇ ಅಲ್ಲಗಳೆದರೂ, ಭಾವನಾತ್ಮಕವಾಗಿ ಮತ್ತು ರಾಜಕೀಯವಾಗಿ ಇಸ್ಲಾಂ ಧರ್ಮೀಯರನ್ನು ಆಕ್ರಮಣಕಾರರೆಂದು, ಅನ್ಯರೆಂದು, ಅಸಹನೆಯಿಂದ ನೋಡುತ್ತದೆ. ಭಾರತದ ವಿಭಜನೆಯ ಕಾಲದ ರಾಜಕೀಯದಿಂದಾಗಿ ಮತ್ತೆ ಸಂಘಪರಿವಾರವು ಸೃಷ್ಟಿಸುವ ಪೇಚಿನಿಂದಾಗಿ ಮಹಮದೀಯರು ತಮ್ಮ ದೇಶಪ್ರೇಮವನ್ನು ಸದಾ ಪ್ರದರ್ಶಿಸಿ ಒಪ್ಪಿಸಬೇಕಾದ ಇಕ್ಕಟ್ಟಿಗೆ ಪದೇಪದೇ ದೂಡಿಸಿಕೊಂಡು ಬದುಕಬೇಕಾಗಿದೆ. ಇದರಿಂದ ಹುಟ್ಟುವ ಕಹಿಯಿಂದಾಗಿ ಅಲ್ಪಸಂಖ್ಯಾತ ಚಿಪ್ಪಿನಿಂದ ಹೊರಬರಲಾಗದೆ ಅವರು ಸದಾ ಒದ್ದಾಡುತ್ತಾರೆ. ಬಡತನ, ಅನಕ್ಷರತೆ, ಮತಾಂಧತೆ, ರಾಜಕೀಯ ಅರಿವಿನ ಅಭಾವದಿಂದ ಹುಟ್ಟುವ ಕುರುಡುತನ ಯಾವುದೇ ಕೋಮಿಗೆ ಸೇರಿದ ಜನಸಾಮಾನ್ಯರ ಪ್ರಬಲ ಶತ್ರು. ಸಂಘಪರಿವಾರವು ಅನೇಕ ದಶಕಗಳಿಂದ ಭಾರತದ ರಾಜಕೀಯದಲ್ಲಿ ಆಡುತ್ತಾ ಬಂದಿರುವ ದೂಷಕ-ದೂಷಿತ-ರಕ್ಷಕದ ಮೂಲೆಯಾಟದಲ್ಲಿ ಅಲ್ಪಸಂಖ್ಯಾತರದು ಯಾವಾಗಲೂ ಆತಂಕದ ಸ್ಥಾನವೇ. ಈ ಆಟದಲ್ಲಿ ನಿಜವಾದ ಆತಂಕವಾದಿಗಳು ದೂಷಕರೆ. ಆದರೆ ಬೆಲೆ ತೆರಬೇಕಾದವರು ಮಾತ್ರ ದೂಷಿತರ ಸ್ಥಾನಕ್ಕೆ ದೂಡಲ್ಪಟ್ಟವರು. ಇದಕ್ಕೆ ವಿಶ್ವದ ಮಹಮದೀಯರೂ ಹೊರತಲ್ಲ.

ಅಮೆರಿಕಾ ಮತ್ತು ಅರಬ್‌ದೇಶಗಳ ನಡುವಿನ ತೈಲರಾಜಕೀಯ, ಇಸ್ರೇಲ್ ಮತ್ತು ಪ್ಯಾಲೆಸ್ಟೀನ್ ಜನರ ಸ್ವಾತಂತ್ರ್ಯ ಹೋರಾಟ, ಅಮೆರಿಕಾ ಪ್ರಣೀತ, ಬಗೆಹರಿಸಬಾರದ ಯುದ್ಧ ರಾಜಕೀಯವಾಗಿ ನಿರಂತರ ನೋವನ್ನು ಎಲ್ಲ ಮತ-ಧರ್ಮಗಳ ಜನಸಾಮಾನ್ಯರಿಗೂ ಕೊಡುತ್ತಿದೆ. ಬಂಡವಾಳಶಾಹಿ ಸಾಮ್ರಾಜ್ಯಶಾಹಿ ಮತ್ತು ಸಮಾಜವಾದಿ ಬಣಗಳ ಶೀತಲ ಸಮರದಲ್ಲಿ ಭಾರತದ ಬಂಡವಾಳಶಾಹಿ-ಭೂಮಾಲಿಕ ಆಳುವ ವರ್ಗ ನೆಹರು ಮತ್ತು ಇಂದಿರಾ ಗಾಂಧಿ ಸರ್ಕಾರಗಳ ಮೂಲಕ ತನ್ನದೇ ಆದ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಸಮಾಜವಾದಿ ಬಣ ಮತ್ತು ಅರಬ್ ರಾಷ್ಟ್ರಗಳತ್ತ ವಾಲಿದ ಅಲಿಪ್ತನೀತಿಯನ್ನು ಅನುಸರಿಸುತ್ತಿತ್ತು. ಭಯೋತ್ಪಾದಕತೆ ಮತ್ತು ಯುದ್ಧವನ್ನು ತನ್ನ ರಾಜಕೀಯದ ಅವಿಭಾಜ್ಯ ಅಂಗವನ್ನಾಗಿ ಮಾಡಿಕೊಂಡಿರುವ ಅಮೆರಿಕಾದ ದಮನಕಾರಿ ನೀತಿಯಿಂದಾಗಿ ಅತ್ಯಂತ ತೊಂದರೆಗೊಳಗಾದವರು ಇಸ್ಲಾಂ ಧರ್ಮೀಯರೆ. ಇದರ ನೇರ ಫಲವಾಗಿ ಹುಟ್ಟಿದ ಎಲ್ಲ ಉಗ್ರರಾಜಕೀಯವನ್ನು, ಭಯೋತ್ಪಾದಕತೆಯನ್ನು ಇಸ್ಲಾಮಿಕ್ ಭಯೋತ್ಪಾದನೆ ಎಂದು ಕ್ರೈಸ್ತ ಮತ್ತು ಯಹೂದಿ ಧರ್ಮೀಯರೆ ಬಹು ಸಂಖ್ಯೆಯಲ್ಲಿರುವ ಪಶ್ಚಿಮ ದೇಶಗಳ ಆಳುವ ವರ್ಗಗಳು, ಅವರದೇ ಆದ ಮಾಧ್ಯಮಗಳ ಮೂಲಕ ಹೆಸರಿಸಿ ಎಲ್ಲೆಡೆ ಪ್ರಚಾರ ಮಾಡಿದರು. ಸಮಾಜವಾದಿ ಬಣದ ಪತನವಾದಮೇಲೆ, ವಿಶ್ವ ಮಟ್ಟದ ಶಕ್ತಿರಾಜಕೀಯದಲ್ಲಿ ಆದ ಅಸಮತೋಲನೆಯಲ್ಲಿ ಭಾರತ ಅಮೆರಿಕಾದ ಕಡೆ ವಾಲಿದ್ದರಿಂದ ಜನಸಾಮಾನ್ಯರಲ್ಲಿದ್ದ ಭಾರತವು ಅರಬ್ ದೇಶಗಳ ಮಿತ್ರ ಎಂಬ ಭಾವನೆ ಮರೆಯಾಯಿತು. ಅಮೆರಿಕದ ಯುದ್ಧ ನೀತಿಯ ಬಲಿಪಶು, ಫಲಾನುಭವಿ ಎರಡೂ ಆಗಿರುವ ಪಾಕಿಸ್ತಾನದ ದುರ್ಬಲ ರಾಜಕೀಯ ಮತ್ತು ಭಾರತದ ಕಾಶ್ಮೀರ ಸಮಸ್ಯೆಯ ಕಗ್ಗಂಟು ಎರಡೂ ಸೇರಿ ಗಡಿಯಂಚಿನ ಉಗ್ರ ರಾಜಕೀಯ ಮತ್ತು ಭಯೋತ್ಪಾದಕತೆಯನ್ನು ಹುಟ್ಟುಹಾಕಿದ್ದವು. ರಾಜಕೀಯ ದೂರದರ್ಶಿತ್ವವಿಲ್ಲದ, ಸಂಕುಚಿತ, ಸದ್ಯದ ಲಾಭಗಳ ಮೇಲೆ ಕಣ್ಣಿಟ್ಟ ಸಂಘಪರಿವಾರವು ಬಾಬ್ರಿಮಸೀದಿಯನ್ನು ಕೆಡವಿ ಹಿಂದೂರಾಜ್ಯದ ತನ್ನ ಕನಸನ್ನು ಭಾರತದ ರಾಜಕೀಯದಲ್ಲಿ ಪ್ರತಿಷ್ಠಾಪಿಸಿತು. ಇದರಿಂದ ಗಡಿಯಂಚಿಗೆ ಮಾತ್ರ ಸೀಮಿತವಾಗಿದ್ದ ಭಯೋತ್ಪಾದಕತೆ ಇಡೀ ಭಾರತವನ್ನು ವ್ಯಾಪಿಸಿತು. ರಾಜೀವ ಗಾಂಧಿ - ನರಸಿಂಹರಾವ್ - ವಾಜಪೇಯಿ - ಮನಮೋಹನ್ ಸಿಂಗ್ ರಾಜಕೀಯದ ಭಾರತವು ಅಮೆರಿಕಾ ನೇತೃತ್ವದ ಸಾಮ್ರಾಜ್ಯಶಾಹಿಯ ರಾಜಕೀಯ ಅರ್ಥಿಕತೆಗಳನ್ನು ಮುಕ್ತವಾಗಿ ಬೆಂಬಲಿಸಿದ್ದಷ್ಟೇ ಅಲ್ಲ ಇಸ್ರೇಲ್ ಪರವಾದ ತಪ್ಪು ವಿದೇಶಾಂಗ ನೀತಿಯನ್ನೂ ಅನುಸರಿಸಿತು. ಇವೆಲ್ಲದರ ಫಲವಾಗಿ ವಿಶ್ವಮಟ್ಟದ ಭಯೋತ್ಪಾದಕತೆಯ ನೇರಗುರಿಯಾಗಿದ್ದ ಅಮೆರಿಕಾದ ಪಾಪಗಳಿಗೆ ಭಾರತವೂ ಪಾಲುದಾರ ಎನಿಸಿಕೊಂಡಿತು. ಹಿಂದೂ-ಮುಸ್ಲಿಮ್ ಸಹಜೀವನದಲ್ಲಿ ಇದ್ದ ಅನೇಕ ತಲೆಮಾರುಗಳ ಸಾಮರಸ್ಯ ಗಂಡಾಂತರಕ್ಕೆ ಸಿಕ್ಕಿಕೊಂಡಿತು. ಇದರ ಫಲವನ್ನು ಭಾರತದ ಜನಸಾಮಾನ್ಯರು ಈಗ ಉಣ್ಣುವಂತಾಗಿದೆ. ಆದರೆ ಸಂಘಪರಿವಾರವು, ತಾನೇ ಪೋಷಿಸಿ ಅದರ ಫಲಾನುಭವಿಯೂ ಆಗಿರುವ ಸಮಸ್ಯೆಯ ಬಗ್ಗೆ ಜನಜಾಗೃತಿ ಮೂಡಿಸುತ್ತೇನೆಂದು ಹೊರಟಿದೆ. ಬೆಂದ ಮನೆಯಲ್ಲಿ ಗಳ ಹಿರಿಯುವಂತೆ ಇಸ್ಲಾಮಿಕ್ ಭಯೋತ್ಪಾದಕತೆಯ ವಿರುದ್ಧ ಅಭಿಯಾನದ ಹೆಸರಿನಲ್ಲಿ ಹಿಂದೂ-ಮುಸ್ಲಿಂ ಭೇದವನ್ನು ಎಲ್ಲಡೆ ಹರಡುತ್ತಿದೆ. ಜನರ ನಡುವೆ ದ್ವೇಷ, ಅಸಹನೆಗಳನ್ನು ಬಿತ್ತಲು ರಾಜಕೀಯ ಅಧಿಕಾರವನ್ನು ಬಳಸಿಕೊಳ್ಳುತ್ತಿರುವ ಸಂಘಪರಿವಾರದ ಈ ಕ್ರಮ ದೆವ್ವವೇ ಭಗವದ್ಗೀತೆಯನ್ನು ಉಪದೇಶಿಸಿದಂತೆ ಆಗಿದೆ.

ವಿಶ್ವದ ಪೊಲೀಸೆಂದು, ಪ್ರಜಾಪ್ರಭುತ್ವದ ರಕ್ಷಕನೆಂದು, ಮಾನವಹಕ್ಕುಗಳ ಪ್ರತಿಪಾದಕನೆಂದು ಸಾರುತ್ತಾ ತನ್ನ ದಮನಕಾರಿ ನೀತಿಗಳಿಂದ ಭಯೋತ್ಪಾದಕತೆಯನ್ನು ಹುಟ್ಟುಹಾಕಿದ್ದೆ ಅಮೆರಿಕಾ. ಅದನ್ನು ಈಗಲೂ ಪೋಷಿಸಿ ಬೆಳೆಸುತ್ತಿರುವ ಅಮೆರಿಕಾದ ಸಾಮ್ರಾಜ್ಯಶಾಹಿ ಆರ್ಥಿಕತೆ ಅಮೆರಿಕಾದ ಯುದ್ಧರಾಜಕೀಯದ ಅವಿಭಾಜ್ಯ ಅಂಗ. ಜನಾಂಗೀಯ ದ್ವೇಷ-ಹಿಂಸೆಯ ಆಧಾರದ ಮೇಲೆ ತನ್ನ ಸಾಮ್ರಾಜ್ಯವನ್ನು ಕಟ್ಟಿ ಬೆಳೆಸಿದ ಫ್ಯಾಸಿಸ್ಟ್ ಜರ್ಮನಿಯ ದಕ್ಷತೆ, ಕಾರ್ಯಕ್ಷಮತೆ, ಕ್ರೌರ್ಯಗಳ ಮುಂದುವರಿಕೆಯೇ ಅಮೆರಿಕಾದ ಸಾಮ್ರಾಜ್ಯಶಾಹಿ. ಭಾರತದಲ್ಲಿ ಹಿಂದೂಸಂಸ್ಕೃತಿಯ ಪೊಲೀಸೆಂದು, ಬಾಯಲ್ಲಿ ಸ್ವದೇಶೀ ಮಂತ್ರವನ್ನು ಜಪಿಸುತ್ತಾ ಆರ್ಥಿಕವಾಗಿ ಸಾಮ್ರಾಜ್ಯಶಾಹಿಯನ್ನು ಸಮರ್ಥಿಸುವ ಸಂಘಪರಿವಾರಕ್ಕೆ ಈಗಲೂ ಜರ್ಮನಿ, ಅಮೆರಿಕಾಗಳ ಆರ್ಥಿಕ ನೀತಿಗಳೆ ಆದರ್ಶ. ಇಂದಿನ ಭಾರತದ ನಿಜವಾದ ಸಮಸ್ಯೆ ಧರ್ಮ, ಕೋಮುವಾದ, ಭಯೋತ್ಪಾದನೆಯಲ್ಲ; ಸಂಘಪರಿವಾರವು ಧರ್ಮ-ಸಂಸ್ಕೃತಿಗಳ ಮುಸುಕಿನಲ್ಲಿ ಮುನ್ನೊತ್ತುತ್ತಿರುವ ಫ್ಯಾಸಿಸಂನ ಆಧುನಿಕ ರೂಪಗಳೇ ಆದ ಬಂಡವಾಳಶಾಹಿ ಮತ್ತು ಸಾಮ್ರಾಜ್ಯಶಾಹಿ.

ಎ. ಎಸ್. ಲಕ್ಷ್ಮೀನಾರಾಯಣ
ಎಂ. ೧೨೩೭, ೨ನೇ ಮುಖ್ಯರಸ್ತೆ, ವಿವೇಕಾನಂದನಗರ, ಮೈಸೂರು - ೫೭೦ ೦೨೩



## ಡ್ರ್ಯಾಗನ್ಸ್ ಮಹಾಗೋಡೆಯೊಳಗೆ...

(ಚೀನಾ ಪ್ರವಾಸ ಕಥನ)

ಎಂ. ವೆಂಕಟಸ್ವಾಮಿ

**ಪುಟ : ೧೮೪** **ಬೆಲೆ : ರೂ. ೯೦**

**ಜಾಗೃತಿ ಪ್ರಿಂಟರ್ಸ್**, ನಂ. ೫೬/೧-೬, ನರಸಿಂಹಯ್ಯ ಗಾರ್ಡನ್, ಕೊಟ್ಟಿಗೆ ಪಾಳ್ಯ, ಮಾಗಡಿ ಮುಖ್ಯರಸ್ತೆ, ಬೆಂಗಳೂರು - ೫೬೦ ೦೯೧

ಚಂದ್ರನಲ್ಲಿ ನಿಂತು ಭೂಮಿಯ ಕಡೆಗೆ ನೋಡಿದರೆ ಚೀನಾದ ಮಹಾಗೋಡೆಯನ್ನು ಗುರುತಿಸಬಹುದಂತೆ! ತೀರ ಇತ್ತೀಚಿನವರೆಗೂ ಹೆಚ್ಚು ಕಡಿಮೆ ಪ್ರಪಂಚಕ್ಕೆ ನಿಗೂಢವಾಗಿದ್ದ ಚೀನಾ ತನ್ನ ಹಳೆಯ ವ್ಯವಸ್ಥೆಗಳನ್ನು ಕೊಡವಿ ಇಂದಿನ ಜಾಗತೀಕರಣಕ್ಕೆ ತೆರೆದುಕೊಂಡು ಅಭಿವೃದ್ಧಿಯತ್ತ ದಾಪುಗಾಲು ಹಾಕುತ್ತಾ ಮುನ್ನಡೆದಿದೆ. ಯೂರೋಪ್ ಅಮೆರಿಕಾಗಳಿಂದ ಅಧ್ಯಾಪಕರನ್ನು ಕರೆಸಿ ಶಾಲೆಗಳಲ್ಲಿ ಇಂಗ್ಲಿಷ್ ಕಲಿಸುತ್ತಿದೆ. ಅಮೆರಿಕಾ ಕಡೆ ನೋಡುತ್ತಿದ್ದವರು ಈಗ ಚೀನಾದತ್ತ ನೋಡುತ್ತ ಅವರು ಒಲಂಪಿಕ್ಸ್‌ನಲ್ಲಿ ಗಳಿಸಿದ ಚಿನ್ನವನ್ನು ಲೆಕ್ಕ ಹಾಕುತ್ತಿದ್ದಾರೆ. ಭೂವಿಜ್ಞಾನಿ ಶ್ರೀ ವೆಂಕಟಸ್ವಾಮಿ ತರಬೇತಿಗಾಗಿ ಚೀನಾಕ್ಕೆ ಭೇಟಿ ನೀಡಿದ್ದು, ಬಹಳ ಆಸ್ಥೆಯಿಂದ ಅಲ್ಲಿಯ ಮಾಹಿತಿ ನೀಡಿದ್ದಾರೆ.






## ಚಿತ್ರ-ಕತೆ (ಜಗತ್ತಿನ ಸಿನಿಮಾಗಳ ಅವಲೋಕನ)

ಎ. ಎನ್. ಪ್ರಸನ್ನ

**ಪುಟ : ೨೪೪ + ೧೬** **ಬೆಲೆ : ರೂ. ೧೪೦**

**ಚಿಂತನ ಪುಸ್ತಕ ಮಳಿಗೆ**, ಪಂಡಿತ್ ಸಾರ್ವಜನಿಕ ಲೈಬ್ರರಿ, ಶಿರಸಿ, ಉತ್ತರ ಕನ್ನಡ ಜಿಲ್ಲೆ

ಅಂತರರಾಷ್ಟ್ರೀಯ ಚಲನಚಿತ್ರೋತ್ಸವಗಳಲ್ಲಿ ಪಾಲ್ಗೊಂಡು ಪ್ರಶಸ್ತಿಗಳನ್ನು ಬಾಚಿಕೊಂಡ ವಿವಿಧ ದೇಶಭಾಷೆಗಳ ಮೂವತ್ತೆರಡು ಸಿನಿಮಾಕಥೆಗಳು ಇಲ್ಲಿವೆ. ದೇಶ-ವಿದೇಶಗಳ ಜೀವನಶೈಲಿ ಪರಸ್ಪರ ಭಿನ್ನ, ಆಯಾ ಪ್ರದೇಶಗಳ ನೋವು-ನಲಿವು-ಸಮಸ್ಯೆಗಳ ತಳಹದಿಯೊಂದಿಗೆ ನಿರ್ಮಾಣಗೊಂಡ ಚಿತ್ರಗಳಿಂದ ನಾವು ದೂರದ ನಾಡಿನ ನಾಡಿಮಿಡಿತವನ್ನು ಗ್ರಹಿಸಬಹುದು. ಚಲನಚಿತ್ರಗಳ ಮೂಲಕ ಮಾಡಿದ ಸಾಮಾಜಿಕ ಸಮಸ್ಯೆಗಳ ವಿಶ್ಲೇಷಣೆ ಮತ್ತು ಜಾಗತಿಕ ಚಿತ್ರೋತ್ಸವದಲ್ಲಿ ಮಿಂಚಿದ ಸಿನಿಮಾಗಳ ವಿಶ್ಲೇಷಣೆ ಎರಡೂ ಇಲ್ಲಿವೆ. ಪ್ರತಿಭಾವಂತ ಚಿತ್ರನಿರ್ದೇಶಕರ ಪರಿಚಯವಿದೆ. ಸ್ಪೀಲ್‌ಬರ್ಗ್ ಅವರ 'ಶಿಂಡ್ಲರ್ಸ್ ಲಿಸ್ಟ್' ಹಾಗೂ ತಾಮಿನೆ ಮಿಲಾನಿ ಅವರ 'ಹಿಡನ್ ಹಾಫ್' ಗಮನ ಸೆಳೆಯುತ್ತವೆ. ಭಾರತದ ಒಂದೇ ಒಂದು ಚಿತ್ರದ ಪರಿಚಯವೂ ಇಲ್ಲದಿರುವುದು ಪುಸ್ತಕದ ಕೊರತೆಯೆಂದೇ ಹೇಳಬೇಕಾಗಿದೆ.

## ನೀಲಿಗುಚ್ಛ



ಅನುವಾದ : ಎಂ. ಎಸ್. ರಘುನಾಥ್

**ಪುಟ : x + ೭೦** **ಬೆಲೆ : ರೂ. ೭೦**

**ಕಶ್ಯಪ ಪ್ರಕಾಶನ**, ಎಚ್.ಐ.ಜಿ.-೪೦, ೬ನೇ ಮುಖ್ಯರಸ್ತೆ, ಕೆ.ಹೆಚ್.ಬಿ. ಕಾಲೋನಿ ೨ನೇ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

ಇವು ಇಂಗ್ಲಿಷ್, ರಷ್ಯನ್, ಜರ್ಮನ್ ಭಾಷೆಯ ಲೇಖಕರ ಕಥೆಗಳಾಗಿದ್ದು ಇಂಗ್ಲಿಷ್ ಮೂಲಕ ಕನ್ನಡಕ್ಕೆ ಅನುವಾದಗೊಂಡಿವೆ. ವಿಶ್ವಸಾಹಿತ್ಯದಲ್ಲಿ ಎಲ್ಲ ದೇಶಪ್ರದೇಶಗಳ ಕಥೆಗಳಿಗೂ ತನ್ನದೇ ಸ್ವಂತಿಕೆಯಿರುತ್ತದೆ. ಯಾವುದೇ ವಿಷಯ, ಘಟನೆ, ಮೌಲ್ಯಗಳನ್ನು ಬೇರೆ ಬೇರೆ ದೇಶಗಳು ವಿವಿಧ ರೀತಿಯಲ್ಲಿ ಅರ್ಥೈಸುತ್ತವೆ. ನಮ್ಮ ದೇಶದ ಮೌಲ್ಯ ಇನ್ನೊಂದಕ್ಕೆ ನಗಣ್ಯವಿರಬಹುದು. ಇಂಥವನ್ನು ಆಯಾ ದೇಶದ ಮೂಲಕ ಮಾತ್ರ ಅವರ ಕಣ್ಣಲ್ಲೇ ನಾವು ನೋಡಲು ಸಾಧ್ಯ. ಇಷ್ಟೆಲ್ಲ ಭಿನ್ನತೆಗಳಿದ್ದರೂ ಹಸಿವು, ನಿರುದ್ಯೋಗ, ಮಾನವೀಯತೆ, ಸಾವು-ನೋವುಗಳಂತಹ ಪ್ರಶ್ನೆ ಬಂದಾಗ ಅದಕ್ಕೆ ಸ್ಪಂದಿಸುವ ಸೂಕ್ಷ್ಮ ಎಳೆಯೊಂದು ಎಲ್ಲ ದೇಶ-ಕಾಲಗಳಲ್ಲೂ ಒಂದೇ ಮುಖವನ್ನು ತೋರ್ಪಡಿಸುತ್ತದೆ. ಮನುಷ್ಯರೆಲ್ಲ ಒಂದೇ ಎಂದು ಧ್ವನಿಸುವ ಇಲ್ಲಿನ ಹತ್ತು ಕಥೆಗಳನ್ನು ಓದಿ.



## ನಿಗೂಢ ಬ್ರಹ್ಮಾಂಡ – (ಸರ್ ಜೇಮ್ಸ್ ಜೀನ್ಸ್)

ಅನುವಾದ : ಪ್ರೊ॥ ಕೆ. ಎಲ್. ಭಾರ್ಗವರಾಮ

**ಪುಟ : ೧೯೬** **ಬೆಲೆ : ರೂ. ೧೬೦**

**ಮಂಜುಶ್ರೀ ಪ್ರಕಾಶನ**, ೧೬ನೇ ಮುಖ್ಯ ರಸ್ತೆ, ಕುವೆಂಪು ಹೈಸ್ಕೂಲ್ ಹಿಂಭಾಗ, ಸರಸ್ವತೀಪುರಂ, ಮೈಸೂರು - ೯

ಲಕ್ಷಾಂತರ ಜ್ಯೋತಿರ್ವರ್ಷಗಳ ಗಣನೆ ಮೂಲಕ ಕಲ್ಪಿಸಿಕೊಳ್ಳಬೇಕಾದ ನಿಗೂಢ ಬ್ರಹ್ಮಾಂಡದ ಬಗ್ಗೆ ಇರುವ ಇಂಗ್ಲಿಷ್ ಆವೃತ್ತಿಯ (೧೯೩೦) ಅನುವಾದವಿದು. ಇಪ್ಪತ್ತನೇ ಶತಮಾನದ ಆದಿಯೆಂದರೆ ಭೌತವಿಜ್ಞಾನಿ ಹಾಗೂ ಖಗೋಳ ವಿಜ್ಞಾನಿಗಳು ವಿಶ್ವವೀಕ್ಷಣೆ, ಆಕಾಶಕಾಯಗಳ ರಚನೆ, ನಿಹಾರಿಕೆಗಳ ಸ್ವರೂಪ ಇವನ್ನೆಲ್ಲ ಭಾರಿ ಕುತೂಹಲದಿಂದ ಅಧ್ಯಯನ ಮಾಡುತ್ತಿದ್ದ ಕಾಲ. ಲಭ್ಯವಿದ್ದ ಉಪಕರಣ, ದೂರದರ್ಶಕಗಳ ಮೂಲಕ ಅಂದಿನ ವಿಜ್ಞಾನಿಗಳು ಭದ್ರಬುನಾದಿ ಹಾಕಿಕೊಟ್ಟಿದ್ದರಿಂದ ಮಾನವ ಇಂದು ಚಂದ್ರ, ಮಂಗಳನಂಥ ನೆಲಗಳ ಸ್ಪಷ್ಟ ಚಿತ್ರಣ ಪಡೆಯಲು ಸಾಧ್ಯವಾಯಿತು. ಭೌತ ಹಾಗೂ ಖ-ಭೌತ ವಿಜ್ಞಾನವು ಒಂದಕ್ಕೊಂದು ಪೂರಕವಾಗಿದ್ದು ಎರಡೂ ಖಗೋಲ ಶಾಸ್ತ್ರದಲ್ಲಿ ನಿರ್ಣಾಯಕ. ಹಿಂದಿನ ವಿಜ್ಞಾನಿಗಳ ವಿಶ್ವದ ಕಲ್ಪನೆ ಏನಿತ್ತು ಎಂಬುದನ್ನು ಇಲ್ಲಿ ನಿರೂಪಿಸಿದೆ.



## ಸೂಫಿ ಕಥಾಲೋಕ (ಒಂದು ನೂರು ಸೂಫಿ ಕತೆಗಳ ಅಪೂರ್ವ ಸಂಕಲನ)

ಕನ್ನಡಕ್ಕೆ : ಪ್ರೊ॥ ಬಿ. ಗಂಗಾಧರಮೂರ್ತಿ

**ಪುಟ : xvi + ೨೯೮** **ಬೆಲೆ : ರೂ. ೧೪೦**

**ಚಿಂತನ ಪುಸ್ತಕ ಮಳಿಗೆ**, ಪಂಡಿತ್ ಸಾರ್ವಜನಿಕ ಲೈಬ್ರರಿ, ಶಿರಸಿ, ಉತ್ತರ ಕನ್ನಡ ಜಿಲ್ಲೆ

ಸ್ವಾರಸ್ಯಕರ ಕಥೆಗಳಿಂದ ಸೂಫಿ ಕಥಾಲೋಕ ವಿಜೃಂಭಿಸಿದೆ. ಓದಿ ತಿಳಿದುಕೊಳ್ಳದಿದ್ದಲ್ಲಿ ಅಮೂಲ್ಯ ಜ್ಞಾನನಿಧಿಯೊಂದನ್ನು ಕಳೆದುಕೊಂಡ ಹಾಗೆಯೇ! ಚತುರ ಸಂಭಾಷಣೆ ಮೂಲಕ ಹೊರಹೊಮ್ಮುವ ಮಾತುಗಳಿಂದ, ನಾವು ಗುರುತಿಸದ ಎಷ್ಟೋ ಸಂಗತಿಗಳು ಅರಿವಾಗಿ ಮುಂದೆ ನಮಗೆ ಬೆಂಗಾವಲಾಗಿರುತ್ತವೆ. ಎಲ್ಲೆಲ್ಲೂ ರಾಜಮಾರ್ಗ ಇರುವುದಿಲ್ಲ ದಾರಿಮಧ್ಯೆ ಇರುವ ಕಲ್ಲನ್ನೆಡವಿ ಶಪಿಸುತ್ತ ನೋವು ತಿನ್ನುವ ಬದಲಿಗೆ ಕಲ್ಲನ್ನು ಬಳಸಿಕೊಂಡು ನಡೆಯುವುದು ವಿವೇಕ. ಇಂತಹ ಸಂದೇಶಗಳನ್ನು ಸ್ವತಃ ಮೈಗೂಡಿಸಿಕೊಂಡು ಲೋಕಜ್ಞಾನವನ್ನು ತಿಳಿಹೇಳುತ್ತ ದೇಶಸಂಚಾರ ಮಾಡುತ್ತಿದ್ದ ಸೂಫಿ ಸಂತರು, ಕಥೆಗಳ ಮೂಲಕ ನಮಗೂ ದಾರ್ಶನಿಕರೆನಿಸುತ್ತಾರೆ. ಕಥೆಗಳಲ್ಲಿ ಬರುವ ಪ್ರಕೃತಿಯ ಪ್ರತಿಯೊಂದು ವಸ್ತುವೂ ಮನುಷ್ಯನಿಗೆ ಪಾಠ ಕಲಿಸುತ್ತದೆ.




## ಸಿರಾ ತಾಲ್ಲೂಕಿನ ಸ್ಮಾರಕಗಳು ಹಾಗೂ ಶಾಸನಗಳು

ಡಾ॥ ಎನ್. ನಂದೀಶ್ವರ

**ಪುಟ : xvi + ೩೪೭** **ಬೆಲೆ : ರೂ. ೧೪೦**

**ಪೂರ್ಣಚಂದ್ರ ತೇಜಸ್ವಿ ಪ್ರಕಾಶನ**, ಬಾಲಾಜಿ ನಗರ, ಸಿರಾ, ತುಮಕೂರು ಜಿಲ್ಲೆ, ಕರ್ನಾಟಕ

ಸಿರಾ ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳ ಬಗ್ಗೆ ವಿವರವಾದ ಮಾಹಿತಿ ನೀಡುವ ಸಂಶೋಧನಾ ಪ್ರಬಂಧ. ತುಂಬ ಪರಿಶ್ರಮದಿಂದ ಕ್ಷೇತ್ರಕಾರ್ಯ ಮಾಡಿದ್ದು, ಮಾಹಿತಿ ಸಂಗ್ರಹಣೆಗಾಗಿ ಗ್ರಾಮದ ಬಹಳಷ್ಟು ಜನರ ನೆರವನ್ನು ಕೋರಿದ್ದು ನೋಡಿದಾಗ ಲೇಖಕರ ಆಸಕ್ತಿ ಮತ್ತು ತಾಳ್ಮೆಯ ಅರಿವು ನಮಗಾಗುತ್ತದೆ. ಗ್ರಾಮಗಳಲ್ಲಿನ ಅಸಂಖ್ಯಾತ ದೇವಸ್ಥಾನಗಳು, ಚರ್ಚುಗಳು ಮತ್ತು ಮಸೀದಿಗಳ ವಿವರ ಚಿತ್ರಗಳ ಸಹಿತ ಇಲ್ಲಿ ದಾಖಲಿಸಿದ್ದಾರೆ. ಇನ್ನೂ ಪ್ರಕಟವಾಗದ ಸುಮಾರು ಮೂವತ್ತು ಶಾಸನಗಳನ್ನು ಹೊಸದಾಗಿ ಪತ್ತೆ ಮಾಡಿದ್ದು ಈ ಪುಸ್ತಕದಲ್ಲಿ ಲಿಪಿಸಹಿತ ಕೊಡಲಾಗಿದೆ. ಶಾಸನಗಳ ಬಗ್ಗೆ ಅಧ್ಯಯನ ಮಾಡುವ ಸಂಶೋಧಕರಿಗೆ ಅತ್ಯುಪಯುಕ್ತವಾಗಿದೆ. ಈ ಸ್ಮಾರಕ ಹಾಗೂ ಶಾಸನಗಳಿಂದ ಇತಿಹಾಸದ ಒಂದು ಒಳನೋಟ ಸಿಗುತ್ತದೆ.

– ಇಂದಿರಾಕುಮಾರಿ

೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

# ಕೂಸಪ್ಪನ ಕಸಿವಿಸಿ

ರಾಘವೇಂದ್ರ, ಉಡುಪಿ

''ಇಲ್ಲ ಸರ್, ಇದು ನಿಜವಾಗಿಯೂ ನಾಯಿ ಮಾಂಸವಲ್ಲ, ದನದ ಮಾಂಸವೂ ಅಲ್ಲ, ಕೇವಲ ಕುರಿ ಮಾಂಸ. ನಂಬಿ ಸರ್ ನನ್ನನ್ನು ನಂಬಿ.''

ಮಾಂಸದೂಟದ ಅಂಗಡಿಯ ಮಾಲ್ಹಕ ದಿಢೀರನೇ ಬಂದ ಪೊಲೀಸರನ್ನು ಅಂಗಲಾಚುತ್ತಿದ್ದ.

ಮೊನ್ನೆ ಶ್ವಾನ ಮೇಧ ಆರಂಭವಾದ ಮೇಲೆ ಯಾರೋ ಕಿಡಿಗೇಡಿಗಳು ಪೊಲೀಸ್ ಸ್ಟೇಷನ್ನಿಗೆ ಫೋನ್ ಮಾಡಿ 'ನಮ್ಮೂರ ಎಲ್ಲಾ ನಾನ್‌ವೆಜ್ ಹೋಟೆಲ್‌ಗಳಲ್ಲಿ ದನದ ಮಾಂಸ ಮಾತ್ರವಲ್ಲ, ಸಮೃದ್ಧಿಯಾಗಿ ಸಿಗುವ ನಾಯಿಗಳ ಮಾಂಸದ ಅಡುಗೆ ಮಾಡಿಕೊಡುತ್ತಿದ್ದಾರೆ' ಎಂದು ಫೋನ್ ಮಾಡಿದ್ದಾಗ ಹಾಗೂ ಪೈಪೋಟಿಯಲ್ಲಿ 'ಅಗ್ಗವಾಗಿ ಕೊಡ್ತಿದ್ದಾರೆ' ಎಂದು ತಿಳಿಸಿದಾಗ ಪೊಲೀಸ್ ಎಸ್.ಐ. ನಗರದ ಮೂಲೆ ಮೂಲೆಗಳಲ್ಲಿದ್ದ ಹೋಟೆಲ್‌ಗಳಲ್ಲಿ ಏಕಕಾಲದಲ್ಲಿ ರೈಡ್ ಮಾಡಿಸಿದ್ದರಂತೆ! ಆಗಲೇ ಆ ಮಾಲ್ಹಕ ಹಾಗೆ ಬೇಡಿಕೊಂಡದ್ದು. ಪುಣ್ಯಕ್ಕೆ ಪೇಪರಲ್ಲಿ ಪ್ರಕಟವಾಗುವ ಮೊದಲೇ! ಪೊಲೀಸ್ ರೈಡ್ ಆದಕಾರಣ ಅಲ್ಲೇ ಪಕ್ಕದಲ್ಲಿದ್ದ ವೈನ್ ಶಾಪಿನಲ್ಲಿ ಒಂದೂವರೆ ಕ್ವಾರ್ಟರ್ ಮುಗಿಸಿ ಒಂದು ಪ್ಲೇಟ್ ಮಟನ್ ತರಿಸಿ ಕೂಸಪ್ಪ ತಿಂದ ಸಮಯದಲ್ಲಿ – ಈ ವಿಚಾರ ಸಪ್ಲೈಯರ್‌ನಿಂದ ಕೇಳಿದವನಿಗೆ ಕುಡಿದದ್ದೆಲ್ಲಾ ಒಂದೇ ಬಾರಿ ಇಳಿದುಹೋಗಿತ್ತು. ಆಮೇಲೆ ಆರ್ಡರ್ ಮಾಡಿದ್ದ ಪಕ್ಕದ ಮಾಂಸದಂಗಡಿಯ ಮಟನ್ ಸುಕ್ಕಾ ಬಂದರೂ ಅದನ್ನು ಹಿಂದಕ್ಕೆ ಕಳಿಸಿ ಬಿಲ್ ಕೊಟ್ಟು ಕಳಿಸಿದ್ದ. ಆ ಮೇಲಿನ ಕ್ವಾರ್ಟರ್‌ಗೆ ಕೇವಲ ಕಡ್ಲೆಕಾಯಿ ಮಾತ್ರ ತಿಂದು ಬಂದಿದ್ದನ್ನು ಅವನೇ ನನ್ನಹತ್ತಿರ ಹೇಳಿದ್ದು!

''ಸರ್ ನಾಳೆಯಿಂದ ನಾನೂ ನಿಮ್ಮಂತೆ ಪ್ಯೂರ್ ವೆಜಿಟೇರಿಯನ್. ಈ ಸುಕ್ಕಾ, ಮಸಾಲೆ, ಚಿಲ್ಲಿ ಚಿಕನ್ ಯಾವುದೂ ಬೇಡವೆಂದು ಪ್ರತಿಜ್ಞೆ ಮಾಡಿದ್ದೇನೆ.'' ಎಂದಾಗ ನಾನು ಆಶ್ಚರ್ಯದಿಂದ ಕೇಳಿದಾಗ ಆತ ಪೊಲೀಸ್ ರೈಡ್ ವಿಚಾರ ಹೇಳಿದ್ದು!

''ಸರ್ ಮೊನ್ನೆಯಿಂದ ಬೆಂಗಳೂರಿನಲ್ಲಿ 'ಶ್ವಾನ ಸಂಹಾರ ಆಪರೇಶನ್' ಆರಂಭವಾಗಿದ್ದು ಈಗ ನಮ್ಮ ಜಿಲ್ಲೆಗೂ ಬಂದಿದೆಯಂತೆ. ನಾಯಿಗಳ ಹಾವಳಿ ಜಾಸ್ತಿಯಾಗಿದ್ದು ಅದಕ್ಕೇ ಈ ನಿರ್ಧಾರ ಸರಕಾರ ನಡೆಸಿದೆಯಂತೆ. ಅಷ್ಟೇ ಅಲ್ಲ ಆಂಧ್ರದಿಂದಲೂ ನಾಯಿ ಹಿಡುಕರನ್ನು ಕರೆಸಿದ್ದಾರಂತೆ. ಕರ್ನಾಟಕದ ಶ್ವಾನ ಸಂಹಾರದಳದ ಪ್ರಕ್ರಿಯೆ ಸಂಪೂರ್ಣವಾಗದಿದ್ದುದರಿಂದ ಆಂಧ್ರದ ಸ್ಪೆಷಲಿಷ್ಟುಗಳು ಬಂದಿದ್ದಾರಂತೆ. ಸಾವಿರಗಟ್ಟಲೆ ಮನುಷ್ಯರನ್ನು ಪಿಸ್ತೂಲ್ ಇಟ್ಟು ಕೊಲ್ಲುವವರಿದ್ದಾಗ ದಾರಿಯಲ್ಲಿ ಕಂಡ ನಾಯಿಗಳು ಉರುಳಿಗೆ ಸಿಗದಿದ್ದರೆ ಎ.ಕೆ. ೪೭ ಪಿಸ್ತೂಲಿನಿಂದ ಶೂಟ್ ಮಾಡಿ ಅರ್ಧ ದಿನದೊಳಗೆಯೇ ಎಲ್ಲವನ್ನೂ ಮುಗಿಸಬಹುದಿತ್ತಲ್ಲಾ?''

''ಹೌದು ಕೂಸಪ್ಪಾ, ನಿನ್ನ ತಲೆಯೆಂದರೆ ತಲೆ.''

''ಹಾಗೆ ಹೇಳಿ ಸರ್. ಅದ್ಯಾಕೆ ಮಾಡಲಿಲ್ಲ ಗೊತ್ತಾ? ಶ್ವಾನಸಂಹಾರಕ್ಕೆ ಲಕ್ಷಗಟ್ಟಲೆ ಸ್ಯಾಂಕ್ಷನ್ ಮಾಡಿಸಿ ಅದರಿಂದ ನಾಲ್ಕು ದಿನವಾದರೂ ಈ ನಾಯಿಗಳಿಗೆ ಉರುಳು ಹಾಕಿ ಟಿ.ವಿ., ಪೇಪರ್‌ಗಳಲ್ಲಿ ತೋರಿಸಿದ್ರಲ್ಲಾ? ನಾಲ್ಕು ಸಾವಿರದಲ್ಲೆ ಈ ಕೆಲಸವಾಗಿರಬಹುದು. ಶ್ವಾನಸಂಹಾರದ ನರಸಿಂಹಾವತಾರದ ನಾಯಿಗಳನ್ನು ಕೊಂದದ್ದು ಟಿ.ವಿ. ಪೇಪರ್‌ಗಳಲ್ಲಿ ಬರುವುದು ಬೇಡ್ವಾ? ಸ್ಯಾಂಕ್ಷನ್ ಆದ ಕೆಲವು ಲಕ್ಷಗಳ ವಿಲೇವಾರಿಯಾದದ್ದು ತೋರಿಸೋದು ಬೇಡ್ವಾ? ಅದಕ್ಕೆಂದೇ ಹೊರರಾಜ್ಯಗಳ ನಾಯಿ ಹಿಡುಕರನ್ನು ಕರೆತರಿಸಿದ್ದು ಅಲ್ವಾ ಸಾರ್?''

''ಹೌದು ಕೂಸಪ್ಪಾ, ಮನುಷ್ಯ ಬಹಳ ಸ್ವಾರ್ಥಿ. ತನಗೆ ಬೇಕಾದಾಗ ವಿಶ್ವಾಸದಿಂದ ನಾಯಿಯನ್ನು ಮನೆ ಕಾಯಲು ಬಿಟ್ಟು ಅವುಗಳಿಗೆ ಕಾಯಿಲೆ ಕಸಾಲೆ ಬಂದ್ರೆ, ಮುದಿಯಾದ್ರೆ ದಯಾಮರಣ ಕೊಡ್ತಾನೆ. ಹೆಣ್ಣು ನಾಯಿ ಕೆಲವು ಮರಿಗಳನ್ನು ಹಾಕಿದ್ರೆ ಅವುಗಳನ್ನು ಯಾರ್‍ಯಾರದೋ ಕಾಂಪೌಂಡ್‌ಗಳಲ್ಲಿ ಗುಟ್ಟಾಗಿ ಬಿಟ್ಟು ಬರೋದು, ನಾಯಿಗಳ ಸಂಖ್ಯೆ ಜಾಸ್ತಿಯಾದ್ರೆ ಅವುಗಳನ್ನು ಕೊಲ್ಲೋದು, ಅದಕ್ಕಾಗಿ ಒಂದು ಸಮಿತಿಯನ್ನು ಮಾಡಿ ಪಾಲು ಮಾಡಿಕೊಳ್ಳೋದು...''

''ಹೌದು ಸರ್, ಈಗ ನಂದೊಂದು ಸಲಹೆಯಿದೆ. ಈಗ ಮಂತ್ರಿಮಂಡಳದಲ್ಲಿ ಎರಡು ಅವಳಿಜವಳಿ ಮಕ್ಕಳಿಗೆ ಪ್ರಾಬ್ಲೆಂ ಇದೆಯಲ್ಲಾ? ನನ್ಗೆ ಮಂತ್ರಿ ಪದವಿ ಸಿಗ್ಲಿಲ್ಲಾಂತ ಕೂಗುವ ಎಲ್ಲಾ ಎಮ್ಮೆಲ್ಲೆಗಳಿಗೆ ಹಾಗೂ ಪಕ್ಷಾಂತರ ಮಾಡಿ ಬರುವವರಿಗೆ ದೂರಾಲೋಚನೆಯಿಂದ ಹೈಕಮಾಂಡ್ ಬುದ್ಧಿವಂತಿಗೆಯಿಂದ ತಮ್ಮ ಪಕ್ಷದ ಮಾತ್ರವಲ್ಲ, ವಿರೋಧ ಪಕ್ಷದ ಎಮ್ಮೆಲ್ಲೆ, ಎಂ.ಪಿ.ಗಳಿಗೂ ಒಂದೊಂದು ಖಾತೆ ಕೊಡ್ಬೋದಿತ್ತು. ಚಿಕೂನ್‌ಗೂನ್ಯಾ ಮಂತ್ರಿ, ಪಶುಸಂಗೋಪನಾ ಮಂತ್ರಿಗಳಂತೆ, ಹಂದಿ ಮಂತ್ರಿ, ಕುದುರೆ ಮಂತ್ರಿ, ಇಲಿ ಮಂತ್ರಿ, ಕತ್ತೆ ಮಂತ್ರಿ, ಕೋಳಿ ಮಂತ್ರಿ ಹಾಗೂ ಈ ನಾಯಿ ಮಂತ್ರಿಗಳೆಂಬ ಖಾತೆ ಕೊಡ್ತಿದ್ರೆ ಪ್ರತಿಭಟನೆ, ಸಭಾತ್ಯಾಗವೇ ಇರುತ್ತಿರಲಿಲ್ಲ. ಅಲ್ವೇ ಸರ್? ನೋಡಿ ಈಗ ನಮ್ಮ ಎಲ್.ಐ.ಸಿ.ಯಲ್ಲಿ ಮೊದಲು ಡಿವಿಜನಲ್ ಆಫೀಸಿನಲ್ಲಿ ಆರುನೂರ ಐವತ್ತು ಜನರಿದ್ರು. ಆಫೀಸ್ ಬಿಡೋ ಹೊತ್ಗೆ ಎರಡೂ ಮಹಾದ್ವಾರಗಳನ್ನು ಓಪನ್ ಮಾಡಿಟ್ರೂ ಸಾಕಾಗ್ತಾ ಇರಲಿಲ್ಲ. ಒಂದು ಡಿವಿಜನಲ್ ಮ್ಯಾನೇಜರ್, ಎರಡು ಅಸಿಸ್ಟೆಂಟ್ ಡಿವಿಜನಲ್ ಮ್ಯಾನೇಜರುಗಳು, ನಾಲ್ಕು ಜ್ಯೂನಿಯರ್ ಆಫೀಸರುಗಳು, ಆರು ಸೂಪರಿಂಟೆಂಡೆಂಟ್ ಹಾಗೂ ಎಂಟು ಮಂದಿ ಸೆಕ್ಷನ್ ಹೆಡ್ಡುಗಳಿದ್ದರು. ಆದ್ರೆ ಈವಾಗ ನೋಡಿ! ಒಂದು ಸೀನಿಯರ್ ಡಿವಿಜನಲ್ ಮೆನೇಜರ್, ಏಳು ಡಿವಿಜನಲ್ ಮೆನೇಜರುಗಳು, ಹತ್ತು ಮೆನೇಜರುಗಳು ಹಾಗೂ ಇಪ್ಪತ್ತಕ್ಕೂ ಮಿಕ್ಕಿ ಏ.ಓ. (ಎಡ್ಮಿನಿಸ್ಟೇಟಿವ್ ಆಫೀಸರು)ಗಳು ನಲವತ್ತು ಎ.ಎ.ಓ.ಗಳು, ಐವತ್ತು ಎಚ್.ಜಿ.ಎ. (ಹೈಯರ್ ಗ್ರೇಡ್ ಅಸಿಸ್ಟೆಂಟು)ಗಳಿದ್ದಾರೆ! ನಮ್ಮ



ಡಿವಿಜನಲ್ ಆಫೀಸಿನಲ್ಲಿ ನೌಕರರರಿಗಿಂತ ಹೆಚ್ಚು ಕ್ಯಾಬಿನುಗಳೇ ಇವೆಯಲ್ಲಾ? ಹಾಗೆಯೇ ಸರಕಾರ ಎಲ್ಲಾ ಎಮ್ಮೆಲ್ಲೆಗಳಿಗೂ ಒಂದೊಂದು ಕ್ಯಾಬಿನ್ ಕೊಟ್ಟರೆ ನಷ್ಟವೇನು? ಯಾವುದಾದರೂ ಮಂತ್ರಿಯಾದೆನೆಂದು ಸಂತೃಪ್ತಿ ಪಡೀಬಹುದಲ್ಲಾ?''

''ಅದು ಹೇಗೆ ಕೂಸಪ್ಪಾ?''

''ಅದೇ ನಾನು ಹೇಳಿದ್ನಲ್ಲಾ? ಖಾತೆಗಳನ್ನು ಎಷ್ಟು ಬೇಕಾದರೂ ಜಾಸ್ತಿ ಮಾಡ್ಬೋದು. ಪಶು ಮಂತ್ರಿ, ಇದ್ದ ಹಾಗೆ ಕುದುರೆ, ಆನೆ, ಕತ್ತೆ, ಇಲಿ, ಮೀನು, ಮಂಗ, ನಾಯಿ ಈ ರೀತಿ ಪ್ರಾಣಿಗಳ ವಿಚಾರ ನೋಡಿಕೊಳ್ಳಲು ಆ ಖಾತೆಗಳಿಗೆ ಎಲ್ಲಾ ಎಮ್ಮೆಲ್ಲೆ, ಪಕ್ಷೇತರ, ವಿರೋಧ ಪಕ್ಷದ ಎಮ್ಮೆಲ್ಲೆಗಳಿಗೂ ಒಂದೊಂದು ಖಾತೆ ಕೊಟ್ಟು ಅವರ ಬಾಯಿ ಮುಚ್ಚಿಸಬಹುದಲ್ಲಾ. ಹಾಗೆಯೇ ಈ ಅಬಕಾರೀ ಖಾತೆಯನ್ನೂ ನೀರುಳ್ಳಿಯಂತೆ ಬಿಡಿಸೀ ಬಿಡಿಸೀ ಬ್ರಾಂದಿ ಮಂತ್ರಿ, ವಿಸ್ಕಿ ಮಂತ್ರಿ, ರಮ್ ಮಂತ್ರಿ, ಫೆನ್ನಿ ಮಂತ್ರಿ, ಬಿಯರ್ ಮಂತ್ರಿ, ಶೇಂದಿ ಮಂತ್ರಿ, ಸಾರಾಯಿ ಮಂತ್ರಿಗಳೆಂಬ ಪಟ್ಟಗಳನ್ನು ಕೊಡಬಹುದಲ್ಲಾ? ಆರೋಗ್ಯ ಮಂತ್ರಿಯಂತೆ ಅನಾರೋಗ್ಯ ಮಂತ್ರಿ, ಕಾಗೆ ಮಂತ್ರಿ, ಹೆಗ್ಗಣ ಮಂತ್ರಿ, ಕಾಡಿನ ಮಂತ್ರಿ, ನಾಡಿನ ಮಂತ್ರಿ, ರಸ್ತೆ ಮಂತ್ರಿ, ಚರಂಡಿ ಮಂತ್ರಿ, ಓಣಿ ಮಂತ್ರಿ, ಏಕ್ಸಿಡೆಂಟ್ ಮಂತ್ರಿ, ಬೆಕ್ಕು ಮಂತ್ರಿ, ಸಸ್ಯಾಹಾರಿ ಮಂತ್ರಿ, ಮಾಂಸಾಹಾರಿ ಮಂತ್ರಿ ಹೀಗೆ ಎಮ್ಮೆಲ್ಲೆಗಳಿಗಿಂತಲೂ ಹೆಚ್ಚಿನ ಖಾತೆಗಳನ್ನು ನಿರ್ಮಿಸಬಹುದು. ಹಾಗೆಯೇ ಬಸ್ಸು ಮಂತ್ರಿ, ಲಾರಿ ಮಂತ್ರಿ, ಟ್ಯಾಕ್ಸೀ ಮಂತ್ರಿ, ಹೀಗೆಲ್ಲಾ ಎಷ್ಟು ಖಾತೆಗಳಿವೆಯಲ್ಲಾ? ಒಬ್ಬೊಬ್ಬರಿಗೆ ಒಂದಕ್ಕಿಂತ ಹೆಚ್ಚು ಖಾತೆಗಳನ್ನೂ ಕೊಡಬಹುದಲ್ವಾ? ಪ್ರತಿಯೊಬ್ಬ ಬರುವ, ಬರದಿರುವ, ಕೊಡುವ, ಕೂರದ, ಮಲಗುವ, ಮಲಗದ ಎಮ್ಮೆಲೆಗಳಿಗೂ ಮಂತ್ರೀಂತ ಪಟ್ಟಾಭಿಷೇಕ ಮಾಡಿಬಿಟ್ರೆ ಪ್ರತಿಭಟನೆ, ಧಿಕ್ಕಾರ, ಸಭಾತ್ಯಾಗ ಯಾವುದೂ ಇರೋದಿಲ್ಲವಲ್ಲಾ?''

''ಕೂಸಪ್ಪಾ, ನಿನ್ನ ತಲೆ ಇಂಡಿಯದ್ದಲ್ಲ. ಮೇಡ್ ಇನ್ ಜಪಾನ್. ಇಂಪೋರ್ಟೆಡ್ ತಲೆ ನಿಂದು! ಈಗ ನಿನ್ನ ಖಾತೆಗಳಂತೆ ಇನ್ನೂ ಒಂದು ಖಾತೆಯನ್ನು ತೆರೀಬೋದು. ಅದೂಂದ್ರೆ ನಿನ್ನಂತಹ ತಲೆಯಿರುವವರನ್ನು ಪೋಷಿಸೋದು, ರಕ್ಷಿಸೋದು ಆ ಖಾತೆಯ ಮಂತ್ರಿಯ ಕೆಲಸ.''

''ಅದಕ್ಕೇ ಸರ್, ನೀವೇ ಇಲೆಕ್ಷನ್‌ಗೆ ಅಭ್ಯರ್ಥಿಯಾಗಿ ನಿಂತು ಎಮ್ಮೆಲ್ಲೆಯಾಗಿ, ಮಂತ್ರಿಯಾಗಿ ಬನ್ನಿ ಸರ್. ನಿಮಗೆ ನನ್ನ ಓಟು ಖಂಡಿತಾ ಇದೆ.''

ಶ್ವಾನ ಸಂಹಾರದಿಂದ ಮಂತ್ರಿಮಂಡಲದವರೆಗೂ ಕೂಸಪ್ಪನ ನನ್ನ ಈ ಸಂಭಾಷಣೆ ನಡೆದದ್ದು ನನ್ನ ಸ್ಕೂಟರ್ ಸರ್ವಿಸಿಗೆಂದು ಕೊಟ್ಟು ಬಸ್‌ಸ್ಟಾಪಿನಲ್ಲಿ ನಮ್ಮ ನಂಬರಿನ ಬಸ್ಸಿಗಾಗಿ ಹತ್ತು ನಿಮಿಷ ಮೊದಲೇ ಬಂದು ಕಾಯುತ್ತಿದ್ದಾಗ ಹಾಗೂ ಆಫೀಸುವರೆಗೆ ಬಸ್ಸಲ್ಲಿ ಕೂತು ಹತ್ತು ನಿಮಿಷದ ಬಸ್ ಪ್ರಯಾಣದ ಸಮಯದಲ್ಲಿ!

**ಕೆ. ರಾಘವೇಂದ್ರ ಭಟ್**
ಶ್ಯಾಮಲಾ ಸದನ, ೪-೩-೫೧, ಕಟ್ಟೆ ಆಚಾರ್ಯ ಮಾರ್ಗ, ಕುಂಜಿಬೆಟ್ಟು, ಉಡುಪಿ - ೫೭೬ ೧೦೨

# ಚರಿತ್ರೆ ಮತ್ತು ನಾವು

ನಾವು ಹೆಸರಿಲ್ಲದವರು!
ಶತಶತಮಾನಗಳಿಂದ
ನೋಯುತ್ತಾ, ನರಳುತ್ತಾ
ಕಟ್ಟುತ್ತಾ, ಬೆಳೆಸುತ್ತಾ ಬಂದವರು.

ಮೈಸೂರು ಅರಮನೆಯ
ಕಟ್ಟಿದವರು ನಾವು.
ಗೋಲ್‌ಗುಂಬಜ್, ಮಸೀದಿ-ಚರ್ಚು,
ಎಲ್ಲದರಲ್ಲೂ ನಮ್ಮ ನೆರಳಿದೆ.

ರಾಮಮಂದಿರಕ್ಕೆ ಇಂದು
ಸೊಂಟ ಕಟ್ಟಿ ನಿಂತಿದ್ದಾರಲ್ಲಾ?!
ಅಯ್ಯೋ ಬಿಡಿ,
ಅಂದು, ಅದೇ ಮಂದಿರಕ್ಕೆ
ಕಲ್ಲು-ಮಣ್ಣು ಹೊತ್ತು
ಸಮಾಧಿ ಸೇರಿದವರು ನಾವು.

ವಿಧಾನಸೌಧದ ಬಾಗಿಲಿಗೆ
ಚಿಲಕ ಹಾಕಿದವರು ನಾವು.
ಆಮೇಲೆ,
ದೊಡ್ಡವರೆಲ್ಲಾ ಬೀಗ ಹಾಕುವುದ
ನೋಡುತ್ತಾ ನಿಂತವರು!

ರಸ್ತೆ, ಅಣೆಕಟ್ಟು, ಕಾಲುವೆ
ನೂರಾರು ಕೆಲಸಕ್ಕೆ
ರಕ್ತ ಬಸಿದು ದುಡಿದವರು ನಾವು.

ಹೊಟ್ಟೆಯ ಹಿಟ್ಟಿಗಾಗಿ
ದುಡಿಯುತ್ತಲೇ
ದೇಹ ಸವೆಸಿದ ಜಂಗಮರು.

'ಕಾಯಕವೇ ಕೈಲಾಸ' – ಎಂಬ
ಉಳ್ಳವರ ಮಾತು
ಕೇಳಿಸಿಕೊಳ್ಳದೆ
ಕಾಯಕ್ಕೆ ಕಾಯಕವೇ
ಆಧಾರವೆಂದು
ದುಡಿದವರು.

ಎಲ್ಲ ಶ್ರಮದ ಹಿಂದೆ
ನಮ್ಮ ಬೆವರಿನ ವಾಸನೆಯ
ಹೆಸರಿದೆ.
ಆದರೂ...
ಹೆಸರಿಲ್ಲದೆ ಹಸಿರಾದ
ಕಾರ್ಮಿಕರು.

**ಸುಜಾತಾ ಲಕ್ಷ್ಮೀಪುರ**
ನಂ. ೩೨೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೮೯



# ಕಲಿಕೆಯ ಪ್ರಕ್ರಿಯೆ

ಎಳೆಯರು ಇಲ್ಲವೆ ವಯಸ್ಕರೆ ಆಗಿರಲಿ ಯಾವುದೇ ಒಂದು ವಿಷಯವನ್ನು ಮೊದಲು ಹೇಗೆ ಕಲಿತು ಕೊಳ್ಳುತ್ತಾರೆ ಎಂಬ ಮೂಲಭೂತ 'ಪ್ರಕ್ರಿಯೆ'ಯತ್ತ ಗಮನ ಹರಿಸುವುದು ಉಚಿತವೆನಿಸುತ್ತದೆ. ಮಾನವ ಶಿಶು ಜನಿಸಿದಾಕ್ಷಣ ಕಣ್ಣುಬಿಟ್ಟ ಒಡನೆಯೇ ತನ್ನ ಸುತ್ತಲೂ ಆವರಿಸಿಕೊಂಡಿರುವ ಬೆಳಕಿನತ್ತ ಗಮನಹರಿಸುತ್ತದೆ. ಹಾಗೆಯೇ ಆಗಾಗ್ಗೆ ಕೇಳಿ ಬರುವ ಸದ್ದುಗದ್ದಲದ ಅರಿವು ಉಂಟಾಗುತ್ತದೆ. ಮೊದಲಿಗೆ ಅಂತಹ ಬೆಳಕು, ಶಬ್ದಗಳಿಗೆ ಸ್ವಾಭಾವಿಕ ಹಾಗೂ ಸ್ವಯಂಪ್ರೇರಿತವಾಗಿ ಪ್ರತಿಕ್ರಿಯಿಸುತ್ತದೆ. ಆನಂತರ ಹೊರಗಿನ ವಾತಾವರಣದಿಂದ ರಕ್ಷಣೆ ನೀಡುವ, ಹಾಲುಣಿಸುವ ಮಾತೆಯತ್ತ ಆಕರ್ಷಿತವಾಗುತ್ತದೆ. ಮಾತೆ ತನ್ನ ಸ್ತನಗಳಿಗೆ ಶಿಶುವಿನ ಸ್ಪರ್ಶ ಮಾಡಿದಾಗ ಬಾಯಿ ತೆರೆದು ಮೊಲೆಗೆ ಬಾಯಿ ಹಾಕಿ ಹಾಲು ಚೀಪಲಾರಂಭಿಸುತ್ತದೆ. ಮುಂದಿನ ದಿನಗಳಲ್ಲಿ ಹತ್ತಿರ ಸುಳಿದಾಡುವ ತಾಯಿ, ತಂದೆ ಮತ್ತಿತರರು ಮಾತಾಡಿಕೊಳ್ಳುತ್ತಿರುವುದನ್ನು ತನ್ನದೇ ರೀತಿಯಲ್ಲಿ ಅರ್ಥೈಸಿಕೊಳ್ಳುತ್ತದೆ. ದಿನ ಕಳೆದಂತೆ ಅವರನ್ನನುಸರಿಸುವ ಪ್ರಯತ್ನ ಮಾಡಬಹುದು. ಇನ್ನು ಅದರ ಬೆಳವಣಿಗೆ ಮುಂದುವರಿದಂತೆಲ್ಲಾ ಅದು ಮನೆಯ ಒಂದು ವ್ಯಕ್ತಿಯಾಗಿ ಬಿಡುತ್ತದೆ. ಅದು ಮತ್ತಷ್ಟು ಮುಂದುವರಿದಂತೆಲ್ಲಾ ಮನೆಯವರಾಡುವ ಮಾತುಗಳನ್ನನುಸರಿಸಿ ಮಾತೃಭಾಷೆಯಲ್ಲಿ ತೊದಲ್ನುಡಿ ಪುನರುಚ್ಚರಿಸುವ ಪ್ರಯತ್ನ ಮಾಡುತ್ತದೆ. ಮನೆಯಲ್ಲಿನ ಇತರ ಮಕ್ಕಳು ಓದಿ, ಬರೆಯುವ ಆಟ, ಊಟ, ಓಟ ಮುಂತಾದ ಶಬ್ದಗಳನ್ನು ನಿರಾಯಾಸವಾಗಿ ಅರ್ಥಮಾಡಿಕೊಳ್ಳುತ್ತದೆ.

ಮುಂದಿನ ಎರಡು-ಮೂರು ವರ್ಷಗಳಲ್ಲಿ ಮಗುವನ್ನು ಶಿಶುವಿಹಾರ/ನರ್ಸರಿಗಳಿಗೆ ಸೇರಿಸಬಹುದು. ಮೊದಲೇ ಅಪರಿಚಿತ ಪರಿಸರವಿರುವ ಶಾಲೆಯಲ್ಲಿ ಪುಟ್ಟ ಕಂದಮ್ಮಗಳಿಗೆ ಅಕ್ಷರಾಭ್ಯಾಸ ಮಾಡುವ ಪ್ರಯತ್ನಗಳು ಆರಂಭವಾಗುತ್ತವೆ. ಜನ್ಮದತ್ತವಾಗಿರುವ ಮಾತೃಭಾಷೆಯ ಅ, ಆ, ಇ, ಈ ಕಲಿಸುವ ಬದಲು ತನಗೆ ಪರಿಚಯವಿರದ ಇಂಗ್ಲಿಷಿನ ಎ ಬಿ ಸಿ ಡಿಗಳನ್ನು ಒತ್ತಾಯಪೂರ್ವಕವಾಗಿ ಕಲಿಸುವ ಪ್ರಯತ್ನ ಮಾಡಲಾಗುತ್ತದೆ. ಅರ್ಥವಾಗದಿದ್ದರೂ ಹೇಳಿದ್ದನ್ನೇ ಪುನರುಚ್ಚರಿಸುವ ಗಿಣಿಗಳಂತೆ ಬಾಯಿಪಾಠ ಮಾಡಿಸಲಾಗುತ್ತದೆ. ದಿನಕಳೆದಂತೆ ಕ್ಯಾಟ್, ರ್‍ಯಾಟ್, ಡಾಗ್ ಗಳಂಥ ಪ್ರಾಣಿಗಳ ಹೆಸರುಗಳನ್ನು ಪುನರುಚ್ಚರಿಸುವ ಪ್ರಯತ್ನ ಮುಂದುವರಿಯುತ್ತದೆ. ಅದನ್ನೆ ಮಾತೃಭಾಷೆಯಲ್ಲಿ ಬೆಕ್ಕು, ಇಲಿ, ನಾಯಿಯೆಂದು ಹೇಳಿಕೊಡುವಂತಾದರೆ ಪುಟ್ಟ ಕಂದಮ್ಮ ದಿನನಿತ್ಯ ನೋಡುವ ಪ್ರಾಣಿಗಳನ್ನು ನೆನಪಿನಲ್ಲಿಡಲು ಸುಲಭವಾಗುವುದಿಲ್ಲವೆ? ಅದೇ ರೀತಿ ಸರಳ ಹಾಗೂ ಸುಲಭವಾಗಿ ಅರ್ಥವಾಗುವ ಕನ್ನಡದ ಶಿಶುಪ್ರಾಸಗಳು ಯಥೇಚ್ಛವಾಗಿದ್ದರೂ 'ಬಣ್ಣದ ತಗಡಿನ ತುತ್ತೂರಿ', 'ನಾಯಿಮರಿ ನಾಯಿಮರಿ ತಿಂಡಿಬೇಕೆ, ತೀರ್ಥಬೇಕೆ?' ಬದಲಿಗೆ ಇಂಗ್ಲಿಷಿನ 'ಹಿಕೋರಿ ಡಿಕೋರಿ ಡಾಕ್'. 'ಓಲ್ಡ್ ಮದರ್ ಹಬ್ಬರ್ಡ್' ಎಂಬ ರೈಮ್‌ಗಳಿಗೆ ಅದೇಕೆ ಅಷ್ಟು ವ್ಯಾಮೋಹವೆಂಬುದು ಅರ್ಥವಾಗುತ್ತಿಲ್ಲ. ಮಾತೆಯೊಬ್ಬಳು ರಾತ್ರಿಯ ಚಂದಿರನನ್ನು ತನ್ನ ಮಗುವಿಗೆ ತೋರಿಸಿ ಅಲ್ಲಿ ನೋಡು 'ಮೂನು' ಎನ್ನುವುದನ್ನು ನೋಡಿದವರಿಗೆ ಏನೆನಿಸಬೇಡ? ಇದರಿಂದ ಸಹಜವಾಗಿ ಕಲಿಯುವ ಪ್ರಕ್ರಿಯೆಯನ್ನು ತಿರುವು ಮುರುವು ಮಾಡಿದಂತಾಗುವುದಿಲ್ಲವೆ? ಇಂತಹ ಅಭ್ಯಾಸವನ್ನು ಮಾಡುತ್ತಿರುವುದರಿಂದ ಮಗುವಿನ ಸ್ವಾಭಾವಿಕ ಕಲಿಕೆಯ ಪ್ರಕ್ರಿಯೆಗೆ ಸ್ವಲ್ಪಮಟ್ಟಿನ ಅಡಚಣೆ ಉಂಟಾಗುತ್ತದೆ. ಅಂದರೆ ಭಾಷೆ ಇಲ್ಲವೇ ಹೊಸ ವಿಚಾರವನ್ನು ಕಲಿಯುವಾಗ ಅದು ಮನಸ್ಸಿನಲ್ಲಿ (ಮೆದುಳಿನಲ್ಲಿ) ಅವನ ಅರಿವಿಗೆ ಬಾರದೆ ತಂತಾನೆ ಅವನ ಮಾತೃಭಾಷೆಯಲ್ಲಿ ಅಚ್ಚೊತ್ತಾಗುತ್ತದೆ. ಮುಂದೆ ಉದ್ದೇಶಿತ ಭಾಷೆಯಲ್ಲಿ (ಇಂಗ್ಲಿಷ್, ಹಿಂದಿ ಇತ್ಯಾದಿ) ಅರ್ಥೈಸುವಲ್ಲಿ ಒಂದು ರೀತಿಯ ಕಸರತ್ತು ಜರುಗಬೇಕಾಗುತ್ತದೆ. ಅದನ್ನು 'ಕಲಿಕೆಯ ಕಸರತ್ತು' ಎನ್ನಬಹುದು. ಆ ಪ್ರಕ್ರಿಯೆ ಮೆದುಳಿನಲ್ಲಿ ಜರುಗುವಾಗ ಸ್ವಲ್ಪ ಶ್ರಮ ಹಾಗೂ ಶಕ್ತಿಯೂ ವ್ಯಯವಾಗುತ್ತದೆ.

ಅಮೆರಿಕಾದಲ್ಲಿ ಇತ್ತೀಚಿಗೆ ಜರುಗಿದ ಸಂಶೋಧನಾ ಫಲಿತಾಂಶ ಇಲ್ಲಿ ಗಮನಾರ್ಹ. ಅಲ್ಲಿ ಇಂಗ್ಲಿಷ್ ಮಾತೃಭಾಷೆಯವರು ಬಹುಸಂಖ್ಯಾತರಾಗಿದ್ದಾರೆ. ಅವರಲ್ಲದೆ ಪ್ರಪಂಚದ ವಿವಿಧ ದೇಶಗಳಿಂದ (ಉದಾಹರಣೆಗೆ: ಭಾರತ, ಚೀನಾ, ಜಪಾನು, ಆಫ್ರಿಕಾಗಳಿಂದ) ವಲಸೆ ಬಂದು ನೆಲಸಿದವರೂ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಹಾಗೆ ವಲಸೆ ಬಂದವರ ಮಕ್ಕಳಿಗೆ ಇಂಗ್ಲಿಷನ್ನು ಅಗತ್ಯವಾಗಿ ಕಲಿಸಬೇಕಾಗುತ್ತದೆ. ನೇರವಾಗಿ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿತವರಿಗೂ, ಅವರವರ ಮಾತೃಭಾಷಾ-ಹಿಂದಿ, ತಮಿಳು, ಚೀಣೀ...) ಮಾಧ್ಯಮಗಳಲ್ಲಿ ಕಲಿತವರಿಗೂ

**ಮಾತೃಭಾಷಾ ಮಾಧ್ಯಮದಿಂದ ಇಂಗ್ಲಿಷ್ ಕಲಿತವರೂ ಮುಂದೆ ಇಂಗ್ಲಿಷಿನಲ್ಲಿ ಪ್ರಭುತ್ವ ಪಡೆಯುವಲ್ಲಿ ಇತರರಿಗಿಂತ ಮುಂದಿರುವುದೇ ಸಾಬೀತಾಗಿದೆಯಂತೆ. ಅದರಿಂದ ಹೊರ ದೇಶಗಳಿಂದ ವಲಸೆ ಬಂದಿರುವವರು ತಮ್ಮ ಮಕ್ಕಳಿಗೆ ಅವರ ಮಾತೃಭಾಷಾ ಮಾಧ್ಯಮದಿಂದಲೇ ಇಂಗ್ಲಿಷ್ ಕಲಿಸುವುದಕ್ಕೆ ಖಾಸಗಿಯಾಗಿ ಕಲಿಸುವ ಏರ್ಪಾಡು ಮಾಡುತ್ತಿದ್ದಾರಂತೆ. ಇದರಿಂದ ನಮ್ಮ ದೇಶದಲ್ಲಿ ಮಾತೃಭಾಷೆಯ ಬದಲಿಗೆ ಇಂಗ್ಲಿಷಿನಂತಹ ಪರಭಾಷೆ ಮಾಧ್ಯಮದಲ್ಲಿ ಕಲಿಕೆಯನ್ನು ಆರಂಭಿಸುತ್ತಿರುವುದರ ಉದ್ದೇಶವೇನೆಂಬುದು ನಿಗೂಢವೆ ಸರಿ. ಮಾತೃಭಾಷೆಯ ಮಾಧ್ಯಮದ ಮೂಲಕವೇ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಬೇಕೆಂಬ ಹಲವು ಭಾಷಾ ಪರಿಣತರು, ಮನೋವಿಜ್ಞಾನಿಗಳು, ರವೀಂದ್ರನಾಥ ಟ್ಯಾಗೋರ್, ಮಹಾತ್ಮಾ ಗಾಂಧೀಜೀಯವರಂಥ ದಾರ್ಶನಿಕರು ಹೇಳುವುದರಲ್ಲಿ ಸತ್ಯವಿದೆಯೆಂದನ್ನಬೇಕಾಗುತ್ತದೆ. ಆದುದರಿಂದ ನಮ್ಮ ದೇಶದಲ್ಲಿ ಇನ್ನೂ ಇಂಗ್ಲಿಷಿನಂತಹ ಪರಭಾಷೆಯಿಂದ ವ್ಯಾಪಕವಾಗಿ ಜರುಗುತ್ತಿರುವ ಈ ಪದ್ಧತಿಯನ್ನು ಸರ್ಕಾರ ಮತ್ತು ಜನಸಮುದಾಯದವರು ಮರುಪರಿಶೀಲನೆ ಮಾಡಬೇಕಾದ ಪರಿಸ್ಥಿತಿ ಸನ್ನಿಹಿತವಾಗಿದೆಯೆನ್ನಬಹುದು.**

ಡಾ|| ಎಚ್. ಡಿ. ಚಂದ್ರಪ್ಪಗೌಡ

ಸಂವೇದ್ಯವಾದ ವ್ಯತ್ಯಾಸವನ್ನು ಗುರುತಿಸಲು ಸಾಧ್ಯವಾಯಿತಂತೆ. ಅದೆಂದರೆ ಮಾತೃಭಾಷಾ ಮಾಧ್ಯಮದಿಂದ ಇಂಗ್ಲಿಷ್ ಕಲಿತವರೂ ಮುಂದೆ ಇಂಗ್ಲಿಷಿನಲ್ಲಿ ಪ್ರಭುತ್ವ ಪಡೆಯುವಲ್ಲಿ ಇತರರಿಗಿಂತ ಮುಂದಿರುವುದೇ ಸಾಬೀತಾಗಿದೆಯಂತೆ. ಆದರಿಂದ ಹೊರ ದೇಶಗಳಿಂದ ವಲಸೆ ಬಂದಿರುವವರು ತಮ್ಮ ಮಕ್ಕಳಿಗೆ ಅವರ ಮಾತೃಭಾಷಾ ಮಾಧ್ಯಮದಿಂದಲೇ ಇಂಗ್ಲಿಷ್ ಕಲಿಸುವುದಕ್ಕೆ ಖಾಸಗಿಯಾಗಿ ಕಲಿಸುವ ಏರ್ಪಾಡು ಮಾಡುತ್ತಿದ್ದಾರಂತೆ. ಇದರಿಂದ ನಮ್ಮ ದೇಶದಲ್ಲಿ ಮಾತೃಭಾಷೆಯ ಬದಲಿಗೆ ಇಂಗ್ಲಿಷಿನಂತಹ ಪರಭಾಷೆ ಮಾಧ್ಯಮದಲ್ಲಿ ಕಲಿಕೆಯನ್ನು ಆರಂಭಿಸುತ್ತಿರುವುದರ ಉದ್ದೇಶವೇನೆಂಬುದು ನಿಗೂಢವೆ ಸರಿ. ಮಾತೃಭಾಷೆಯ ಮಾಧ್ಯಮದ ಮೂಲಕವೇ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಬೇಕೆಂಬ ಹಲವು ಭಾಷಾ ಪರಿಣತರು, ಮನೋವಿಜ್ಞಾನಿಗಳು, ರವೀಂದ್ರನಾಥ ಟ್ಯಾಗೋರ್, ಮಹಾತ್ಮಾ ಗಾಂಧೀಜೀಯವರಂಥ ದಾರ್ಶನಿಕರು ಹೇಳುವುದರಲ್ಲಿ ಸತ್ಯವಿದೆಯೆಂದೆನ್ನಬೇಕಾಗುತ್ತದೆ. ಆದುದರಿಂದ ನಮ್ಮ ದೇಶದಲ್ಲಿ ಇನ್ನೂ ಇಂಗ್ಲಿಷಿನಂತಹ ಪರಭಾಷೆಯಿಂದ ವ್ಯಾಪಕವಾಗಿ ಜರುಗುತ್ತಿರುವ ಈ ಪದ್ಧತಿಯನ್ನು ಸರ್ಕಾರ ಮತ್ತು ಜನಸಮುದಾಯದವರು ಮರುಪರಿಶೀಲನೆ ಮಾಡಬೇಕಾದ ಪರಿಸ್ಥಿತಿ ಸನ್ನಿಹಿತವಾಗಿದೆಯೆನ್ನಬಹುದು.

**ಬೀದರ್ ಉರ್ದು ಶಾಲೆಯ ನಿದರ್ಶನ**

ಮೊದಲಿನಿಂದಲೂ ಮಾತೃಭಾಷಾ ಮಾಧ್ಯಮ ಮೂಲಕ ಕಲಿಕೆಯನ್ನು ಆರಂಭಿಸುವ ಅನುಕೂಲತೆಯನ್ನು ಪ್ರಸ್ತಾಪಿಸಿರುವುದು ಕೇವಲ ತಾತ್ವಿಕವಾದದ್ದು; ಕಾರ್ಯಸಾಧು ವಾದುದಲ್ಲ ಎಂದೆನಿಸಲೂಬಹುದು. ಅದು ಹೇಗೆ ಕಾರ್ಯಸಾಧುವೆಂಬುದನ್ನು ಸೂಚಿಸಲು ನಮ್ಮ ಕನ್ನಡನಾಡಿನ ಬೀದರ್‌ನಲ್ಲಿ ಜರುಗುತ್ತಿರುವ ಒಂದು ಪ್ರಾತ್ಯಕ್ಷಿಕೆಯನ್ನು ಉದಾಹರಿಸುವುದು ಸೂಕ್ತವೆನಿಸುತ್ತದೆ.

ಕರ್ನಾಟಕದ ಉತ್ತರದ ತುದಿಯಲ್ಲಿರುವ ಬೀದರ್‌ನಲ್ಲಿ ೧೯೯೧ರಲ್ಲಿ ಷಾಹೀನ್ ಸ್ಕೂಲ್ ಎಂಬ ಅಲ್ಪಸಂಖ್ಯಾತರ ಉರ್ದು ಭಾಷೆಯ ಶಾಲೆಯೊಂದು ಪ್ರಾರಂಭವಾಯಿತು. ಪ್ರಾಥಮಿಕ ಒಂದನೇ ತರಗತಿಯಿಂದಲೇ ವಿಜ್ಞಾನದ ವಿಷಯಗಳೂ ಸೇರಿದಂತೆ ಇತರ ಎಲ್ಲಾ ವಿಷಯಗಳನ್ನು ಉರ್ದು ಭಾಷಾ ಮಾಧ್ಯಮದಲ್ಲೇ ಬೋಧಿಸುತ್ತಿರುವುದು ಅದರ ವಿಶೇಷತೆ; ಜೊತೆಯಲ್ಲಿ ಇಂಗ್ಲಿಷನ್ನು ಒಂದು ಪಠ್ಯದ ವಿಷಯವಾಗಿ – ಮಾಧ್ಯಮವಾಗಿ ಅಲ್ಲ– ಕಲಿಸುತ್ತಿರುವುದು ಆ ಶಾಲೆಯ ಇನ್ನೂ ಒಂದು ವೈಶಿಷ್ಟ್ಯ !

ಪದವಿ ಪೂರ್ವ ಹಂತದವರೆಗೂ ಈ ರೀತಿಯ ಕಲಿಕೆ ಮುಂದುವರಿಯಿತು. ಕಳೆದ ವರ್ಷ ಪದವಿ ಪೂರ್ವ ಪರೀಕ್ಷೆಗೆ ಕುಳಿತ ೧೭೩ ವಿದ್ಯಾರ್ಥಿಗಳಲ್ಲಿ ಶೇ. ೭೦ರಷ್ಟು ವಿದ್ಯಾರ್ಥಿಗಳು ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾಗಿದ್ದರು. ಮುಂದೆ ವೃತ್ತಿಪರ ಕಲಿಕೆಗಾಗಿ ಸಿ.ಇ.ಟಿ. ಪರೀಕ್ಷೆಗೆ ಕುಳಿತ ಸುಮಾರು ಅರ್ಧದಷ್ಟು ವಿದ್ಯಾರ್ಥಿಗಳು ಮೆಡಿಕಲ್ ಮತ್ತು ಇಂಜಿನಿಯರಿಂಗ್ ಕೋರ್ಸುಗಳಿಗೆ ಸೇರುವ ಅರ್ಹತೆ ಪಡೆದುಕೊಂಡಿದ್ದರು. ಇಂತಹ ಅಚ್ಚರಿಯ ಫಲಿತಾಂಶ ಉರ್ದು ಮಾಧ್ಯಮದಲ್ಲಿ ಕಲಿತವರಿಂದ ಎಂದರೆ ನಂಬಲಸಾಧ್ಯವೆ! ಅಂತಹ ಉತ್ತಮ ಫಲಿತಾಂಶ ಸಾಧ್ಯವಾದುದಾದರೂ ಹೇಗೆ ? ಅವರಿಗೆಲ್ಲಾ ಹತ್ತನೆ ತರಗತಿಯ ಪರೀಕ್ಷೆಗಳು ಮುಗಿದ ತಕ್ಷಣ ೪೦ ದಿನಗಳ ಕಾಲ ಹಿಂದಿನ ವರ್ಷಗಳಲ್ಲಿ ಉರ್ದುವಿನಲ್ಲಿ ಕಲಿತವರಿಗೆಲ್ಲಾ ಒಂದು ರೀತಿಯ ಸಂಯೋಜಿತ ಉಪನ್ಯಾಸಮಾಲೆಯನ್ನು ಏರ್ಪಡಿಸುತ್ತಾರಂತೆ. ಅದರಿಂದಾಗಿ ಅವರೆಲ್ಲಾ ಮುಂದಿನ ತರಗತಿಗಳಲ್ಲಿ (ಪದವಿ ಪೂರ್ವ) ವಿಜ್ಞಾನದ ವಿಷಯಗಳೂ ಸೇರಿದಂತೆ ಎಲ್ಲಾ ವಿಚಾರಗಳನ್ನು ಇಂಗ್ಲಿಷಿನಲ್ಲಿ ಪುನರವಲೋಕನ ಮಾಡಿಕೊಳ್ಳಲು ಸಾಧ್ಯವಾಗುತ್ತದಂತೆ. ಇದರಿಂದ ಉರ್ದುವಿನಲ್ಲಿ ಕಲಿತ ವಿಷಯಗಳನ್ನು ಇಂಗ್ಲಿಷಿಗೆ ಸುಲಭವಾಗಿ ಸಾಗಣೆ ಮಾಡಿದಂತಾಗುತ್ತದೆ. ಅಂದರೆ ಈ ಶಾಲೆಯಲ್ಲಿ ಇಂಗ್ಲಿಷ್ ಬೋಧನೆಗೆ ಹೆಚ್ಚಿನ ಒತ್ತು ಕೊಡುವ ಬದಲು ಗಂಭೀರವಾದ ಶೈಕ್ಷಣಿಕ ವಿಷಯಗಳಿಗೆ ಮೊದಲ ಪ್ರಾಶಸ್ತ್ಯ ಕೊಟ್ಟು, ಜೊತೆ ಜೊತೆಯಲ್ಲೇ ಇಂಗ್ಲಿಷ್ ಕಲಿಕೆಗೂ ಅವಕಾಶ ಮಾಡಿಕೊಡುತ್ತಿದ್ದರು.

ಮೊದಲಿನಿಂದಲೂ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯದವರು ಮುಂದೆ ವೈಜ್ಞಾನಿಕ ವಿಷಯಗಳನ್ನು ಅಭ್ಯಾಸ ಮಾಡುವುದು ಕಷ್ಟವಾಗುತ್ತದೆಂದು ವಾದಿಸುವವರೂ ಇದ್ದಾರೆ. ಹಾಗೆ ವಿಜ್ಞಾನದ ಪಾರಿಭಾಷಿಕ ಪದಗಳನ್ನು ಅರ್ಥಮಾಡಿಕೊಳ್ಳುವುದೂ ಸುಲಭವಲ್ಲ ಎನ್ನುವವರಿಗೂ ಬರವಿಲ್ಲ.

ವೈದ್ಯಕೀಯ, ಇಂಜಿನಿಯರಿಂಗ್, ಮಾಹಿತಿ ತಂತ್ರಜ್ಞಾನ ಮುಂತಾದ ಶಾಖೆಗಳಲ್ಲಿ ಮುಂದುವರಿದ ಕಲಿಕೆಗೆ ಇಂಗ್ಲಿಷ್ ಮಾಧ್ಯಮ ಅತ್ಯಾವಶ್ಯಕವೆಂಬ ನಂಬಿಕೆಯೂ ಪ್ರಚಲಿತವಿದೆ. ಹಾಗೆ ನೋಡಿದರೆ ಇಂಗ್ಲಿಷಿನಲ್ಲಿ ಪ್ರಚಲಿತವಿರುವ ಪಾರಿಭಾಷಿಕ ಪದಗಳು ಮೂಲತಃ ಇಂಗ್ಲಿಷಿನವಲ್ಲ, ಬದಲಾಗಿ ಪುರಾತನ ಲ್ಯಾಟಿನ್ ಗ್ರೀಕ್‌ನಂಥ ಭಾಷೆಗಳವು. ಅವುಗಳನ್ನು ಕನ್ನಡದಲ್ಲಿ ವಿವರಿಸಿ ಅವು ಇದ್ದ ಹಾಗೆ ಬಳಸಬಹುದು; ಮತ್ತೆ ಕೆಲವನ್ನು ಕನ್ನಡದೊಡನೆ ಸೇರಿಸಿ ಪರಿವರ್ತನೆ ಮಾಡಿಕೊಳ್ಳಲು ಸಾಧ್ಯವಿದೆ.

ಕನ್ನಡವೂ ಸೇರಿದಂತೆ ವೈಜ್ಞಾನಿಕ ವಿಷಯಗಳನ್ನು ದೇಶೀಯ ಭಾಷೆಗಳಲ್ಲಿ ಸಮರ್ಥವಾಗಿ ಬರೆದು ಪ್ರಖ್ಯಾತಿ ಪಡೆದವರೂ ಬಹಳಷ್ಟು ಜನರು ನಮ್ಮಲ್ಲಿದ್ದಾರೆ. ಕನ್ನಡದಲ್ಲಿ ವೈದ್ಯಕೀಯವೂ ಸೇರಿದಂತೆ ಈಗಾಗಲೇ ನೂರಾರು ಲೇಖಕರು ಪ್ರತಿವರ್ಷ ಸಾವಿರಾರು ಜನಪ್ರಿಯ ಲೇಖನಗಳನ್ನು ಹಾಗೂ ನೂರಾರು ಪುಸ್ತಕಗಳನ್ನು ಪ್ರಕಟಿಸುತ್ತಿದ್ದಾರೆ. ಅವುಗಳಲ್ಲಿ ಅನೇಕ ಕೃತಿಗಳಿಗೆ ಸ್ಥಳೀಯ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರಗಳು ಲಭಿಸುತ್ತಿವೆ.

ಪ್ರಪಂಚದಾದ್ಯಂತ ವೈಜ್ಞಾನಿಕ ಸಾಧನೆಗಳಲ್ಲಿ ಪ್ರಸ್ತುತ ಮುಂಚೂಣಿಯಲ್ಲಿರುವುದು ಇಂಗ್ಲಿಷ್ ಮಾತೃಭಾಷೆಯಾಗಿರುವ ಅಮೇರಿಕಾ, ಇಂಗ್ಲೆಂಡುಗಳಂಥ ರಾಷ್ಟ್ರಗಳು ಎಂಬ ಭಾವನೆಯಿದೆಯಷ್ಟೆ. ಕಳೆದ ಶತಮಾನದಲ್ಲಿ ಬಾಹ್ಯಾಕಾಶ ಸಂಶೋಧನಾ ಕ್ಷೇತ್ರದಲ್ಲಿ ತೀವ್ರ ಪೈಪೋಟಿ ನಡೆಯುತ್ತಿತ್ತು. ಮೊಟ್ಟಮೊದಲು ಬಾಹ್ಯಾಕಾಶಕ್ಕೆ ಕೃತಕ ಉಪಗ್ರಹ ಸ್ಪುಟ್ನಿಕ್‌ಅನ್ನು ೧೯೫೭ರಲ್ಲಿ ಹಾರಿಸಿದವರು ಇಂಗ್ಲಿಷ್ ಮಾತೃಭಾಷೆಯಲ್ಲದ ರಷ್ಯನ್ನರು. ಅದೇ ರೀತಿ ಮೊದಲ ಯಶಸ್ವೀ ಚಂದ್ರಯಾನ ಮಾಡಿದವರೂ ಅವರೇ (೧೯೫೯). ಅವರ ಭಾಷೆ ರಷ್ಯನ್; ಇಂಗ್ಲಿಷ್ ಅಲ್ಲ ಎಂಬುದು ಗಮನಾರ್ಹ. ಈಗಲೂ ವೈಜ್ಞಾನಿಕ ಸಂಶೋಧನೆ ಗಳಲ್ಲಿ ಜರ್ಮನಿ, ಜಪಾನು, ಕೊರಿಯಾದಂತಹ ಇಂಗ್ಲಿಷ್ ಅಲ್ಲದವರು ಮುಂದಿದ್ದಾರೆ. ಭಾರತವೂ ಆ ದಿಸೆಯಲ್ಲಿ ದಾಪುಗಾಲು ಹಾಕುತ್ತಿದ್ದು, ಮೂರು ತಿಂಗಳಗಳ ಹಿಂದೆ ಚಂದ್ರಯಾನ - ೧ನ್ನು ಹಾರಿಸಿದ ಗರಿಮೆ ನಮ್ಮದಾಗಿದೆಯಷ್ಟೆ. ಚಂದಿರನ ಅಂಗಳದಲ್ಲಿ ನಮ್ಮ ಉಪಗ್ರಹ ಈಗಲೂ ಪರಿಭ್ರಮಿಸುತ್ತಿದೆ. ನಮ್ಮಲ್ಲೂ ಬಾಹ್ಯಾಕಾಶ ವಿಜ್ಞಾನ ಸಾಕಷ್ಟು ಮುಂದುವರಿ ಯುತ್ತಿದ್ದು ಆ ಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಿರುವವರ ಮಾತೃಭಾಷೆ ಭಾರತದ ಮೂಲದವೆ. ಅದರಲ್ಲೂ ಕನ್ನಡಿಗರಾದ ನಮ್ಮ ವಿಜ್ಞಾನಿಗಳೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಅವರಲ್ಲಿ ಬಹುಪಾಲು ಮಂದಿ ಕನ್ನಡ ಮಾಧ್ಯಮದಲ್ಲೇ ಕಲಿತವರೆಂದು ಹೆಮ್ಮೆಯಿಂದ ಹೇಳುತ್ತಾರೆ. ಅದೇ ರೀತಿ ಐ.ಟಿ. - ಬಿ.ಟಿ. ಕ್ಷೇತ್ರದಲ್ಲೂ ಕನ್ನಡಿಗರೇ ಇದ್ದು ನಮ್ಮ ರಾಜಧಾನಿ ಬೆಂಗಳೂರು ಇಂಡಿಯಾದ ಸಿಲಿಕಾನ್ ಸಿಟಿ ಎಂದು ವಿಶ್ವದೆಲ್ಲೆಡೆ ಗುರುತಿಸಲ್ಪಟ್ಟಿದೆ.

ಮಾತೃಭಾಷಾ ಮಾಧ್ಯಮದಲ್ಲಿ ಕಲಿಯುವುದರ ಬಗೆಗೆ ಇಷ್ಟೆಲ್ಲಾ ಸಾಧನೆ ನಮ್ಮದಾಗಿದ್ದರೂ ನಮ್ಮ ಜನಸಮುದಾಯದವರಿಗೆ ಇಂಗ್ಲಿಷ್ ಭಾಷಾ ಮಾಧ್ಯಮದ ಬಗೆಗೆ ಅತಿ ಹೆಚ್ಚಿನ ಅಭಿಮಾನವಿರುವುದರ ರಹಸ್ಯವೇನೆಂಬುದಂತೂ ಅರ್ಥವಾಗುತ್ತಿಲ್ಲ.

**ಸರ್ಕಾರಿ ಶಾಲೆಗಳಲ್ಲಿ ಸುಧಾರಣೆ ಈಗಿನ ಅವಶ್ಯಕತೆ**

ನಮ್ಮ ಜನರು ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗೆ ತಮ್ಮ ಮಕ್ಕಳನ್ನು ದಾಖಲು ಮಾಡಲು ಬೇರೆ ಕೆಲವು ಕಾರಣಗಳಿವೆ. ಅವುಗಳಲ್ಲಿ ಇಂಗ್ಲಿಷನ್ನು ಪ್ರಧಾನವಾಗಿ ಕಲಿಸು ವುದರಿಂದ ಮುಂದೆ ಉದ್ಯೋಗದ ಅವಕಾಶ ಅಪರಿಮಿತವಾಗಿರುತ್ತದೆಂಬುದೊಂದು. ಅದು ಮೇಲ್ನೋಟಕ್ಕೆ ಸ್ವಲ್ಪಮಟ್ಟಿಗೆ ಸರಿಯೆನಿಸಬಹುದಾದರೂ ನಮ್ಮ ನಾಡಿನ ಸುಮಾರು ಐದು ಕೋಟಿ ಜನರ ಮಕ್ಕಳಲ್ಲಿ ಶೇಕಡಾವಾರು ಅದೆಷ್ಟು ಮಕ್ಕಳು ವಿಜ್ಞಾನಿಗಳು, ಐ.ಟಿ. - ಬಿ.ಟಿ., ವೈದ್ಯರು, ಇಂಜಿನಿಯರಿಂಗ್ ಮುಂತಾದ ಕ್ಷೇತ್ರಗಳಲ್ಲಿ ಪರಿಣತಿ ಪಡೆಯಲು ಸಾಧ್ಯವಾಗಬಹುದೆಂಬುದನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಅದು ಹೆಚ್ಚೆಂದರೆ ಶೇ. ೫-೧೦ರಷ್ಟು ಮಕ್ಕಳಿಗೆ ಸಾಧ್ಯವೆಂದುಕೊಳ್ಳಬಹುದೇನೋ ? ಇನ್ನುಳಿದವರು ಸಾಮಾನ್ಯ ಮಟ್ಟದ ಕೆಲಸಕಾರ್ಯಗಳಲ್ಲಿ ತೊಡಗಿಕೊಳ್ಳುವುದು ಅನಿವಾರ್ಯವಾಗುತ್ತದೆ. ಆ ಸಲುವಾಗಿ ಕನ್ನಡನಾಡಿನ ಎಲ್ಲಾ ಮಕ್ಕಳೂ ಆರಂಭದ ಹಂತದಿಂದಲೇ ಇಂಗ್ಲಿಷ್ ಮಾಧ್ಯಮದಲ್ಲೇ ವಿದ್ಯಾಭ್ಯಾಸ ಮಾಡಬೇಕೆಂಬುದು ಯಾವ ನ್ಯಾಯ? ಅಂದರೆ ಇಂಗ್ಲಿಷ್‌ಅನ್ನೂ ಸಂಪೂರ್ಣವಾಗಿ ನಿಷೇಧಿಸಬೇಕೆಂದು ಹೇಳುವುದೂ ಸರಿಯಲ್ಲ. ಯಾರು ಯಾರಿಗೆ ಎಷ್ಟರಮಟ್ಟಿನ ಇಂಗ್ಲಿಷು ಬೇಕೆಂಬುದನ್ನು ಇಲ್ಲಿ ಗಮನದಲ್ಲಿರಿಸಿಕೊಳ್ಳಬೇಕಾಗುತ್ತದೆ.

ಆ ದಿಸೆಯಲ್ಲಿ ಒಂದು ಸ್ಪಷ್ಟವಾದ ಕಲಿಕಾ ಕಾರ್ಯನೀತಿಯನ್ನು ರೂಪಿಸುವುದು ಅಗತ್ಯ. ಆ ಸಲುವಾಗಿ ಮಕ್ಕಳಿಗೆ ಒಂದನೇ ತರಗತಿಯಿಂದಲೇ ಕನ್ನಡ ಮಾಧ್ಯಮದಲ್ಲೇ ಕಲಿಕೆಯನ್ನು ಆರಂಭಿಸಿ, ಹತ್ತನೆ ತರಗತಿಯವರೆಗೆ ಮುಂದುವರಿಸುವುದು; ಇಂಗ್ಲಿಷನ್ನು ಒಂದನೇ ತರಗತಿಯಿಂದ ಒಂದು ಪಠ್ಯ ವಿಷಯವಾಗಿ ಬೀದರ್ ಮಾದರಿಯಂತೆ ಕಲಿಸುವ ಏರ್ಪಾಡು ಮಾಡುವುದು. ಅಂತಹವರು ಹತ್ತನೇ ತರಗತಿಯನ್ನು ಮುಗಿಸುವಷ್ಟರಲ್ಲಿ ಇಂಗ್ಲಿಷಿನಲ್ಲಿ ಬರೆಯಲು, ಮಾತನಾಡಲು ಸಾಕಷ್ಟು ಪರಿಣತಿಯನ್ನು ಪಡೆದುಕೊಳ್ಳು ವುದರಲ್ಲಿ ಸಂದೇಹವಿಲ್ಲ. ಎಲ್ಲರಿಗೂ ಹತ್ತನೇ ತರಗತಿಯವರೆಗೆ ಮುಂದುವರಿಯಲು ಅಸಾಧ್ಯವಾದರೂ, ಅಷ್ಟೋ ಇಷ್ಟೋ ಇಂಗ್ಲಿಷಿನ ಪರಿಚಯವಾಗಿರುತ್ತದೆ.

ಇತ್ತೀಚಿನ ವರ್ಷಗಳಲ್ಲಿ ಇಂಗ್ಲಿಷಿನ ಬಗೆಗೆ ಅತಿಯಾದ ವ್ಯಾಮೋಹದಿಂದ

ಖಾಸಗಿಯಾಗಿ ಸ್ಥಾಪನೆಯಾಗಿ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಸುವ ಕಾನ್ವೆಂಟುಗಳಿಗೆ ಸೇರಲು ಮುಗಿಬೀಳುತ್ತಿದ್ದಾರೆ. ಅವುಗಳು ಇಂಗ್ಲಿಷ್ ಕಲಿಸುವುದರ ಜೊತೆಗೆ ಉತ್ತಮ ಬೋಧಕರು, ಸಿಬ್ಬಂದಿವರ್ಗ, ಕಟ್ಟಡ ಹಾಗೂ ಮತ್ತಿತರ ಸೌಕರ್ಯ ಹೊಂದಿರುತ್ತವೆ. ಅವೀಗ ಪೇಟೆ ಪಟ್ಟಣಗಳೇ ಅಲ್ಲದೆ ಹಳ್ಳಿ ಹಳ್ಳಿಗಳಲ್ಲೂ ತಲೆಯೆತ್ತುತ್ತಿರುವುದನ್ನು ನೋಡಬಹುದಾಗಿದೆ. ಬಡಬಗ್ಗರು ಆರ್ಥಿಕವಾಗಿ ದುರ್ಬಲರಾಗಿದ್ದರೂ ಸಾಲ ಸೋಲ ಮಾಡಿಯಾದರೂ ತಮ್ಮ ಮಕ್ಕಳನ್ನು ಅವುಗಳಿಗೆ ಸೇರಿಸುವ ಪ್ರಯತ್ನ ಮಾಡುತ್ತಿದ್ದಾರೆ. ಆದ್ದರಿಂದ ಸರ್ಕಾರಿ ಶಾಲೆಗಳಲ್ಲಿ ಈಗಿರುವ ನ್ಯೂನತೆಗಳನ್ನು ಸರಿಪಡಿಸಿ ಅವುಗಳ ಸ್ಥಿತಿಗತಿಗಳಲ್ಲಿ ಬಹಳಷ್ಟು ಸುಧಾರಣೆಗಳನ್ನು ತರುವಲ್ಲಿ ತುರ್ತಾಗಿ ಗಮನ ಹರಿಸಬೇಕು. ಇದಾಗಲೇ ಸರ್ಕಾರ ಬಿಸಿಯೂಟ, ಬೈಸಿಕಲ್‌ಗಳ ಕೊಡುಗೆಗಳು ಕರ್ನಾಟಕದಲ್ಲಿ ವಿದ್ಯಾರ್ಥಿಗಳಿಗೆ ಬಹಳಷ್ಟು ಸಹಾಯಮಾಡಿವೆ. ಅದೇ ರೀತಿಯಲ್ಲಿ ಇಂತಹ ಯೋಜನೆ ಹಂತ ಹಂತವಾಗಿಯಾದರೂ ಜಾರಿಗೆ ಬಂದರೆ ಕನ್ನಡ ನಾಡು ನುಡಿಯ ಉಳಿವಿಗೆ ಮಹದುಪಕಾರ ಮಾಡಿದಂತಾಗುತ್ತದೆಂಬುದು ನನ್ನ ಆಶಯ.

**ಪಶ್ಚಿಮ ಘಟ್ಟ ಬೆಳೆಸಿ – ಕರ್ನಾಟಕ ಉಳಿಸಿ**

ಇತ್ತೀಚಿನ ದಶಕಗಳಲ್ಲಿ ನಮ್ಮ ನಾಡಿನಾದ್ಯಂತ ಪರಿಸರ ನಾಶ ಕುರಿತು ಆಂದೋಲನಗಳು



ಜರುಗುತ್ತಿರುವುದು ದಿನನಿತ್ಯದ ಸುದ್ದಿಯಾಗುತ್ತಿದೆ. ಉತ್ತರದ ಹಿಮಾಲಯದಿಂದ ಹಿಡಿದು ದಕ್ಷಿಣದ ಪಶ್ಚಿಮ ಘಟ್ಟ ಶ್ರೇಣಿಗಳು ಅನಾದಿಯಿಂದಲೂ ನಮ್ಮ ನಾಡಿನ ಜೀವನದಿಗಳು ಉಗಮಿಸುವ ತಾಣಗಳಾಗಿವೆ. ನಮ್ಮ ಪಶ್ಚಿಮ ಘಟ್ಟಗಳು ಪ್ರತಿವರ್ಷ ಜೂನ್‌ನಿಂದ ಸೆಪ್ಟೆಂಬರ್ ತಿಂಗಳವರೆಗೆ ಧಾರಾಕಾರವಾಗಿ ಸುರಿಸುವ ಮುಂಗಾರು ಮಳೆಯಿಂದಲೇ ನಾವೆಲ್ಲಾ ಬದುಕಲು ಸಾಧ್ಯವಾಗುತ್ತಿರುವುದು. ಮುಂಗಾರು ಮಳೆ ಹಾಗೂ ನಮ್ಮ ದೇಶದ ಉದ್ದಗಲದಲ್ಲೆಲ್ಲಾ ಹರಡಿರುವ ರೈಲ್ವೆ ಸಂಪರ್ಕ ಜಾಲ ನಮ್ಮ ಜೀವನಾಡಿಯಾಗಿವೆ. ಎರಡು ವರ್ಷಗಳ ಹಿಂದೆ ಇಂಗ್ಲೆಂಡಿನ ಬಿ.ಬಿ.ಸಿ. ಟಿ.ವಿ.ಯವರು ಮಾನಸೂನ್ ರೈಲ್ ಎಂಬ ಸಾಕ್ಷ್ಯ ಚಿತ್ರವನ್ನು ನಿರ್ಮಿಸಿದ್ದರೆಂದರೆ ಪಶ್ಚಿಮ ಘಟ್ಟದ ಪ್ರಾಮುಖ್ಯತೆಯ ಅರಿವಾಗಬಹುದು. ಅಲ್ಲಿಂದ ಉಗಮಿಸಿ ಹರಿಯುವ ಕಾಳಿ, ಶರಾವತಿ, ತುಂಗಾ-ಭದ್ರಾ, ವಾರಾಹಿ, ಹೇಮಾವತಿ, ಕಾವೇರಿ, ಕಪಿಲಾ ನದಿಗಳು ಕರ್ನಾಟಕದ ಜೀವನಾಡಿಗಳಾಗಿರುವುವು. ಅಲ್ಲಿಯ ವೃಕ್ಷ ಸಂಪತ್ತು, ಖನಿಜ ಸಂಪತ್ತು, ಜೀವವೈವಿಧ್ಯದ ವನ್ಯಜೀವಿಗಳು ಮುಂತಾದವುಗಳ ಪಾತ್ರ ಬಹುಶಃ ನಮಗೆ ಅಷ್ಟಾಗಿ ಅರಿವಾಗಿರಲಿಲ್ಲವೆಂದರೆ ಅತ್ಯುಕ್ತಿಯಲ್ಲ.

ಆದರೆ ಇತ್ತೀಚಿನ ಅರ್ಧ ಮುಕ್ಕಾಲು ಶತಮಾನಗಳಿಂದ ಹೆಚ್ಚುತ್ತಿರುವ ಜನಸಂಖ್ಯೆ, ಕೈಗಾರಿಕಾ ಸ್ಥಾವರ ಮತ್ತಿತರ ಅವಶ್ಯಕತೆಗಳಿಗಾಗಿ ನೂರಾರು ಅಣೆಕಟ್ಟುಗಳನ್ನು ನಿರ್ಮಿಸಿ ಆಹಾರದ ಅವಶ್ಯಕತೆಗಾಗಿ, ವಿದ್ಯುಚ್ಛಕ್ತಿಯ ಸಲುವಾಗಿ ಸಾವಿರಾರು ಎಕರೆ ಅರಣ್ಯನಾಶ ಮಾಡಿದೆವು. ಹಾಗೆ ಅಪಾರ ವಿಸ್ತಾರದ ಭೂ ಪ್ರದೇಶ ಮುಳುಗಡೆಯಾಯಿತು. ಲಕ್ಷಾಂತರ ಜನ ನಿರಾಶ್ರಿತರಾದರು. ಇಂತಹ ಪರಿಸರ ನಾಶದಿಂದ ಕ್ಲುಪ್ತ ಕಾಲದಲ್ಲಿ ಸುರಿಯುತ್ತಿದ್ದ ಮುಂಗಾರು ಮಳೆಯ ಆಗಮನ ಯರ್ರಾಬಿರ್ರಿಯಾಯಿತು. ಅನಾವೃಷ್ಟಿಯಿಂದ ಬರಗಾಲ ಅಣಕಿಸತೊಡಗಿದೆ. ವಿದ್ಯುಚ್ಛಕ್ತಿ ಉತ್ಪಾದನೆಯಾಗದೆ ಕೈಗಾರಿಕಾ ಕ್ಷೇತ್ರ ನಲುಗುವಂತಾಗಿದೆ. ಖನಿಜಗಳನ್ನು ಹೊರತೆಗೆಯಲು ಪಶ್ಚಿಮ ಘಟ್ಟದಲ್ಲಿ ಗಣಿಗಾರಿಕೆ ಮಿತಿಮೀರಿ ಜರುಗಿತು. ನಾಡಿನ ಸರ್ವೋಚ್ಚ ನ್ಯಾಯಾಲಯವೆ ಕುದುರೆಮುಖದ ಗಣಿಗಾರಿಕೆಯನ್ನು ಮುಚ್ಚುವ ಆದೇಶ ನೀಡುವಂತಾಯಿತು ಎಂದರೆ ಪರಿಸರನಾಶದಿಂದಾಗುತ್ತಿರುವುದು ಅಂದಾಜಾಗ ಬಹುದು. ಯಾವುದೇ ಕಾರ್ಯವಿನಾಶದ ಅಥವಾ ಉತ್ಪನ್ನಕ್ಕೆ ಸಂಬಂಧಿಸಿದ್ದಾಗಲೀ ಅದಕ್ಕೆಲ್ಲಾ ಮಿತಿಯೆಂಬುದಿದ್ದೇ ಇರುತ್ತದೆ. ಇದೀಗ ಪಶ್ಚಿಮ ಘಟ್ಟದ ವಿನಾಶ ನಾನಾ ಕಾರಣಗಳಿಂದ ಮಿತಿ ಮೀರುತ್ತಿದೆಯೆಂದರೆ ಅತ್ಯುಕ್ತಿಯಲ್ಲ. ಸುಮಾರು ೧೯೮೫-೮೬ರ ಸಮಯದಲ್ಲಿ ಇಡೀ ಪಶ್ಚಿಮ ಘಟ್ಟದ ಉದ್ದಗಲದಲ್ಲಿ ಸಾಮೂಹಿಕವಾಗಿ ಜರುಗಿದ 'ಪಶ್ಚಿಮ ಘಟ್ಟ ಉಳಿಸಿ' ಆಂದೋಲನ ಜರುಗಿದ್ದು ಕೆಲವರಿಗಾದರೂ ನೆನಪಿರಬಹುದು. ಆ ಸಮಯದಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಸ್ಥಾಪನೆಯಾದ 'ಜಿಲ್ಲಾ ಪರಿಸರ ಸಂರಕ್ಷಣಾ ವೇದಿಕೆ'ಯ ಅಧ್ಯಕ್ಷ ನಾನಾಗಿದ್ದೆ. ಆ ಸಮಯದಲ್ಲಿ 'ಪಶ್ಚಿಮ ಘಟ್ಟ ಉಳಿಸಿ' ಆಂದೋಲನವಲ್ಲಿ ಸಕ್ರಿಯವಾಗಿ ಭಾಗವಹಿಸಿ ಕಾಲ್ನಡಿಗೆ ಜಾಥಾದಲ್ಲೂ ಇದ್ದೆ. ಅದರಿಂದಾದ ಅನುಭವದಿಂದ ಇನ್ನು ಮುಂದಾದರೂ ಪಶ್ಚಿಮ ಘಟ್ಟಕ್ಕೆ ಯಾವ ಕಾರಣದಿಂದಾಗಲಿ ಹಾನಿಯಾಗದಂತೆ ವರ್ತಿಸುವುದು ಸರ್ಕಾರಗಳು ಹಾಗೂ ಜನಸಮುದಾಯದ ಆದ್ಯಕರ್ತವ್ಯವಾಗಬೇಕು ಎನ್ನುತ್ತೇನೆ. ಅದರಿಂದ ಪಶ್ಚಿಮ ಘಟ್ಟ ಬೆಳಸಿ - ಕರ್ನಾಟಕ ಅಲ್ಲ, ಇಡೀ ದಕ್ಷಿಣ ಭಾರತ ಉಳಿಸಿ ಎಂಬುದು ಎಲ್ಲರ ಕರ್ತವ್ಯವಾಗಬೇಕೆಂದು ಕಳಕಳಿಯಿಂದ ಈ ವೇದಿಕೆಯಿಂದ ವಿನಂತಿಸುತ್ತೇನೆ.

ನನ್ನ ಈ ನಾಲ್ಕು ಮಾತುಗಳನ್ನು ಮುಗಿಸುವ ಮೊದಲು ಶಿವಮೊಗ್ಗ ಜಿಲ್ಲೆಯ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯ ವಿಶೇಷಗಳನ್ನು ಕುರಿತು ನನ್ನ ಅನಿಸಿಕೆಗಳನ್ನು ವ್ಯಕ್ತಪಡಿಸ ಬೇಕೆನಿಸುತ್ತದೆ. ಇತ್ತೀಚಿನ ಕೆಲವು ವರ್ಷಗಳಿಂದ ಅದು ವರ್ಷವಿಡೀ ಒಂದಲ್ಲ ಒಂದು ಸಾಹಿತ್ಯಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವುದನ್ನು ಗಮನಿಸಿದ್ದೇನೆ. ಅವುಗಳಲ್ಲಿ ಪ್ರತಿ ಹುಣ್ಣಿಮೆಗಳಲ್ಲಿ ಜರುಗುತ್ತಿರುವ ಸಾಹಿತ್ಯ ಹುಣ್ಣಿಮೆ ವಿಶೇಷ ಪರಿಣಾಮ ಬೀರಿರುವಂತಿದೆ. ಅಂತಹ ಒಂದು ಕಾರ್ಯಕ್ರಮದಲ್ಲಿ ನಾನು ಪ್ರೇಕ್ಷಕನಾಗಿ ಭಾಗವಹಿಸಿದ್ದುಂಟು. ಅಂತಹ ಸಾಹಿತ್ಯ ಸಾಂಸ್ಕೃತಿಕ ಕಾರ್ಯಕ್ರಮಗಳು ನಗರದ ಕೇಂದ್ರ ಭಾಗಗಳಲ್ಲಿ ಜರುಗುತ್ತಿರುತ್ತವೆ. ಆದರೆ ಹಳ್ಳಿಗಳು ಹಾಗೂ ದೂರದ ಬಡಾವಣೆಗಳಲ್ಲಿರುವ ಮಕ್ಕಳು, ಮಹಿಳೆಯರು ಹಾಗೂ ವಯಸ್ಸಾದವರು ಭಾಗವಹಿಸಲು ಸಾಧ್ಯವಾಗದು. ಆ ಸಂದರ್ಭದಲ್ಲಿ ಸಾಹಿತ್ಯ, ಸಂಗೀತ ಮುಂತಾದ ಕಾರ್ಯಕ್ರಮಗಳು ಬಡಾವಣೆಯ ಸಾಹಿತ್ಯಾಸಕ್ತರ ಮನೆಗಳಲ್ಲಿ ಏರ್ಪಾಡಾಗಿರುತ್ತವೆ. ಅಂದು ಯಾರಾದರೊಬ್ಬರ ಸಾಹಿತ್ಯದ ವಿಮರ್ಶೆಯೂ ಆಗಬಹುದು. ಅದರಿಂದ ಆ ಬಡಾವಣೆಯ ನಿವಾಸಿಗಳಲ್ಲಿ ಅನೇಕರು ಆ ತನಕ ಅಪರಿಚಿತರಂತಿದ್ದರೂ, ಆ ದಿನ ಸಂಜೆ ಒಂದೆಡೆ ಸೇರಿ ಸ್ನೇಹಿತರಂತೆ ಬೆರೆಯುವ ಅವಕಾಶವೂ ಉಂಟಾಗುತ್ತದೆ; ಸ್ವಲ್ಪಮಟ್ಟಿನ ಸಾಹಿತ್ಯ, ಮನರಂಜನೆಯೂ ಲಭ್ಯವಾಗುತ್ತದೆ. ಇಂತಹ ಕಾರ್ಯಕ್ರಮಗಳು ಇತರ ಘಟಕಗಳಿಗೂ ಅನುಕರಣೀಯವೆನ್ನಬಹುದು.

ಇನ್ನುಳಿದಂತೆ 'ತಿಂಗಳ ಅತಿಥಿ', 'ಶಾಲೆಗೊಂದು ಸಾಹಿತ್ಯ ಕಾರ್ಯಕ್ರಮ', 'ಜಿಲ್ಲೆಯ ಸಾಹಿತಿಗಳ ಕೃತಿಯ ವಿಮರ್ಶೆ', 'ವಿಶೇಷ ಕಾವ್ಯೋತ್ಸವ', 'ಮಕ್ಕಳ ಸಾಹಿತ್ಯ ಸಮ್ಮೇಳನ', ಹಲವು ದತ್ತಿ ಕಾರ್ಯಕ್ರಮಗಳು ಇಲ್ಲಿಯ ಪರಿಷತ್ತಿನ ವೈಶಿಷ್ಟ್ಯವೇ ಸರಿ. ಇವೆಲ್ಲಕ್ಕೂ ಕಲಶವಿಟ್ಟಂತೆ ಎರಡು ವರ್ಷಗಳ ಹಿಂದೆ ಇಲ್ಲಿ ಜರುಗಿದ ೭೩ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಅದರ ಆಳ, ವಿಸ್ತಾರ, ವೈಭವ, ಜರುಗಿದ ಕಾರ್ಯಕ್ರಮಗಳ ವೈವಿಧ್ಯತೆ, ಸೇರಿದ ಜನ ಸಾಗರ, ಆತಿಥ್ಯಗಳೆಲ್ಲಾ ನ ಭೂತೋ ನ ಭವಿಷ್ಯತಿ ಎಂಬಂತಿತ್ತು.

ಶಿವಮೊಗ್ಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನವರು ಇದೀಗ ಯೋಜಿಸುತ್ತಿರುವ 'ಸಾಹಿತ್ಯ ಗ್ರಾಮ' ಯೋಜನೆಯೂ ಅಪೂರ್ವವೆನ್ನಬಹುದು. 'ಕನ್ನಡ ಸಾಹಿತ್ಯದ ತೊಟ್ಟಿಲು' ಎನ್ನಲಾಗುವ ಇಲ್ಲಿನ ಪರಿಸರದಲ್ಲಿ ಅಂತಹ ಒಂದು ಪ್ರತ್ಯೇಕ ವ್ಯವಸ್ಥೆ ಆವಶ್ಯಕವೆಂದೇ ಹೇಳಬಹುದು. ಬಹುಶಃ ಸಾಹಿತ್ಯ ಕೃತಿ ರಚನಗಾರರು ಶಿಲ್ಪ, ಕಲೆ, ಸಂಸ್ಕೃತಿಗಳಲ್ಲಿ ಆಸಕ್ತರಾದವರು ಕೆಲ ಸಮಯ ಅಲ್ಲಿ ತಂಗಿದ್ದು ಯಾವುದೇ ಅಡಚಣೆಯಿಲ್ಲದೆ ಕಾರ್ಯೋನ್ಮುಖ ರಾಗಲು ಅಂತಹ ವ್ಯವಸ್ಥೆ ಸಹಕಾರಿಯಾಗುತ್ತದೆ. ಮೈಸೂರು ನಗರದ ಹತ್ತಿರದ ಬೋಗಾದಿ ಯಲ್ಲಿ ಹಲವು ದಶಕಗಳ ಹಿಂದೆ ಸ್ಥಾಪನೆಯಾದ 'ಧ್ವನ್ಯಾಲೋಕ'ದ ಮಾದರಿಯನ್ನು ಅನುಸರಿಸಿದಂತಾಗಬಹುದು. ಆ ಯೋಜನೆಗೆ ಸರ್ಕಾರ ಇದಾಗಲೇ ಸೂಕ್ತ ಜಾಗವನ್ನು ಗುರುತಿಸಿದೆ ಎನ್ನಲಾಗಿದೆ. ಅದೇ ರೀತಿಯಲ್ಲಿ ಅದರ ನಿರ್ಮಾಣಕ್ಕೆ ಅವಶ್ಯಕವಾದ ಆರ್ಥಿಕ ಸಹಾಯ ಮತ್ತಿತರ ಅನುಕೂಲತೆಗಳನ್ನು ದೊರಕಿಸಿಕೊಡುತ್ತದೆಂಬ ಭರವಸೆ ನನಗಿದೆ.

*(ಶಿವಮೊಗ್ಗ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದ ಆಯ್ದ ಭಾಗಗಳು: ಫೆಬ್ರವರಿ ೧೪-೧೫, ೨೦೦೮)*

**ಡಾ|| ಎಚ್. ಡಿ. ಚಂದ್ರಪ್ಪಗೌಡ**
ನಂ. ೬೪, 'ಶ್ರೀನಿವಾಸ ನಿಲಯ', ಮಿಶನ್ ಕಾಂಪೌಂಡ್, ಶಿವಮೊಗ್ಗ - ೫೭೭ ೨೦೧

# ನೇಪಾಳ ಬಿಕ್ಕಟ್ಟು : ಭಾರತ ರಚನಾತ್ಮಕ ಧೋರಣೆ ತಳೆಯಬೇಕು



**ನೇ**ಪಾಳದಲ್ಲಿ ಮಾವೋವಾದಿ ಪ್ರಧಾನಿ ಪುಷ್ಪಕಮಲ್‌ದಹಾಲು 'ಪ್ರಚಂಡ' ರಾಜೀನಾಮೆಯಿಂದ ರಾಜಕೀಯ ಬಿಕ್ಕಟ್ಟು ಉಲ್ಬಣಿಸಿದೆ. ಈ ರಾಜಕೀಯ ಬೆಳವಣಿಗೆಯ ಹಿಂದೆ ಪದಚ್ಯುತ ರಾಜಶಾಹಿ ಬೆಂಬಲಿಗರ ಕೈವಾಡ ಇಲ್ಲದಿಲ್ಲ. ಏಕೆಂದರೆ ವಿವಾದಿತ ನೇಪಾಳಿ ಸೇನೆಯ ದಂಡನಾಯಕ ಜನರಲ್ ರೂಕ್ಮಾಂಗದ್ ಕತ್‌ವಾಲ್ ದೊರೆ ಬೀರೇಂದ್ರನ ನಿಕಟವರ್ತಿ. ಮೊದಲಿನಿಂದಲೂ ಮಾವೋವಾದಿ ನೇತೃತ್ವದ ಸರಕಾರದ ಬಗ್ಗೆ ಅಸಹನೆ ಹೊಂದಿರುವ ನೇಪಾಳಿ ಕಾಂಗ್ರೆಸ್‌ನ ಪ್ರತಿನಿಧಿ ಅಧ್ಯಕ್ಷ ರಾಮ್ ಬರನ್ ಯಾದವ್ ನಾಗರಿಕ ಸರಕಾರದ ತೀರ್ಮಾನವನ್ನು ಎತ್ತಿಹಿಡಿಯದೆ ಸೇನಾ ಒತ್ತಾಯಕ್ಕೆ ಮಣಿದಿದ್ದಾರೆ. ನೇಪಾಳದಲ್ಲಿ ಉದ್ಭವಿಸಿರುವ ರಾಜಕೀಯ ಬಿಕ್ಕಟ್ಟಿನಲ್ಲಿ ಮುಖ್ಯವಾಗಿ ಎದ್ದಿರುವ ಪ್ರಶ್ನೆ ದೇಶದ ಸೇನೆ ಪ್ರಜಾಪ್ರಭುತ್ವ ಸರಕಾರದ ಅಧೀನದಲ್ಲಿರಬೇಕೆ ಬೇಡವೆ ಎನ್ನುವುದಾಗಿದೆ. ಸೇನೆ ನಾಗರಿಕ ಸರಕಾರದ ಆದೇಶಗಳನ್ನು ಕಾರ್ಯಗತ ಮಾಡಬೇಕಾದ್ದು ಕರ್ತವ್ಯ. ಹಾಗಿಲ್ಲದೆ ಹೋದಲ್ಲಿ ಸೇನೆ ಸರ್ವಾಧಿಕಾರದತ್ತ ಸರಿಯುತ್ತದೆ. ನೆರೆಯ ರಾಷ್ಟ್ರ ಪಾಕಿಸ್ತಾನದಲ್ಲಿ ಸೇನೆ ರಾಜಕೀಯದಲ್ಲಿ ಪ್ರವೇಶಿಸಿ ಸರ್ವಾಧಿಕಾರ ಚಲಾಯಿಸಿರುವುದನ್ನು ಇಲ್ಲಿ ಉದಾಹರಿಸಬಹುದು. ನೇಪಾಳದ ಪ್ರಧಾನಿ ಪ್ರಚಂಡ ಈ ವಿಚಾರದತ್ತ ಗಮನ ಸೆಳೆದಿದ್ದಾರೆ. ಚುನಾಯಿತ ಪ್ರಭುತ್ವದಲ್ಲಿ ಅಧಿಕಾರದಲ್ಲಿರುವ ಸರಕಾರದ ಆಜ್ಞೆಗಳನ್ನು ಪಾಲಿಸುವುದು ಸೇನೆಯ ಕರ್ತವ್ಯ ಎಂದು ಖಚಿತವಾಗಿ ಸಾರಿದ್ದಾರೆ.

ಮಾವೋವಾದಿಗಳು ಬಹುಮತ ಗಳಿಸಿ ಅಧಿಕಾರಸೂತ್ರ ಹಿಡಿದಾಗಿನಿಂದ ನೇಪಾಳದ ಬಲಪಂಥೀಯರೂ ವಿರೋಧ ಪಕ್ಷಗಳವರೂ ಹಾಗೂ ಸೇನೆ ಒಂದಲ್ಲ ಒಂದು ವಿಧದ ಅಡಚಣೆಗಳನ್ನು ಒಡ್ಡುತ್ತ ಬಂದಿದ್ದಾರೆ. ಕೆಲ ತಿಂಗಳಿಂದ ಸೇನಾಧಿಕಾರಿಗಳು ಸರಕಾರದ ಆದೇಶಗಳನ್ನು ಪಾಲಿಸದೆ ಕಡೆಗಣಿಸುತ್ತ ಬಂದಿದ್ದಾರೆ. ವಿವಾದದಲ್ಲಿ ಮುಖ್ಯವಾದ ಅಂಶವೆಂದರೆ ಸೇನೆಯಲ್ಲಿ ಯೋಧರ ಹಾಗೂ ಅಧಿಕಾರಿಗಳ ನೇಮಕ. ಮಾವೋವಾದಿಗಳು ಸಶಸ್ತ್ರ ಹೋರಾಟವನ್ನು ಸ್ಥಗಿತಗೊಳಿಸಿ ಶಾಂತಿ ಒಪ್ಪಂದ ಮಾಡಿಕೊಂಡಾಗಲೇ ಜನತಾ ವಿಮೋಚನಾ ಸೇನೆಯ ಯೋಧರನ್ನು ನೇಪಾಳೀ ಸೇನೆಯಲ್ಲಿ ಭರ್ತಿಮಾಡಿಕೊಳ್ಳಬೇಕೆಂದು ತೀರ್ಮಾನಿಸಲಾಗಿತ್ತು. ಪ್ರಧಾನಿ ಪ್ರಚಂಡ ಅವರು ವಿಮೋಚನಾ ಯೋಧರು ತಮ್ಮ ಪಕ್ಷಕ್ಕೆ ನಿಷ್ಠರಾಗಿರುವುದಕ್ಕಿಂತ ಹೆಚ್ಚಾಗಿ ದೇಶಕ್ಕೆ ನಿಷ್ಠರಾಗಿರುತ್ತಾರೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಹಾಗಿದ್ದರೂ ಇದರ ಸುತ್ತ ವಿವಾದ ಎಬ್ಬಿಸಿದ್ದಾರೆ. ಭಾರತ ಸರಕಾರ ಈ ವಿಚಾರದಲ್ಲಿ ಮೌನವಹಿಸಿರುವುದು ವಿಷಾದನೀಯ. ನಾಗರಿಕ ಸರಕಾರದ ತೀರ್ಮಾನಕ್ಕೆ ಬೆಂಬಲ ನೀಡುವ ಬದಲು ಭಾರತ ಸರಕಾರ ಪರೋಕ್ಷವಾಗಿ ಸೇನೆಗೆ ಬೆಂಬಲ ನೀಡಿದೆ. ನೇಪಾಳದ ಸೇನೆ ಮತ್ತು ಸರಕಾರದ ನಡುವೆ ಉದ್ಭವಿಸಿದ ವಿವಾದದಲ್ಲಿ ಭಾರತ ಸರಕಾರದ ನೆರವನ್ನು ಪ್ರಧಾನಿ ಪ್ರಚಂಡ ಅಪೇಕ್ಷಿಸಿದರೂ ಮನಮೋಹನ ಸಿಂಗ್ ಸರಕಾರ ಚುನಾವಣೆ ಹೆಸರಿನಲ್ಲಿ ನುಣುಚಿಕೊಂಡಿದೆ. ಈ ವಿಚಾರವನ್ನು ಸಂದರ್ಶನ ಒಂದರಲ್ಲಿ ಪ್ರಚಂಡ ಹೇಳಿಕೊಂಡಿದ್ದಾರೆ. ವಿದೇಶಾಂಗ ಕಾರ್ಯದರ್ಶಿಯನ್ನು ಕಳಿಸಲು ಭಾರತ ಸರಕಾರ ಸಮ್ಮತಿಸಲಿಲ್ಲ. ಶ್ರೀಲಂಕಾ ಎಲ್‌ಟಿಟಿಇ ಸಮರದ ವಿಚಾರದಲ್ಲಿ ಚುನಾವಣೆಗಳಿದ್ದಾಗ್ಯೂ ವಿದೇಶಾಂಗ ಸಚಿವ ಪ್ರಣಬ್ ಮುಖರ್ಜಿ, ವಿದೇಶಾಂಗ ಕಾರ್ಯದರ್ಶಿ ಹಾಗೂ ರಕ್ಷಣಾ ಸಲಹೆಗಾರ ಇವರೆಲ್ಲ ಶ್ರೀಲಂಕಾಗೆ ಭೇಟಿ ಕೊಡಲಿಲ್ಲವೆ ? ಹಾಗಿದ್ದರೆ ನೇಪಾಳದ ವಿಷಯದಲ್ಲಿ ಹಿಂದೇಟು ಹಾಕಿದ್ದೇಕೆ ?

ನೇಪಾಳದಲ್ಲಿ ಮಾವೋವಾದಿಗಳು ಅಧಿಕಾರ ಗ್ರಹಣ ಮಾಡುವುದು ಖಚಿತವಾದಂದಿನಿಂದ ಭಾರತ ಸರಕಾರ ಒಂದು ಬಗೆಯ ಅಸಹಕಾರದ ಧೋರಣೆಯನ್ನು ತಳೆದಿದೆ. ಮಾವೋವಾದಿಗಳ ಪ್ರಾಬಲ್ಯದಿಂದ ಭಾರತ ಸರಕಾರ ಮುಜುಗರಗೊಂಡಿದೆ. ಚೀಣಾದತ್ತ ನೇಪಾಳ ಸರಿಯುತ್ತದೆಂಬ ಭಯವೇ ಇದಕ್ಕೆ ಕಾರಣ. ನೇಪಾಳದ ಶಾಂತಿ ಪ್ರಕ್ರಿಯೆಯಲ್ಲಿ ಉತ್ಸಾಹ ತೋರಿದ್ದ ಭಾರತ, ಮಾವೋವಾದಿಗಳು ಚುನಾವಣೆಯಲ್ಲಿ ಬಹುಮತ ಗಳಿಸುತ್ತಾರೆಂದು ನಿರೀಕ್ಷಿಸಿರಲಿಲ್ಲ. ಯಾವತ್ತೂ ಅಧಿಕಾರದಲ್ಲಿದ್ದ ರಾಜಶಾಹಿ ಆಡಳಿತದ ಬೆಂಬಲಿಗ ಪಕ್ಷವಾದ ನೇಪಾಳಿ ಕಾಂಗ್ರೆಸ್ಸಿನೊಂದಿಗೆ ನಿಕಟ ಸಂಬಂಧ ಹೊಂದಿದ್ದ ಭಾರತ ಸರಕಾರ ಮಾವೋವಾದಿಗಳು ಅಧಿಕಾರಕ್ಕೆ ಬರುವುದನ್ನು ತಡೆಯಲು ಪರೋಕ್ಷವಾಗಿ ಪ್ರಯತ್ನಿಸಿದ್ದು ರಹಸ್ಯವೇನಲ್ಲ. ಭಾರತ ಸರಕಾರದ ಈ ವರ್ತನೆ ನಿಜವಾಗಿ ಸಮರ್ಥನೀಯವಲ್ಲ. ಬಹು ಮುಖ್ಯವಾದ ಸಂವಿಧಾನಾತ್ಮಕ ಪ್ರಶ್ನೆಯಾದ ನಾಗರಿಕ ಸರಕಾರದ ಶ್ರೇಷ್ಠತೆ ಎತ್ತಿಹಿಡಿಯದೆ ಹೋದದ್ದು ಖಂಡನೀಯ. ದೊಡ್ಡ ರಾಷ್ಟ್ರವಾಗಿ ನೆರೆಯ ರಾಜ್ಯ ನೇಪಾಳದಲ್ಲಿ ಪ್ರಜಾಪ್ರಭುತ್ವ ಸರಕಾರವನ್ನು ಭಾರತ ಸರಕಾರ ಬೆಂಬಲಿಸಬೇಕು. ಹಾಗಿಲ್ಲದೇ ಹೋದಲ್ಲಿ ಅನಾಹುತವಾಗುತ್ತದೆ.

ಮಾವೋವಾದಿಗಳು ಇದುವರೆಗೆ ಸಂಯಮದ ಧೋರಣೆಯನ್ನೇ ತಳೆದಿದ್ದಾರೆ. ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಭದ್ರಗೊಳಿಸಲು ತಾವು ಬದ್ಧ ಎಂದು ಸ್ಪಷ್ಟವಾಗಿ ಸಾರಿದ್ದಾರೆ. ಇಂತಹ ಸನ್ನಿವೇಶದಲ್ಲಿ ಪ್ರತಿಪಕ್ಷಗಳಿಂದ ಏನೇ ಪ್ರಚೋದನೆ ಇದ್ದಾಗ್ಯೂ, ನೇಪಾಳದ ಸಂದರ್ಭದಲ್ಲಿ ಭಾರತ ಸರಕಾರ ಸಹೃದಯತೆ ತೋರಿ, ರಚನಾತ್ಮಕ ಧೋರಣೆ ತಳೆಯಬೇಕೆಂದು ಭಾರತದ ಪ್ರಜಾಪ್ರಭುತ್ವ ಶಕ್ತಿಗಳು ಒತ್ತಾಯ ತರಬೇಕಾಗಿದೆ. ಬೆಳವಣಿಗೆಗಳನ್ನು ಕಾಮಾಲೆ ಕಣ್ಣಿನಿಂದ ನೋಡುವುದು ಸರಿಯಲ್ಲ. ಭಾರತ ಸರಕಾರದ ಬೆಂಬಲ ಯಾವತ್ತೂ ಪ್ರಜಾಪ್ರಭುತ್ವವನ್ನು ಬಲಗೊಳಿಸುವ ದಿಶೆಯಲ್ಲಿರಬೇಕು. ಮಾವೋವಾದಿಗಳ ಭಾಗವಹಿಸುವಿಕೆ ಇಲ್ಲದೆ ನೇಪಾಳದಲ್ಲಿ ಪ್ರಜಾಪ್ರಭುತ್ವದ ಬೆಳವಣಿಗೆ ಅಸಾಧ್ಯ ಎನ್ನುವುದನ್ನು ನೆನಪಿನಲ್ಲಿರಿಸಿಕೊಳ್ಳಬೇಕು.

ಸೀಯಾರ್ಕೆ



# ಕ್ಯೂಬಾ : ದಿಗ್ಬಂಧನ ತೆಗೆಯಲು ಒಬಾಮಾಗೆ ಒತ್ತಾಯ



ಕ್ಯೂಬಾದ ಮೇಲೆ ವಿಧಿಸಿರುವ ಆರ್ಥಿಕ ದಿಗ್ಬಂಧನವನ್ನು ಸಂಪೂರ್ಣವಾಗಿ ಹಿಂತೆಗೆದು ಕೊಳ್ಳಬೇಕು ಎಂದು ಲ್ಯಾಟಿನ್ ಅಮೆರಿಕಾದ ದೇಶಗಳು ಒಮ್ಮತದಿಂದ ಅಮೆರಿಕಾದ ಮೇಲೆ ಒತ್ತಡ ತಂದಿವೆ. ಮೂವ್ವತ್ತೈದು ರಾಷ್ಟ್ರಗಳ ಸದಸ್ಯತ್ವ ಹೊಂದಿರುವ ಅಮೆರಿಕಾ ದೇಶಗಳ ಸಂಘಟನೆಯ ಐದನೆಯ ಶೃಂಗಸಭೆಯಲ್ಲಿ ಅಪೂರ್ವವಾದ ಐಕ್ಯತೆಯನ್ನು ಪ್ರದರ್ಶಿಸಿದ ದಕ್ಷಿಣ ಅಮೆರಿಕಾ ದೇಶಗಳು ಅಧ್ಯಕ್ಷ ಬರಾಕ್ ಒಬಾಮಾರಿಗೆ ಅಚ್ಚರಿ ಉಂಟುಮಾಡಿದವು. ಬಲವಂತವಾಗಿ ರಿಯಾಯಿತಿ ಪ್ರಕಟಿಸಬೇಕಾಗಿ ಬಂದ ಒಬಾಮ ಕ್ಯೂಬಾದೊಂದಿಗೆ ಸಂಬಂಧದಲ್ಲಿ ಹೊಸಹೆಜ್ಜೆ ಇರಿಸುವುದಾಗಿ ಆಶ್ವಾಸನೆ ನೀಡಬೇಕಾಯಿತು. ಅಮೆರಿಕಾದಿಂದ ಕ್ಯೂಬಾಗೆ ಹೋಗಿಬರಲು ಹಾಗೂ ಹಣ ಪಾವತಿ ಮಾಡಲು ಮುಕ್ತ ಅವಕಾಶ ಪ್ರಕಟಿಸಿದ್ದಾಗ್ಯೂ ಇದು ಏನೇನೂ ಸಾಲದು, ಕ್ಯೂಬಾದ ನಾಯಕ ಫಿಡೆಲ್ ಕ್ಯಾಸ್ಟ್ರೋ ತಾವೇನು ಅಮೆರಿಕಾದಿಂದ ಭಿಕ್ಷೆ ಬೇಡುತ್ತಿಲ್ಲ, ಅನ್ಯಾಯವಾಗಿ ಹೇರಿರುವ ದಿಗ್ಬಂಧನವನ್ನು ತೊಡೆದುಹಾಕಬೇಕೆಂದು ಇದಕ್ಕೆ ಪ್ರತಿಕ್ರಿಯಿಸಿದ್ದಾರೆ. ಕ್ಯೂಬಾದ ವಿಷಯದಲ್ಲಿ ಹೊಸ ನೀತಿ ಅನುಸರಿಸುವುದಕ್ಕೆ ಅಮೆರಿಕಾಗೆ ಇನ್ನೂ ಹಿಂಜರಿಕೆ ಇರುವುದು ಎದ್ದು ಕಾಣುತ್ತದೆ. ಹಾಗೆ ನೋಡಿದರೆ ಒಬಾಮಾ ಆಡಳಿತಸೂತ್ರ ಹಿಡಿದು ನೂರು ದಿನಗಳ ಮೇಲಾಗಿದ್ದರೂ ಅಮೆರಿಕಾದ ವಿದೇಶೀ ನೀತಿಯ ಕ್ಷೇತ್ರದಲ್ಲಿ ಬದಲಾವಣೆಯ ಸೂಚನೆಗಳೇನೂ ಅಷ್ಟಾಗಿ ಕಾಣುತ್ತಿಲ್ಲ.

ಲ್ಯಾಟಿನ್ ಅಮೆರಿಕಾದಲ್ಲಿ ಬದಲಾವಣೆಯ ಗಾಳಿ ಬೀಸುತ್ತಿರುವ ಹಿನ್ನೆಲೆಯಲ್ಲಿ ಕೆರಿಬಿಯನ್ ರಾಷ್ಟ್ರ ಟ್ರಿನಿಡಾಡ್ ಮತ್ತು ಟೊಬಾಗೊ ದ್ವೀಪದ ರಾಜಧಾನಿ ಪೋರ್ಟ್ ಆಫ್ ಸ್ಪೇನ್‌ನಲ್ಲಿ ಕಳೆದ ಏಪ್ರಿಲ್ ತಿಂಗಳಲ್ಲಿ ಜರುಗಿದ ಐದನೆಯ ಶೃಂಗಸಭೆಯಲ್ಲಿ ಲ್ಯಾಟಿನ್ ಅಮೆರಿಕಾ ದೇಶಗಳು ಅಮೆರಿಕಾದ ಧೋರಣೆಗಳನ್ನು ಬಲವಾಗಿ ವಿರೋಧಿಸಿದುವು. ಇದು ಅಧ್ಯಕ್ಷ ಒಬಾಮಾಗೆ ಈ ಭೂಭಾಗದಲ್ಲಿ ಆದ ಮೊದಲ ಮುಖಭಂಗ. ಏಕೆಂದರೆ ಶೃಂಗಸಭೆಯ ಅಂತ್ಯದಲ್ಲಿ ನೀಡಿದ ಪ್ರಕಟಣೆಗೆ ಲ್ಯಾಟಿನ್ ಅಮೆರಿಕಾದ ದೇಶಗಳು ಸಹಿಹಾಕಲು ನಿರಾಕರಿಸಿದುವು. ಕ್ಯೂಬಾದ ಮೇಲೆ ಆರ್ಥಿಕ ದಿಗ್ಬಂಧನ ಮುಂದುವರಿಯುತ್ತಿರುವುದನ್ನು ವಿರೋಧಿಸಿದುದಲ್ಲದೆ, ಕ್ಯೂಬಾದ ಹಾಜರಿ ಇಲ್ಲದ ಸಭೆ ಅಮೆರಿಕಾ ದೇಶಗಳ ಶೃಂಗಸಭೆಯೇ ಅಲ್ಲ ಎಂಬುದನ್ನು ಸ್ಪಷ್ಟಪಡಿಸಿದುವು. ಇದು ಈ ಸಂಘಟನೆಯ ಇತಿಹಾಸದಲ್ಲಿ ಸಂಭವಿಸಿದ ಮೊದಲ ಘಟನೆ. ೧೯೬೨ರಲ್ಲಿ 'ಕ್ಯೂಬಾದ ಕ್ಷಿಪಣಿ ಬಿಕ್ಕಟ್ಟು' ಎಂದೇ ಇತಿಹಾಸದಲ್ಲಿ ಗುರುತಿಸಲಾಗಿರುವ ಮೂರನೆಯ ಜಾಗತಿಕ ಸಮರದ ಸಂಭವನೀಯ ಸ್ಥಿತಿ ತಲುಪಿದ್ದ ಸಂದರ್ಭದಲ್ಲಿ ಅಮೆರಿಕಾ ಕ್ಯೂಬಾದ ಮೇಲೆ ಆರ್ಥಿಕ ದಿಗ್ಬಂಧನ ಹೇರಿತು. ನಲವತ್ತೇಳು ವರ್ಷಗಳಿಂದ ಇರುವ ಈ ದಿಗ್ಬಂಧನ ಕ್ಯೂಬಾಗೆ ಅಪಾರವಾದ ಕಷ್ಟನಷ್ಟಗಳನ್ನುಂಟು ಮಾಡಿದೆ. ಆದರೂ ಕ್ರಾಂತಿಕಾರಿ ಕ್ಯೂಬಾ ದಿಟ್ಟವಾಗಿ ಅದನ್ನು ಎದುರಿಸಿ ಪ್ರಗತಿ ಸಾಧಿಸಿದೆ. ಅಷ್ಟೇ ಅಲ್ಲ, ಈಚಿನ ವರ್ಷಗಳಲ್ಲಿ ಲ್ಯಾಟಿನ್ ಅಮೆರಿಕಾದ ದೇಶಗಳಲ್ಲಿ ಹೊಸ ಅಲೆ ಬರಲೂ ಕಾರಣಕರ್ತನಾಗಿದೆ. ಈ ದಿಗ್ಬಂಧನವನ್ನು ಅಂತ್ಯಗೊಳಿಸಬೇಕೆಂದು ವಿಶ್ವಸಂಸ್ಥೆಯ ಮಹಾಸಭೆಯು ಹಲವು ವರ್ಷಗಳಿಂದಲೂ ಹೆಚ್ಚು ಕಡಿಮೆ ಒಮ್ಮತದಿಂದ ಒತ್ತಾಯಪಡಿಸುತ್ತ ಬಂದಿದ್ದರೂ ಅಮೆರಿಕಾ ಹಟಮಾರಿತನದಿಂದ ಅದನ್ನು ತಿರಸ್ಕರಿಸಿದೆ. ವಿಶ್ವಸಂಸ್ಥೆಯ ಮಹಾಸಭೆಯ ಸುಮಾರು ಇನ್ನೂರು ಸದಸ್ಯರ ಪೈಕಿ ಈ ವಿಚಾರದಲ್ಲಿ ಅಮೆರಿಕಾಗೆ ಬೆಂಬಲವಾಗಿ ನಿಂತಿರುವ ಏಕೈಕ ರಾಷ್ಟ್ರ ಇಸ್ರೇಲ್. ಭದ್ರತಾಮಂಡಲಿಯಲ್ಲಿ ವೀಟೋ ಹಕ್ಕು ಹೊಂದಿರುವ ಅಮೆರಿಕಾ ಪ್ರಪಂಚದ ಸುಮಾರು ೧೯೮ ರಾಷ್ಟ್ರಗಳ ಅಭಿಮತವನ್ನು ತಿರಸ್ಕರಿಸುತ್ತ ಬಂದಿದೆ. ಅಮೆರಿಕಾದ ಹಲವು ಸೆನೆಟರುಗಳು ಕ್ಯೂಬಾದ ಮೇಲೆ ದಿಗ್ಬಂಧನವನ್ನು ತೊಡೆದು ಹಾಕಬೇಕೆಂದು ಒತ್ತಾಯಪಡಿಸುತ್ತ ಬಂದಿದ್ದರೂ ಅಮೆರಿಕಾ ಆಡಳಿತ ನಿರಾಕರಿಸುತ್ತ ಬಂದಿದೆ. ಆರ್ಥಿಕ ದಿಗ್ಬಂಧನದಿಂದ ತೊಂದರೆಯಾಗುವುದು ಜನಸಾಮಾನ್ಯರಿಗೆ. ಮಾನವೀಯ ದೃಷ್ಟಿಯಿಂದ ಇದು ಅತ್ಯಂತ ಕ್ರೂರವಾದ ಕ್ರಮ. ಅಮೆರಿಕಾ ಇರಾಕಿನ ಮೇಲೆ ವಿಧಿಸಿದ ಆರ್ಥಿಕ ದಿಗ್ಬಂಧನದಿಂದಾಗಿ ಉಂಟಾದ ದುಷ್ಪರಿಣಾಮಗಳು ಎಲ್ಲರಿಗೂ ತಿಳಿದಿರುವ ವಿಷಯ. ಸಾಕಷ್ಟು ಪೋಷಕ ಆಹಾರಗಳಿಲ್ಲದೆ, ಔಷಧಗಳಿಲ್ಲದೆ ಸಾವಿರಗಟ್ಟಲೆ ಮಕ್ಕಳು ಅಸುನೀಗಿದ್ದು ಈಗ ಇತಿಹಾಸ. ಕ್ಯೂಬಾಗೆ ಅಂದಿನ ಸೋವಿಯತ್ ಒಕ್ಕೂಟ ಬೆಂಬಲವಾಗಿ ನಿಂತಿದ್ದರಿಂದಾಗಿ ಪರಿಣಾಮ ಅಷ್ಟು ಕಠಿಣವಾಗಲಿಲ್ಲ. ಆರ್ಥಿಕ ದಿಗ್ಬಂಧನ ಇಲ್ಲದೇ ಹೋಗಿದ್ದಲ್ಲಿ ಕ್ಯೂಬಾದ ಪ್ರಗತಿ ನೂರು ಪಟ್ಟು ಅಧಿಕವಾಗಿರುತ್ತಿತ್ತು. ಕ್ಯೂಬಾ ವಿವಿಧ ಕ್ಷೇತ್ರಗಳಲ್ಲಿ, ಮುಖ್ಯವಾಗಿ ಆರೋಗ್ಯ ಮತ್ತು ಶಿಕ್ಷಣ ಕ್ಷೇತ್ರದಲ್ಲಿ, ಸಾಧಿಸಿರುವ ಪ್ರಗತಿ ಅದಕ್ಕೆ ಉದಾಹರಣೆ. ಅಮೆರಿಕನ್ನರೇ ಕ್ಯೂಬಾದ ವೈದ್ಯಕೀಯ ಸೇವೆಗೆ ಮೆಚ್ಚುಗೆ ಸೂಚಿಸಿದ್ದಾರೆ. ಲ್ಯಾಟಿನ್ ಅಮೆರಿಕಾದ ದೇಶಗಳ ಒತ್ತಾಯಕ್ಕೆ ಬೆಲೆಕೊಟ್ಟು ಮುಂದಿನ ದಿನಗಳಲ್ಲಿ ಅಧ್ಯಕ್ಷ ಒಬಾಮಾ ಕ್ಯೂಬಾದ ಮೇಲಿನ ಆರ್ಥಿಕ ದಿಗ್ಬಂಧನವನ್ನು ತೊಡೆದುಹಾಕುವರೆಂದು ನಿರೀಕ್ಷಿಸೋಣ.

ಸೀಯಾರ್ಕೆ
'ಚೌಬೀನ', ೪೮೪, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

## ಪ್ರತಿಫಲ



ಕೆಟ್ಟ ಕವನಗಳ ಜೊತೆ
ಒಳ್ಳೆಯ ಕವನಗಳಿದ್ದರೆ,
ಇವುಗಳ ಬೆಳಕು
ಅವುಗಳ ಮೇಲೆ ಬಿದ್ದು,
ತುಸು ಪ್ರತಿಫಲಿಸಬಹುದು !

ಸಿ.ಪಿ.ಕೆ.
ಮೈಸೂರು

ಏನು ಹಿರಿಯರೊ ಏನೊ? ಅವರ ಜಾಯಮಾನವೇ ಒಂಥರಾ. ತಲೆತುಂಬ ಓಬಿರಾಯನ ಕಾಲದ ಹಿಂಡು ವಿಚಾರಗಳು. ಕೂಪಮಂಡೂಕನ ವರ್ತನೆ. ಅವರು ಹೇಳಿದ್ದೆ ಮಾತು, ಆಡಿದ್ದೆ ಆಟ. ಯುವಜನತೆಯ ಬಗ್ಗೆ ದಿವ್ಯ ನಿರ್ಲಕ್ಷ್ಯ. ಪ್ರಾಯದವರು ಅವರ ಹೆಜ್ಜೆಯಲ್ಲೆ ಹೆಜ್ಜೆ ಹಾಕಬೇಕೆಂಬ ತೀರ ಮೊಂಡುತನ. ಕಾಲಕ್ಕೆ ಅನುಗುಣವಾಗಿ ಹೊಂದಾಣಿಕೆಯಾಗಲು ಅವರ ಚಿತ್ತಕ್ಕೆ ಇನ್ನು ಹೊಳೆದಿಲ್ಲ. ಇದು ಪ್ರಾಯದವರು ಹಿರಿಯರ ಬಗ್ಗೆ ತಳೆದ ಧೋರಣೆ.

ಇನ್ನು ಯುವಜನತೆಯ ಕಥೆ ಇನ್ನೊಂದು ಥರ. ದುಡ್ಡಿನ ಬೆನ್ನೇರಿ ಸದಾ ಕುದುರೆ ಓಟ. ದಿಢೀರನೆ ಧನಿಕನಾಗುವ ಹುಚ್ಚು ಕಲ್ಪನೆಗಳು. ತಮಗೆ ಬಯಸಿದ್ದನ್ನು ಮಾಡಿಯೇ ಸಿದ್ಧ ಎಂಬ ಹಠ. ಗುರು-ಹಿರಿಯರ ಬಗ್ಗೆ ಗೌರವವಿಲ್ಲ. ವಿಪರೀತ ಫಾರಿನ್ ಕಲ್ಚರ್ ಗೀಳು. ಹೀಗೆ ಯುವಕರ ಬಗ್ಗೆ ಹಿರಿಯರ ದೂರು. ಬಹುಶಃ ಪಾಲಕರಿಗೂ ಪ್ರಾಯದವರಿಗೂ ನಡುವಣ ಬಿಗ್ ಜನರೇಶನ್ ಗ್ಯಾಪ್ ಇಷ್ಟಕ್ಕೆಲ್ಲ ಕಾರಣ. ಇಂಥಾದ್ದೊಂದು ಮಾದರಿ ಇಜ್ಜೋಡಿ ತಂದೆ-ಮಗನ ನಡುವಣ ಹಗ್ಗ ಜಗ್ಗಾಟದ ಪಂದ್ಯದ ಕೊನೆಯಲ್ಲಿ ಗೆದ್ದವರಾರು ?

''ಹೇಳಿದ್ದೇ ಹೇಳೋ ಕಿಸಬಾಯಿದಾಸನ ಥರ ಅದೇ ರಾಗ ಎಳೆದು ನನ್ನ ಜೀವ ಅರಿಬೇಡ'' ಅಂತ ತಂದೆ ವಿಜಯಾನಂದನಿಂದ ಸಹಸ್ರನಾಮ ಮಾಡಿಸಿಕೊಂಡಿದ್ದು ಅದೆಷ್ಟು ಬಾರಿಯೋ! ಆದರೂ ಮಳೆ ಬಿಟ್ಟರೂ ಬಿಡದ ಮರದ ಹನಿಯಂತೆ ಬಿಡಬೇಕಲ್ಲ ವಿವೇಕನ ಬಿಜಿನೆಸ್ ಗೀಳು. ಪ್ರಯೋಜನ ಇರದಿದ್ದರೂ ತಾನು ಎಣಿಸಿಕೊಂಡಿದ್ದು ಅಪ್ಪನ ಬಾಯಲ್ಲಿ ಬರಲಿ ಅಂತ ಹರಕೆ ಹೊತ್ತು ವಿಷಯ ಮಂಡನೆಗೆ ಮುಂದಾದ.

''ಅಪ್ಪಾ ಕೆಲ್ಸಾ ಬೊಗಸಿ ಇಲ್ದ ಏಸು ದಿನಾ ಅಂತ ನಾ ಅಲೆಮಾರಿ ತರ ಅಲೆದಾಡ್ತಾ ಇರ್ಲಿ? ತೀರಾ ಬ್ಯಾಸರಪಾ. ಅಳದು-ಸುರುದು ಕಡೀಕ ಒಂದ್ ನಿರ್ಧಾರಕ್ಕೆ ಬಂದೀನಿ'' ವಿವೇಕ ಮೆತ್ತಗೆ ಉಸುರಿದ.

''ಈ ಪಾಟಿ ಪೀಠಿಕೆ ಯಾಕಪಾ ? ನೆಟ್ಗೆ ಅದೇನ್ ಸಂಗ್ತಿ ಹೇಳ್ಬಿಡು'' ವಿಜಯಾನಂದನ ನಿಷ್ಠುರ ನುಡಿ. ವಿವೇಕ ಮುಂದುವರೆದ –

''ಈಗಾಗ್ಲೆ ನಾನೊಂದು ಬಿಜಿನೆಸ್ ಪ್ರೊಜೆಕ್ಟ್‌ಗೆ ನೀಲ ನಕ್ಷೆ ಹಾಕಿ ಅದ್ಕೆಲ್ಲ ತಯಾರಿ ಮಾಡ್ಕೊಂಡೀನಿ. ಹಣ ಹೊಂದ್ಸೋದೀಟು ಬಾಕಿ. ಸಾಸ್ವೆಯಾಟು ಶ್ರಮ ಹಾಕಿದ್ರ ಸಾಕು. ಹೊಳೆ ಹರಿದ್ಹಾಂಗ ಹಣ ಹರ್ದು ಬರ್ತೇತಿ. ನೀ ಹೇಗಾರ ಮಾಡಿ ಬಂಡ್ವಾಳ ಸಜ್ಜು ಮಾಡಿದ್ರ ಮುಂದಿನ ಕೆಲ್ಸ ಸಸಾರ.'' ಈ ಸಾರೆ ತಂದೆಯಿಂದ ಹಿತವಾದ ಪ್ರತಿಕ್ರಿಯೆ ಬರಬಹುದೆಂಬ ನಿರೀಕ್ಷೆ ವಿವೇಕನದು.

''ನಿನ್ಗೆ ತಿಳಿವಳಿಕೆ ಇಲ್ಲೋಡು. ನಂಗಂತೂ ಹೇಳ್ಹೇಳಿ ಸಾಕಾಗೇದ. ನಮ್ಗೆ ಏನ್ ಕಮ್ಮಿ ಆಗೇದ ? ಏಳು ತಲೆಮಾರಿನ ತನಕ ಕುಂತು ತಿಂದ್ರೂ ತೀರದಾಟು ಸಂಪತ್ತು. ಹೋಗಿ ಹೋಗಿ ನೀನ್ಯಾಕ ಬೇತಾಳನಂತೆ ಬಿಜಿನೆಸ್‌ಗೆ ಬೆನ್ನುಬಿದ್ದೀಯಾ ? ಅದ್ರಾಗ ಏನೈತಿ ಮಣ್ಣಾಂಗಟ್ಟಿ? ಅದು ನಮ್ ಲೇವಲ್‌ಗೆ ಲಾಯಿಕ್ ಅಲ್ಲ ತಗಿ. ಆರೇದ ಧಂಥೆ ಮಾಡಾಕ ಹೋಗಿ ಏನಾರ ಅಧ್ವಾನ ಆತಂದ್ರ ಏನ್‌ಗತಿ ? ತ್ರಿಶಂಕು ಸ್ವರ್ಗ !

''ಅದಕೆ ನಾ ಹೇಳಿದಾಟು ಮಾಡು. ಮೊದಲ ನಿನ್ಗೆ ತಗಲಿಕೊಂಡಿರೋ ಬಿಜಿನೆಸ್ ಭೂತನ್ನ ಕಿತ್ತೆಸೆ. ಕಮ್ಮಗ ಬೇಸಾಯ ಮಾಡಿಕೊಂಡು [illegible] ಊರಾಗ ಇರಾಕ ಏನ್ನೇನ್ ಧಾಡಿ ? ಅಷ್ಟಕ್ಕೂ ಮೀರಿ ನೀ ಮತ್ತದೇ ಬಿಜಿನೆಸ್ ಉಸಿರೆತ್ತಿದ್ರ... ನಿನ್ಗೆ ಪುಡಿಗಾಸೂ ಸಿಗೋದಿಲ್ಲ ತಿಳ್ಕೊ.'' ವಿಜಯಾನಂದನ ಮಾತು ಕಡ್ಡಿ ತುಂಡುಮಾಡಿದ ಹಾಗೆ. ಒಮ್ಮೆಲೇ ವಿವೇಕನ ಆಸೆಗೆ ತಣ್ಣೀರು ಎರಚಿದಂತಾಯಿತು. ಎಣಿಸಿದ್ದು ಒಂದಾದರೆ ನಡೆಯೋದು ಬೇರೇನೆ. ಬದುಕಿನ ನಿಯಮ. ವಿವೇಕ ತಂದೆ ಮುಂದೆ ಊದಿದ್ದೆಲ್ಲ ಕೋಣನ ಮುಂದೆ ಕಿನ್ನರಿ ಬಾರಿಸಿದಂತಾಯಿತು.

ವಿವೇಕ ಅಪ್ಪನ ಮಾತಿನಿಂದ ಅಪ್‌ಸೆಟ್ ಆದ. ಇಲ್ಲ, ಅಪ್ಪ ಹೇಳಿದ್ದಕ್ಕೆಲ್ಲ ತಲೆ ಲೆಫ್ಟ್ ರೈಟ್ ಆಡಿಸೋ ಕಾಲ ಮುಗೀತು. ನನ್ನ ಅದೃಷ್ಟ ನಾನೇ ಬರೆಯಬೇಕು. ಬೇಸಾಯ ನೆಚ್ಚಿಕೊಂಡು ಉದ್ಧಾರಾದ ರೈತರು ಬೆರಳೆಣಿಕೆಯಷ್ಟು. ಹಿಂಡು ಸಮಸ್ಯೆಗಳ ಚಕ್ರವ್ಯೂಹದಲ್ಲಿ ಸಿಲುಕಿ ಹೊರಬರುವ ಹಾದಿ ಕಾಣದ ಅಸಹಾಯಕರು. ರೈತರಿಗೆ ಸರಕಾರದಿಂದ ಏನ್ ಸಿಕ್ಕಿದೆ ? ಬರೀ ಮಣ್ಣು! ಸಾಲದ ಬಾಧೆ ತಾಳಲಾರದೆ ರೈತರ ಆತ್ಮಹತ್ಯೆ ನಿಂತಿಲ್ಲ. ಯಾರಿಗೆ ಬೇಕು ಇಂಥ ನಾಯಿಬಾಳು ? ಯಾವ ಪುರುಸಾರ್ಥಕ್ಕೆ ಬೇಕು ?

ಈ ಹಾಳು ಕೊಂಪೆಯಲ್ಲಿ ಬಂಧಿಯಾಗಿ ಜೀವನಪೂರ್ತಿ ಅರ್ಥಹೀನ ಬದುಕು ಸವೆಸುವ ಉದಾರ ಮನಸ್ಸು ನನಗಿಲ್ಲ. ನನಗೆ ಬೇಕಾಗಿರೋದು ಸ್ವಚ್ಛಂದದ ಹೊರತು ಬಂಧನವಲ್ಲ. ಬಾನಾಡಿ ಬದುಕು. ಸ್ವಂತ ಯತ್ನದಿಂದ ಬಯಸಿದ್ದನ್ನು ಸಾಧಿಸಿ, ಜೀವನ ಸಾಫಲ್ಯತೆ ಕಾಣುವ ಅಭಿಲಾಷೆ. ಹೀಗೆ ನಡೆದಿತ್ತು ವಿವೇಕನ ಮನದಲ್ಲಿ ಯಾವು ಯಾವುದೋ ವಿಚಾರಗಳ ಭರತನಾಟ್ಯ. ತಂದೆಯ ಮಾತಿಗೆ ಒರಟಾಗಿಯೆ ಪ್ರತಿಕ್ರಿಯಿಸಿದ.

''ಸಾಕು ನಿಲ್ಲಿಸ್ರಿ ಕಾಗಕ್ಕ-ಗುಬ್ಬಕ್ಕನ ಕಥೆ ಪೋಣಿಸೋದನ್. ಬಾಯಿಬಿಟ್ರ ಮತ್ತದೇ ಹಳಸಿದ ಮಾತು. ಪುಸಲಾಯಿಸುವಿಕೆ, ಆಮಿಷ, ಬೆದರಿಕೆಗಳಿಗೆ ಸೊಪ್ಪು ಹಾಕೋ ಜಾಯಮಾನ ನಂದಲ್ಲ. ಸದಾ ಸಮಯ ಒಂದ್ ತರ ಇರೋದಿಲ್ಲ. ಒಮ್ಮಿಲ್ಲ ಒಮ್ಮೆಯಾದ್ರು ಅದೃಷ್ಟ ನನ್ ಹುಡಿಕ್ಕೊಂಡು ಬಂದೇ ಬರ್ತದ. ನಂಜೊತೆ ಬೆಸೆದುಕೊಂಡಿರೊ ಬಿಜಿನೆಸ್ಸೇ ನನ್ನುಸಿರು.



ಪ್ರೊ॥ ರುದ್ರಯ್ಯ ವಿ. ಗದಗ

''ಒಂದ್ ಮಾತು ಹೇಳ್ತೀನಿ ಕಿವಿ ಕಿಸಿದು ಕೇಳಿ. ಇವತ್ತಿಂದ ಬರೊಬ್ಬರಿ ಆರು ತಿಂಗ್ಳು ಗಡುವಿನಾಗ, ಗದಗ ಶಹರದ ಹೃದಯ ಭಾಗದಲ್ಲಿ ಒಂದ್ ಹೊಚ್ಚ ಹೊಸ ಉದ್ಯಮ ಸುರುವು ಮಾಡಿಯೇ ಸಿದ್ಧ! ಹಾಗೇನರ ಕೊಟ್ಟ ಭಾಷೆಗೆ ತಪ್ಪಿದ್ರೆ ನಾನು ಮುಂದೆಂದೂ ವಾಡೆಯ ಹೊಸ್ತಿಲು ತುಳಿಯೋದಿಲ್ಲ! ಈ ನಿರ್ಧಾರ ಅಚಲ.'' ವಿಜಯಾನಂದನ ಹುಬ್ಬು ಮೇಲೇರಿದವು. ವಿವೇಕನದು ಆತುರದ ನಿರ್ಧಾರ ವೆನಿಸಿತು. ತಂದೆ ಏರಿಗೆ ಎಳೆದರೆ ಮಗ ಕೆರೆಗೆ ಎಳೆದ.

''ನೀನ್ಯಾವ ಸೀಮೆ ಗಂಡ್ಸು? ಒಳ್ಳೆ ಹುಮ್ಮನಾಂಗ ದುಡುಕಬ್ಯಾಡ. ಬರೀ ಮಾತ್ನಿಂದ ಮಹಲು ಕಟ್ಟಾಕ ಆಗುಲ್ಲ. ಮಾಡೋದು ಹೇಳಿದಷ್ಟು ಸಸಾರಲ್ಲ. ಬಾವಿಗೆ ಹಾರಿದ ಮ್ಯಾಗ ತಳ ಗೊತ್ತಾಗೋದು. ಸಂತೇಕ ಕಾಸಿದ್ರ ಕೈಲಾಸ ಅನ್ನೋದಿದನ್ ಮರಿಬ್ಯಾಡ್. ನಿನ್ ನಿರ್ಧಾರನ್ ಸಾಧ್ಯವಾದ್ರ ಬದಲಾಯಿಸ್ಕೊ.''

''ನೆವರ್'' ತಟ್ಟನೆ ತಿರುಗೇಟು ನೀಡಿದ ವಿವೇಕ.

''ಸರಿ ಬಿಡು. ನೀ ಅದೇನ ಕಿಸಿತಿಯೊ ಕಿಸಿ ಹೋಗು. ನಾನು ಒಂದ್ ಕೈ ನೋಡೇ ಬಿಡ್ತೀನಿ'' ವಿಜಯಾನಂದ ಮಗನ ಪಣಕ್ಕೆ ಓಕೆ ಅಂದ. ಕೋಪ ಇಳಿದ ಬಳಿಕ ತಾನು ಮಗನೊಂದಿಗೆ ಅಷ್ಟು ಒರಟಾಗಿ ವರ್ತಿಸಬಾರದಿತ್ತು ಅಂತ ಮಮ್ಮಲ ಮರುಗಿದ.

* * *

ವಿಜಯಾನಂದ ದೇಸಾಯಿಯ ಹೆಸರು ಯಾರಿಗೆ ತಾನೆ ಗೊತ್ತಿಲ್ಲ? ತಾನಿದ್ದ ಊರಿಗಷ್ಟೆ ಅಲ್ಲ, ಸುತ್ತಮುತ್ತ ನೂರಾರು ಹಳ್ಳಿಗಳಲ್ಲಿ ಸಾಹುಕಾರರ ಹೆಸರು ಜಗಜ್ಜಾಹೀರು. ಭಾರಿ ಜಮೀನುದಾರಿ. ಕುಬೇರನ ವಂಶಸ್ಥರು. ದೇಸಾಯಿ ಮನೆತನದ ಭವ್ಯವಾಡೆ. ಚಾಕರಿಗೆ ಕೈಗೊಂದು ಕಾಲಿಗೊಂದು ಸೇವಕರು. ಕುಲಕಸುಬು ಬೇಸಾಯ. ಹಿಂಡು ಹಿಂಡುವ ಹಸುಗಳು. ವಿಜಯಾನಂದನ ನಾಲ್ಕು ಮಕ್ಕಳಲ್ಲಿ ಒಬ್ಬನೇ ಮಗ ವಿವೇಕಾನಂದ. ವಿವೇಕ ನಿಕ್‌ನೇಮ್. ಮಿಕ್ಕವರು ಹೆಣ್ಣುಮಕ್ಕಳು.

ವಿವೇಕ ಇಪ್ಪತ್ತೈದರ ಪೋರ. ಚಿಗುರು ಮೀಸೆ ಸೊಗಸುಗಾರ. ಎಲಿಜಿಬಲ್ ಬ್ಯಾಚುಲರ್, ಒಳ್ಳೇ ಮಾತುಗಾರ. ಹೊಸ ಹೊಸ ಫ್ಯಾಷನ್ ವಸ್ತುಗಳ ಖರೀದಿ ಕ್ರೇಜ್. ಹಟಮಾರಿತನ, ಹುಂಬ ಧೈರ್ಯ ಅವನ ಹುಟ್ಟುಗುಣ. ದುಷ್ಟ ವ್ಯಸನಗಳಿಗೆ ದಾಸನಾಗದ ಅಪರಂಜಿಯಂಥ ಹುಡುಗ. ಬಿಬಿಎಮ್ ಓದಿದ ನಿರುದ್ಯೋಗಿ. ತೀಕ್ಷ್ಣ ಬುದ್ಧಿಯ ಬಿಜಿನೆಸ್ ಮೆದುಳು. ತನ್ನ ಸಾಮರ್ಥ್ಯದ ಅರಿವುಳ್ಳವ.

ಡಿಗ್ರಿ ಮುಗಿಸಿರುವ ವಿವೇಕನ ಮನಸ್ಸು ಹಿಂದು ಬಿಜಿನೆಸ್ ವಿಚಾರಣೆಗಳಿಗೆ ಧರ್ಮಛತ್ರ. ಸ್ವಯಂ ಪ್ರತಿಭೆಯಿಂದ ತಾನೊಬ್ಬ ಶ್ರೇಷ್ಠ ಉದ್ಯಮಿಯಾಗಿ ಬೆಳೆದು ಸಮಾಜದ ಮಾದರಿ ವ್ಯಕ್ತಿ ಎನಿಸಿಕೊಳ್ಳುವ ಬಯಕೆ. ಆದರೆ ಬಯಸಿದ್ದೆಲ್ಲ ದಕ್ಕೋದು ಅಪರೂಪ. ತನ್ನ ಒಂದೇ ಒಂದು ಯೋಜನೆಯನ್ನೂ ಕೃತಿಗೆ ಇಳಿಸುವಲ್ಲಿ ಸೋತಿದ್ದ. ಹಣದ ಮುಗ್ಗಟ್ಟೇ ತೊಡಕು. ಹಾಗೆ ನೋಡಿದರೆ ತಂದೆಯ ತಿಜೋರಿಯಲ್ಲಿ ಕೊಳೆತುಹೋಗುವಷ್ಟು ಬಿದ್ದಿವೆ ರಾಶಿ ರಾಶಿ ನೋಟಿನ ಕಂತೆ. ಎಷ್ಟಿದ್ದರೇ ಏನು ಬಂತು ? ನೈವೇದ್ಯಕ್ಕೆ ಸಲ್ಲದ ನಾಯಿಯ ಹಾಲು !

ವಿಜಯಾನಂದನಲ್ಲಿ ಎದ್ದು ಕಾಣುವ ನ್ಯೂನತೆ ಎಂದರೆ ದುಡ್ಡಿನ ವ್ಯಾಮೋಹ. ಉಳಿಸಿ, ಇರಿಸುವುದರಲ್ಲೇ ಸಂತೋಷ ಕಾಣುವವರ ಬಳಗಕ್ಕೆ ಸೇರಿದವ. ಆತನಿಂದ ಹಣ ಕಸಿಯೋದು ಹುಟ್ಟಿಸಿದ ಬ್ರಹ್ಮನಿಗೂ ಕಷ್ಟ. ತಂದೆ-ಮಗನ ನಡುವೆ ಹಣಕಾಸಿನ ಬಗ್ಗೆ ನಡೆದ ಗುಡುಗು ಸಿಡಿಲುಗಳ ಚಕಮಕಿ ನಡೆದದ್ದು ಅದೆಷ್ಟು ಬಾರಿಯೋ. ಆದರೂ ವಿಜಯಾನಂದನ ಪುತ್ರವಾತ್ಸಲ್ಯ ಪ್ರಶ್ನಾತೀತ. ಇರೋ ಒಬ್ಬ ಮಗ ಹಾಳು ಬಿಜಿನೆಸ್ ಬೆನ್ನೇರಿ ಹೋಗಿ ಎಲ್ಲಿ ತನ್ನ ಲೈಫ್ ಅನ್ನು ಮೂರಾಬಟ್ಟೆ ಮಾಡಿಕೊಂಡಾನೆಂಬ ಭ್ರಮೆ ಹೊರತು ಯಾವುದೇ ದುರುದ್ದೇಶ ಕಾಣುತ್ತಿಲ್ಲ. ಅವನು ಸದಾ ತನ್ನ ಪ್ರಭಾವಳಿಯಲ್ಲೇ ಬೆಳೆಯಬೇಕೆಂಬ ಹಂಬಲ. ತನ್ನ ನೊಗ ಹೊರಲು ಮಗನನ್ನು ಬಿಟ್ಟರೆ ಇನ್ನಾರು ?

* * *

ಯಾವೊತ್ತು ವಿವೇಕ ತಂದೆ ಜೊತೆಗೆ ಜಟಾಪಟಿ ನಡೆದು, ಆವೇಶದಲ್ಲಿ ಬಾಜಿ ಹಾಕಿದನೋ ಆವತ್ತಿನಿಂದ ಪ್ರೊಜೆಕ್ಟ್‌ಗೆ ಚಾಲನೆ ಕೊಟ್ಟ. ಹೀಗೆ ಒಂದು ತಿಂಗಳಾದ ಬಳಿಕ ಇದ್ದಕ್ಕಿದ್ದಂತೆ ಪ್ರೊಜೆಕ್ಟ್ ನೆನೆಗುದಿಗೆ ಬಿದ್ದಿತು. ಅದೇನೊ ಪ್ರಾಬ್ಲಮ್ ಸ್ಟಾರ್ಟ್ ಆಗಿರಬೇಕು. ಅಂದಿನಿಂದ ವಿವೇಕ ಒಂಥರಾ ಆಗಿಬಿಟ್ಟ. ಮುಖದ ಮೇಲೆ ಚಿಮ್ಮುತ್ತಿದ್ದ ಯೌವನದ ಕಳೆ ಉತ್ಸಾಹ ಕಳೆದುಹೋದವು. ಊಟ-ತಿಂಡಿಯ ಪರಿವೇ ಇಲ್ಲ. ಜನರೊಟ್ಟಿಗೆ ಮುಖ ಕೊಟ್ಟು ಮಾತ್ರಿಲ್ಲ ಕತೆಯಿಲ್ಲ. ಸದಾಶಿವನಿಗೆ ಅದೇ ಧ್ಯಾನ ಅನ್ನೊ ಹಾಗೆ ಮೂರು ಹೊತ್ತು ಬಿಜಿನೆಸ್ ಜಪ. ದಿನಾ ಪೇಚುಮೋರೆ ಹಾಕಿಕೊಂಡು ಹೊತ್ತಿಲ್ಲದ ಹೊತ್ತಿನಲ್ಲಿ ಬರೋದು, ಹೋಗೋದು ಎತ್ತ ? ಏಕೆ ? ಏನು ? ಚಿದಂಬರ ರಹಸ್ಯ. ಅದನ್ನು ಅರಿಯುವ ಗೋಜಿಗೆ ಯಾರೂ ಹೋಗಲಿಲ್ಲ.

ಸಮಯ ಎಷ್ಟು ಬೇಗ ಕಳೆದುಹೋಗುತ್ತದೆ. ಆಗಲೇ ವಾಯಿದೆಯ ನಾಲ್ಕು ತಿಂಗಳು ಜಾರಿಹೋದರೂ ವಿವೇಕನ ಪ್ರೊಜೆಕ್ಟ್ ಇನ್ನೂ ನೆಲ ಬಿಟ್ಟು ಎದ್ದಿಲ್ಲ. ಮಗನ ಪ್ರೊಜೆಕ್ಟ್ ಕೃಷ್ಣಾರ್ಪಣವಾಗಲಿ ಎಂದು ವಿಜಯಾನಂದ ಗುಟ್ಟಾಗಿ ದೇವರಲ್ಲಿ ಹರಕೆ ಹಾಕಿದ್ದು, ಇನ್ನೇನು ಡೆಡ್‌ಲೈನ್‌ಗೆ ತಿಂಗಳೊಪ್ಪತ್ತು ಬಾಕಿ ಉಂಟು ಅನ್ನೋವಾಗ ವಿವೇಕ ನಾಪತ್ತೆ! ಮರ್ಯಾದೆ ಕಾಪಾಡಿಕೊಳ್ಳಲು ದೇಶಾವರಿ ಹೋದನಾ ಎಂತ ಕತೆ ? ವಿಜಯಾನಂದ ಒಳಗೊಳಗೆ ಖುಷಿಯಿಂದ ಬೀಗಿದ.

ಬಿಜಿನೆಸ್ ಮುಂಡಾಮೋಚಿತು. ಅಂಡ ಸುಟ್ಟಕೊಂಡ ಬೆಕ್ಕಿನಂತಾಗಿ, ವಿಧಿಯಿಲ್ಲದೆ ಹಳೆ ಗಂಡನ ಪಾದವೇ ಗತಿ ಅಂತ ಇಂದಿಲ್ಲ ನಾಳೆ ವಿವೇಕ ಮನೆಗೆ ವಾಪಸ್ಸಾಗೋದು ಶತಸ್ಸಿದ್ಧ, ಅಂತ ವಿಜಯಾನಂದ ಮನದಲ್ಲಿ ಮಂಡಿಗೆ ಮೆಲುಕು ಹಾಕುತ್ತಿದ್ದ. ಆದರೆ ಜೀವನ ತುಂಬಾ ವಿಚಿತ್ರ. ತಾನೊಂದು ಬಗೆದರೆ ದೈವವೊಂದು ಬಗೆಯಿತು ಅನ್ನೊ ಕನ್ನಡ ಗಾದೆ ಅವನನ್ನು ಇಣುಕಿ, ಅಣಕಿಸಿತು.

* * *

ಅಂದು ರಾತ್ರಿ ೧೦:೩೦ರ ಸಮಯ. ಎಂದಿನಂತೆ ವಿಜಯಾನಂದ ಊಟವಾದ ಬಳಿಕ ಜಗಲಿ ಮೇಲೆ ವಿರಮಿಸಿ ಚಂಚಿ ಬಿಚ್ಚಿದ್ದ. ತಿಂಗಳಿಂದ ಮಾಯವಾಗಿದ್ದ ವಿವೇಕ ದಿಢೀರನೆ ಪ್ರತ್ಯಕ್ಷ! ತಂದೆ ಪಕ್ಕ ಕುಂತ. ಅದೂ ಇದೂ ಮಾತಾಡಿದ ನಂತರ ಹೇಳಬೇಕಿರುವ ವಿಷಯ ನೆನಪಾಗಿ ಮೆಲ್ಲಗೆ ಬಾಯಿಬಿಟ್ಟ. ''ಅಪ್ಪಾ ನಾಳೆ ನಾವೆಲ್ರೂ ಗದುಗಿನ ಒಂದ್ ಗ್ರ್ಯಾಂಡ್ ಫಂಕ್ಷನ್‌ಗೆ ಹೋಗ್ತೀವಿ. ವಲ್ಲೆ ಅನ್ನಾಕ ನೋ ಛಾನ್ಸ್. ಗದುಗಿನ ಗಣ್ಯರೆಲ್ಲಾ ಬರ್ತಾರೆ'' ಮಾತು ಒಗಟಿನಂತಿತ್ತು.

## ಅಶ್ವತರ್ಪಣ

೧

ಗಾಢಾಂಧಕಾರದಲಿ ಮೂಡಿದನು ರವಿ
ರಸ್ತೆಯಂಚಿನ ಹುಲ್ಲು ಬೆಂಕಿಯ ಪಕ್ಕ
ಬೆಚ್ಚಗೆ ಕುಳಿತಿದ್ದ ಜಟಕಾ ಸಾಬಿ
ವೇಗ ಹೆಚ್ಚಿಸಿಕೊಂಡ ಕಾರಿಗೆ
ಅಡ್ಡ ಬರಲಿಲ್ಲವಾತ, ಆದರೂ ಉದುರಿತ್ತು
ಮರದ ಮೇಲಿನ ಹಣ್ಣಾಗದ ಕಾಯಿ

೨

ಬೆಳಗಾಯಿತೆಂದು ಸೆರಗು ಸೊಂಟಕ್ಕೆ
ಬಿಗಿದಳು, ಮನೆಗೆಲಸ ಮಾಡಲಿಕ್ಕಲ್ಲ!
ಗಂಡನೆಂಬ ಪ್ರಾಣಿಯೊಂದಿಗೆ ಕಲಹಕ್ಕೆ
ಸಂಜೆ ಕಳೆದು ರಾತ್ರಿಯಾಯಿತು
ಪಾಪ ! ತಾಳ್ಮೆಗೆಟ್ಟಿಲ್ಲ ಈ ಪ್ರಾಣಿ.

೩

ಆತ ನಿದ್ದೆ ಹೋದರೂ ಉದುರುತ್ತಿತ್ತು
ಹಳೆ ಮನೆಯ ಮಾಳಿಗೆಯ ಮಣ್ಣು
ತಿರುಗಿ ನಡೆದೇ ಬಿಟ್ಟರು ಮಣ್ಣುಕೊಟ್ಟವರು
ಅನಾಥ ಕುದುರೆ ನೀನ್ ಮಸಣದಲಿ
ಯಾರು ಅತ್ತರೇನ್, ಅಳದಿದ್ದರೇನ್
ನಡೆದವ ನಡೆದೇ ಬಿಟ್ಟ
ತಿರುಗಿ ನೋಡದೇ ನಿನ್ನ,
ಅನಂತದೆಡೆಗೆ.

೪

ಅವಳಿನ್ನೂ ದಾರಿ ಕಾಯುತ್ತಿದ್ದಾಳೆ
ಅವನ ಜನ್ಮ ಜಾಲಾಡಲು !

ಕೇಶವ [illegible] ಹುನ್ನೂರು
ಅಗಸ್ತ್ಯ ಕುಟೀರ, ಹುನ್ನೂರು ೫೮೭೧೧೯, ಬಾಗಲಕೋಟೆ ಜಿಲ್ಲೆ

''ಇದ್ದಿದ್ದಂಗ ಅದೇನೋ ಫಂಕ್ಷನ್ ?'' ವಿವರಣೆ ಕೇಳಿದ ಅಪ್ಪ.

''ಸಸ್ಪೆನ್ಸ್, ಬೇಗ ರೆಡಿಯಾಗಿರ್ರೀ. ಹತ್ತು ಹೊಡಿಯೋದ್ರಾಗ ಅಲ್ಲಿ ಇರ್ಬೇಕು ನೋಡು'' ತಾಕೀತು ಮಾಡಿ ಮೇಲೆದ್ದ ಅಂದು ರಾತ್ರಿ ಫಂಕ್ಷನ್ ಗೆಸ್ ಮಾಡುತ್ತ ಮಲಗಿದ ವಿಜಯಾನಂದನನ್ನು ನಿದ್ರಾ ದೇವತೆ ಬಲವಾಗಿ ತಬ್ಬಿಕೊಳ್ಳಲಿಲ್ಲ.

ಮರುದಿವಸ ಸಮಾರಂಭದ ಸ್ಥಳ ಮುಟ್ಟಿದಾಗಲೇ ವಿಜಯಾನಂದನಿಗೆ ಗೊತ್ತಾಗಿದ್ದು ತಾನು ಬಂದಿರುವುದು ಗದುಗಿನ ಬೈತಲೆಯಂಥ ಸ್ಟೇಷನ್ ರೋಡಿನಲ್ಲಿ ತಲೆ ಎತ್ತಿರುವ, ಶಹರದಲ್ಲೇ ಅತ್ಯಾಧುನಿಕವೆನಿಸಿದ ಬೃಹತ್ ಶೋರೂಂ ಉದ್ಘಾಟನೆಗೆಂದು. ದೇಶ-ವಿದೇಶಗಳ ಜನಪ್ರಿಯ ಬ್ರ್ಯಾಂಡಿನ, ವಿಲಾಸಿ ಐಟಂಗಳ ಸಂಗ್ರಹ. ಜಾಗತಿಕಮಟ್ಟದ ಲಕ್ಸುರಿ ರಿಟೇಲ್ ಮಾರಾಟದ ಶಾಪಿಂಗ್ ಮಾಲ್. ವಿಜಯಾನಂದನ ಮನದಲ್ಲಿ ಸುರುವಾಯಿತು ಲೆಕ್ಕಾಚಾರ. ಶೋರೂಂಗೆ ಎಷ್ಟು ರೊಕ್ಕ ಸುರಿದಿರಬೇಕು ? ಅದರ ಅದೃಷ್ಟಶಾಲಿ ಓನರ್ ಯಾರಿರಬಹುದು ?

ವಿಜಯಾನಂದ ಪಕ್ಕದವರ ಪಿಸುಮಾತುಗಳಿಗೆ ಕಿವಿಗೊಟ್ಟ. ಓನರ್ ಹೆಸರು ತೇಲಿ ಬಂದು ಅವನ ಕಿವಿಗೆ ಮುತ್ತಿಟ್ಟಾಗ ದಿಗ್ಭ್ರಾಂತನಾದ! ಅನುಮಾನ ಕಾಡತೊಡಗಿತು. ದೃಷ್ಟಿ ಚಕ್ಕನೆ ಶೋರೂಂನ ಸುಂದರ ಫ್ಲೆಕ್ಸ್ ಫಲಕದ ಬಳಿಗೆ ಓಡಿತು. ಬೆರಗುಗಣ್ಣಿಂದ ಸರಸರ ಓದಿದ. ವಿವೇಕಾನಂದನ 'ದ ಕಲೆಕ್ಷನ್ ಸೆಂಟರ್ (ಪಿ) ಲಿಮಿಟೆಡ್' ಅನುಮಾನಕ್ಕೆ ಪುಷ್ಟಿ ಸಿಕ್ಕಂತಾಯಿತು. ಅವನಿಗೆ ಹುಚ್ಚು ಹಿಡಿಯೋದೊಂದು ಬಾಕಿ. ಇದೇನು ಯಕ್ಷಿಣಿಯೇ... ಕನಸೇ...! ಗಲ್ಲ ಚೂಟಿಕೊಂಡ. ವಾಸ್ತವ ಎಂಬುದು ದೃಢಪಟ್ಟಿತು.

ಕಥೆ ಬೇರೆ ರೂಪ ಪಡೆದುಕೊಂಡಿತು.

ವಿವೇಕ, ಶೂನ್ಯದಿಂದ ಈ ಮಟ್ಟಕ್ಕೆ ಬೆಳೆದಾನೆಂದು ಕನಸು ಮನಸಿನಲ್ಲೂ ಎಣಿಸಿರಲಿಲ್ಲ ತನ್ನ ಎಣಿಕೆ ಎಡವಿತ್ತು. ದಿಢೀರ್ ಅಂತ ಇಷ್ಟೆಲ್ಲಾ ಹೇಗಾಯಿತು ? ಎದುರಾದ ಪ್ರಶ್ನೆಗೆ ಉತ್ತರವಾಗಿ ತೆರೆದುಕೊಂಡ ಪ್ರಶ್ನೆಗಳು ಹಲವಾರು – ಐಪಿಎಲ್ ಕ್ರಿಕೆಟ್ ತಂಡಕ್ಕೆ ಹರಾಜಿನಲ್ಲಿ ೫ ಕೋಟಿಗೆ ಬಿಕರಿಯಾದನೇ ? ಕರೋಡಪತಿಯ ಮನೆ ಅಳಿಯನ ಪಟ್ಟ ಅಲಂಕರಿಸಿದನೇ ? ಲಾಟರಿಯಲ್ಲಿ ಭರ್ಜರಿ ಬಹುಮಾನ ಬಂತೇ ? ಇಲ್ಲಾ ಭೂಗತ ಪಾತಕಿಗಳ ಜೊತೆಗೆ ಲಿಂಕ್ ಹೊಂದಿರುವನೇ ? ಉತ್ತರ ಸಿಗದೆ ವಿಜಯಾನಂದನ ತಲೆ ಗಿರ್ರೆಂದಿತು.

ಏನೇ ಆದರೂ ವಿವೇಕ ಕಡೆಗೂ ತಾನು ಅಂದಂತೆ ಮಾಡಿ ತೋರಿಸಿಬಿಟ್ಟ ಹಟವಾದಿ. ನಿಜಕ್ಕೂ ಹೆಮ್ಮೆ ವಿಷಯ. ಬೇಸರದ ಸಂಗತಿ ಏನಂದರೆ ತಾನು ಮಗನ ಆಪತ್ಕಾಲದಲ್ಲಿ ಬೆಂಬಲಕ್ಕೆ ನಿಲ್ಲೋದು ಅಂತಿರಲಿ ಅವನ ಭವಿಷ್ಯ ಹಾಳಾಗಲಿ ಎಂದು ಹಾರೈಸಿದೆನಲ್ಲ ಎಂಬ ಧರ್ಮ ಸಂಕಟದಲ್ಲಿ ಸಿಲುಕಿದ. ಪಾಪಪ್ರಜ್ಞೆ ಅವನನ್ನು ತಿವಿದು ಛೇಡಿಸಿತು. ಮಗನ ಮುಂದೆ ತಾನು ಸಣ್ಣವನಾದಂತೆ ಭಾಸವಾಯಿತು. ಕಾಲ ಮಿಂಚಿಹೋಗಿದೆ. ಪ್ರಲಾಪಿಸುವುದರಿಂದ ಪ್ರಯೋಜನವಿಲ್ಲ ಎಂದು ತನ್ನನ್ನೇ ತಾನು ಸಮಾಧಾನಿಸಿಕೊಂಡು ಅಲ್ಲಿಂದ ಕಾಲು ಕಿತ್ತ.

* * *

ಆ ದಿನ ವಿವೇಕ ಮನೆ ಸೇರಿದಾಗ ರಾತ್ರಿ ಒಂಬತ್ತು ದಾಟಿತ್ತು. ಅವನ ಮೋರೆ ಮೇಲೆ ಒಂಥರಾ ಸಂತೃಪ್ತ ಭಾವನೆ ಹಾಸಿತ್ತು. ವಿಜಯಾನಂದನಿಗೆ ಶೋರೂಂ ಬಗ್ಗೆ ತನ್ನನ್ನು ಕಾಡುತ್ತಿರುವ ಅನುಮಾನಗಳಿಗೆ ಪರಿಹಾರ ಕಂಡುಕೊಳ್ಳುವ ತವಕ. ''ಈಗ ಹೇಳಯ್ಯ ಬೃಹಸ್ಪತಿ. ಶೋರೂಂಗೆ ಸುರಿದ ದುಡ್ಡು ಎಲ್ಲಿಂದ ಬಂತು ?'' ಗತ್ತಿನ ಪ್ರಶ್ನೆ ''ಓ ಅದಾ... ಏನಪಾಂತಂದ್ರ... ಅದು ನಿಮ್ದೆ ಹಣ'' ವಿವೇಕನ ನೇರ ಉತ್ತರ.

''ನಾನ್ಯಾವಾಗ ಕೊಟ್ಟೆನಿ ?'' ಸ್ಪಷ್ಟೀಕರಣ ಕೇಳಿದ.

''ನಾನ ತಿಜೋರಿ ತಗ್ದುತಗೊಂಡೀನಿ.'' ವಿಜಯಾನಂದನಿಗೆ ಸುನಾಮಿ ಅಲೆ ಅಪ್ಪಳಿಸಿದಂತಾಯಿತು. ''ಲೇ



ಹುಚಪ್ಯಾಲಿ, ಕೀಲಿಕೈ ಇಲ್ದ ತಿಜೋರಿ ಹ್ಯಾಂಗ್ ತಗ್ದೀ ? ಛೂಮಂತ್ರಗಿಂತ್ರ ಮಾಡ್ದ್ಯಾ ಮತ್ತ'' ವಿಜಯಾನಂದ ಆತಂಕಕ್ಕೆ ಒಳಗಾದ. ತಿಜೋರಿ ಲೂಟಿಯ ಮೋಡಸ್ ಅಪರಂಡಿ ಎಳೆ ಎಳೆಯಾಗಿ ತೆರೆದುಕೊಳ್ಳತೊಡಗಿತು.

ವಿವೇಕಾನಂದ ಮುಂದುವರೆದ: ''ದುಡ್ಡಿಗಾಗಿ ನಾನು ಪಟ್ಟ ಪರಿಪಾಟಲು ಆಟೀಟಲ್ಲ. ಕಂಡ ಕಂಡವರನ್ನು ಕೇಳಿಕೊಂಡೆ. ಬಂಧು-ಮಿತ್ರರು ಮುಲಾಜು ಇಲ್ದ ಕೈ ಎತ್ತಿಬಿಟ್ರು. ಇನ್ನು ಬ್ಯಾಂಕ್ ಲೋನ್ ಉಳ್ಳವರ ವಿಶೇಷ ಹಕ್ಕುತಾನೆ. ಮೇಲಾಗಿ ಅಡವು ಇಡಾಕ ನನ್ ಹೆಸರಿನಾಗ ಯಾವ ಆಸ್ತಿ-ಪಾಸ್ತಿ ದಾಖಲೆ ಇದೆ ? ಹೀಗಾಗಿ ಯಾವ ಬ್ಯಾಂಕೂ ನನ್ಗೆ ಲೋನ್ ಕೊಡಾಕ ಮುಂದ ಬರ್ಲಿಲ್ಲ. ಸ್ವಲ್ಪವೂ ಕರಗದ ಕಲ್ಲು ಹೃದಯದ ಜನ. ಗಡುವು ಹತ್ರ ಹತ್ರ ಬಂದಾಗ ಆತಂಕ, ಚಡಪಡಿಕೆ ಇನ್ನಷ್ಟು ಏರ್ತಾ ಹೋತು. ನನ್ ಮನದಾಳದ ತುಮಲ ಯಾರೇರಲ್ಲಿ ಹೇಳ್ಲಿ ?

''ಕೊಟ್ಟ ಮಾತು ಉಳ್ಸಿಕೊಳ್ಳೋದು ಅನ್ಮಾನ ಅಂತ ಅನಿಸಿದಾಗ ದಿಕ್ಕೇ ತೋಚದ್ಹಂಗಾಯ್ತು. ಪ್ರೆಸ್ಟೀಜ್ ಪ್ರಶ್ನೆ. ಮುಂದೇನು ? ಪ್ರಶ್ನೆ ಕಾಡಿದಾಗ... ಕೈಯಾಗ ಬೆಣ್ಣೆ ಇಟ್ಕೊಂಡು ತುಪ್ಪಕ್ಕೆ ಪರದಾಡಿದ್ರು ಅನ್ನೊ ಗಾದೆಯ ದರ್ಶನವಾಯ್ತು! ಮನಸ್ಸು ಅಕಲು ಹಾಕಿದಾಗ ನನ್ಗೊಂದು ವಿಚಿತ್ರ ಉಪಾಯ ಹೊಳೀತು. ಒಂದೀಟು ರಿಸ್ಕು, ಒಂದೀಟು ಅಡ್ವಂಚರು. ಹಿಂಬಾಗಿಲ ತಂತ್ರ ಬಳಸಿಕೊಂಡು ಒಂದ್ ಹೊಸ ಪ್ರಯೋಗ ಮಾಡ್ದೆ. ಹಣದ ಸಮಸ್ಯೆಗೆ ತೆರೆಬಿತ್ತು.'' ವಿವೇಕ ಒಂದರೆಕ್ಷಣ ಮೌನಕ್ಕೆ ಮೊರೆಹೋದ. ವಿಜಯಾನಂದನ ಕುತೂಹಲ ಇಮ್ಮಡಿಸಿತು.

''ನಿನ್ ಸಸ್ಪೆನ್ಸ್ ಕ್ರಾಯಿಮ್ ಸ್ಟೋರಿನ್ ಒಟ್ರಾಸಿ ಒದರೋ ಅವಿವೇಕಿ'' ವಿಜಯಾನಂದ ಚೀರಿದ. ವಿವೇಕ ಮುಂದುವರೆದ –

''ಅದೊಂದು ಥರಾ ಫೇರಿ ಟೇಲ್. ನಿಮ್ ಉಡ್ದಾರಕ್ಕೆ ಸದಾ ಜೋತು ಬಿದ್ದಿರೊ ತಿಜೋರಿ ಕೈ ದಿನಾ ಒಂದ್ ಸರ್ತಿ ನಿಮ್ ರೂಂನ ಮೇಜಿನ ಮ್ಯಾಗ ಮಲಗಿರೋ ಸಂಗ್ತೀನ್ ಗುರ್ತಿಸಿದ್ದೆ. ಆ ಟೈಂನಾಗ ನಿಮ್ಗೆ ಬಾತ್‌ರೂಂ ಒಳಗಡೆ ಜಳಕದ ಭರಾಟೆಯಾದ್ರೆ, ಹೆಂಗ್ಸರಿಗೆ ಅಡಿಗೆಮನಿಯಾಗ ಕೈತುಂಬ ಕೆಲ್ಸ.

''ಒಂದ್ ದಿನ ನಾನು ಆ ವ್ಯಾಳೆದಾಗ ಮೋಲ್ಡಿಂಗ್‌ಕ್ಲೇ ಮ್ಯಾಲೆ ತಿಜೋರಿ ಬೀಗದ ಕೈಯ ಇಂಪ್ರೆಶನ್ ತಗೊಂಡೆ. ನುರಿತ ಬೀಗ ರೀಪೇರಿಯವರ ಹತ್ರ ನಕಲಿ ಕೈ ಮಾಡ್ಸಿಕೊಂಡೆ. ಒಂದ್ ಸರಿಹೊತ್ನಾಗ ಎಲ್ರೂ ಮಲಗಿದ ಮ್ಯಾಗ, ಸದ್ದಿಲ್ದ ತಿಜೋರಿ ಲೂಟಿ ಹೊಡ್ದೆ! ನನ್ ರೊಟ್ಟಿ ಜಾರಿ ತುಪ್ಪದಾಗ ಬಿತ್ತು! ಸ್ವರ್ಗಕ್ಕೆ ಮೂರೇ ಗೇಣು!'' ವಿವೇಕ ಒಂದೇ ಉಸಿರಲ್ಲಿ ಉಸಿರಿದ. ಮನದಲ್ಲಿ ನಿರಾಳತೆಯ ಎಳೆ ಸುಳಿದುಹೋಯಿತು. ವಿಜಯಾನಂದ ಅವಾಕ್ಕಾದ!

ಈಗ ಕಾಲದ ಜೊತೆಗೆ ತನ್ನನ್ನು ಅಪ್‌ಡೇಟ್ ಮಾಡಿಕೊಂಡ ವಿಜಯಾನಂದ ಹೊಸ ವ್ಯಕ್ತಿ. ತಂದೆ-ಮಗನ ನಡುವಣ ಅಂತರ ಕಡಿಮೆಯಾಯಿತು. ತುಸು ತಡವಾಗಿ ಅರಿವಾಯಿತು ಅಷ್ಟೆ. ಹಗ್ಗ ಜಗ್ಗಾಟದ ಪಂದ್ಯದಲ್ಲಿ ತಂದೆ ಬಾಗಿದ್ದ, ಮಗ ಬೀಗಿದ್ದ.

**ಪ್ರೊ|| ರುದ್ರಯ್ಯ ವಿ. ಗದಗ**
ನಂ. ೨೪೦/೪೨, 'ಪಂಚವಟಿ', ವಿವೇಕಾನಂದ ನಗರ
ನೀರಿನ ಟ್ಯಾಂಕ್ ಹತ್ತಿರ, ಗದಗ - ೫೮೨ ೧೦೧

# ಲೈಂಗಿಕತೆಯ ಬಗ್ಗೆ ಗ್ರಾಮೀಣ ಯುವಜನತೆಗೆ ಇರುವ ತಿಳಿವಳಿಕೆ

ಗಂಗಾಧರ ರೆಡ್ಡಿ ಎನ್.



**ಕ**ರ್ನಾಟಕದ ಒಂದು ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿ ಲೈಂಗಿಕತೆಯ ಬಗ್ಗೆ ನಡೆಸಿದ ಅಧ್ಯಯನದ ಬೆಳಕಿನಲ್ಲಿ ಈ ಲೇಖನವನ್ನು ಪ್ರಸ್ತುತಪಡಿಸಲಾಗಿದೆ.

ಲೈಂಗಿಕತೆಗೆ ಸಂಬಂಧಿಸಿದ ವಿಚಾರಗಳನ್ನು ಮಾತನಾಡುವುದು ಅದನ್ನು ಚರ್ಚಿಸುವುದು ಇಂದಿಗೂ ಮುಜುಗರದ ವಿಷಯವಾಗಿದೆ. ಲೈಂಗಿಕತೆ ಎಂದರೆ ಪಾಪ ಎಂಬಂತೆ ವರ್ತಿಸುವ ನಮ್ಮ ಸಮಾಜದಲ್ಲಿ ಅದಕ್ಕೆ ವಿಶಿಷ್ಟ ಸ್ಥಾನವೂ ಇದೆ. ಭಾರತೀಯ ಸಂಪ್ರದಾಯಗಳ ಪ್ರಕಾರ ಲೈಂಗಿಕತೆ ಎಂಬುದು ಕತ್ತಲು ಕೋಣೆಯಲ್ಲಿ ಗಂಡ ಹೆಂಡಿರ (ಗಂಡು-ಹೆಣ್ಣಿನ) ನಡುವೆ ಸಂಭವಿಸುವಂತಹ ಒಂದು ಕ್ರಿಯೆ ಮಾತ್ರ ಎಂಬ ನಂಬಿಕೆಯನ್ನು ಉಳಿಸಿಕೊಂಡು ಬರಲಾಗಿದೆ. ಆದ ಕಾರಣ ಅದರ ಬಗ್ಗೆ ಚರ್ಚಿಸಲು ಮುಜುಗರ. ಯುವಕರಲ್ಲಿ ಆ ಕುರಿತು ತಮ್ಮಲ್ಲಿ ಉದ್ಭವಿಸುವ ಸಮಸ್ಯೆಗಳಿಗೆ ಪರಿಹಾರವಿಲ್ಲದೆ ಯುವಕರು ಮಾನಸಿಕವಾಗಿ ಖಿನ್ನರಾಗುತ್ತಿದ್ದಾರೆ ಎಂಬುದು ಅಧ್ಯಯನದ ಸಾರಾಂಶ. ಆದಾಗ್ಯೂ, ಭಾರತೀಯ ಕುಟುಂಬ ಕಲ್ಯಾಣ ಒಕ್ಕೂಟದ ಜಯಂತ್‌ಕುಮಾರ್ ಬಸು ಮಹಾರಾಷ್ಟ್ರ ಕಾಲೇಜು ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಮುಂಬೈ, ಠಾಣೆ, ನಾಗಪೂರವೂ ಸೇರಿದಂತೆ ಮಹಾರಾಷ್ಟ್ರದ ಕೆಲವು ಪ್ರಮುಖ ಕಾಲೇಜುಗಳಲ್ಲಿ (೨೦೦೪, ೨೦೦೬ ಮತ್ತು ೨೦೦೮) ೩ ವರ್ಷಗಳ ಕಾಲ ಸತತವಾಗಿ ಕೈಗೊಂಡ ಅಧ್ಯಯನದ ಫಲಿತಾಂಶಗಳನ್ನು ಗಮನಿಸಿದಾಗ ಇಂದಿನ ವಿದ್ಯಾರ್ಥಿಗಳು ಲೈಂಗಿಕ ಸಂಬಂಧಗಳ ಬಗ್ಗೆ ಮುಕ್ತವಾಗಿ ಮಾತನಾಡಿ ಈ ವಿಷಯಕ್ಕೆ ಸಂಬಂಧಿಸಿದಂತೆ ತಮ್ಮ ಅನುಭವಗಳನ್ನು ಹಂಚಿಕೊಂಡಿದ್ದಾರೆ. ಲೈಂಗಿಕ ಸಂಬಂಧಿ ವಿಚಾರಗಳನ್ನು ಮುಕ್ತವಾಗಿ ಹಂಚಿಕೊಂಡಿರುವ ಕಾಲೇಜು ವಿದ್ಯಾರ್ಥಿಗಳ ಧೈರ್ಯ ನಿಜಕ್ಕೂ ಮೆಚ್ಚುವಂಥದ್ದೇ, ಆದರೆ ಇದೇ ಅಧ್ಯಯನದ ಪ್ರಕಾರ **ಕಾಲೇಜಿಗೆ ಹೋಗುವ ಬಹುಪಾಲು ವಿದ್ಯಾರ್ಥಿಗಳು ತಮ್ಮ ೧೮ರ ಆಸುಪಾಸಿನಲ್ಲಿಯೇ ಶೀಲ ಕಳೆದುಕೊಳ್ಳುತ್ತಿದ್ದಾರೆ** ಎಂಬುದನ್ನು ಗಮನಿಸಿದಾಗ ಇಂದಿನ ಯುವಜನತೆ ಯಾವ ಕಡೆ ವಾಲುತ್ತಿದೆ ಎಂಬುದು ಸ್ಪಷ್ಟವಾಗುತ್ತದೆ. ಅಧ್ಯಯನ ಕೈಗೊಂಡ ಬಹುಪಾಲು ವಿದ್ಯಾರ್ಥಿಗಳು ತಮ್ಮ ಲೈಂಗಿಕ ತೃಷೆಯನ್ನು ತೀರಿಸಿಕೊಳ್ಳಲು ವೇಶ್ಯಾಗೃಹಗಳಿಗೆ ಹೋಗುವುದನ್ನು ಒಪ್ಪಿಕೊಂಡಿದ್ದಾರೆ. ಆಗ ಮಾತ್ರ ಅವರು ಕಾಂಡೋಮ್‌ನ್ನು ಉಪಯೋಗಿಸುತ್ತಾರಂತೆ. ಉಳಿದಂತೆ ಸಹಪಾಠಿಗಳು ನೆರೆಹೊರೆಯವರೊಂದಿಗೆ ಮತ್ತು ತಮ್ಮ ಸಂಬಂಧಿಕರ ಜೊತೆ ಲೈಂಗಿಕ 'ಸಂಪರ್ಕ'ವನ್ನು ಸಾಧಿಸುವಾಗ ಕಾಂಡೋಮ್ ಉಪಯೋಗಿಸುವುದಿಲ್ಲವೆಂದು ಒಪ್ಪಿಕೊಂಡಿದ್ದಾರೆ.

ವಿಜ್ಞಾನ ಕ್ಷೇತ್ರ ಹಾಗೂ ಸಮಾಜದಲ್ಲಿ ಉಂಟಾಗುತ್ತಿರುವ ಬದಲಾವಣೆಗಳ ಹಿನ್ನೆಲೆಯಲ್ಲಿಯೇ ಮಾನವನು ತನ್ನ ಅಭಿರುಚಿಗೆ ತಕ್ಕಂತೆ ಜೀವನಶೈಲಿಯನ್ನು ಬದಲಾಯಿಸಿಕೊಳ್ಳುತ್ತಿದ್ದಾನೆ. ಅದು ಕೇವಲ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಯಾಗಿರದೆ ಮನುಷ್ಯನ ಲೈಂಗಿಕ ಸಂಬಂಧಗಳಿಗೂ ವ್ಯಾಪಿಸಿದೆ. **ಮುಕ್ತ, ಸಲಿಂಗಕಾಮ ಮತ್ತು ಹಿಜಡಾಗಳಿಗೆ ಕಾನೂನಿನಡಿಯಲ್ಲಿ ರಕ್ಷಣೆ ಒದಗಿಸುವುದಕ್ಕಾಗಿ ಕಲಂ ೩೭೭ಕ್ಕೆ ತಿದ್ದುಪಡಿ** ತರಲು ಚಿಂತನೆ ನಡೆಯುತ್ತಿದೆ. ಇದು ಕೆಲವರಿಗೆ ಆಶ್ಚರ್ಯಕರವಾಗಿದೆ.

ಶ್ರೀ ಬಸವರಾಜ ಹೊರಟ್ಟಿಯವರು ಕರ್ನಾಟಕ ಸರ್ಕಾರದ ಶಿಕ್ಷಣ ಮಂತ್ರಿಗಳಾಗಿದ್ದಾಗ ಮಕ್ಕಳಿಗೆ ಲೈಂಗಿಕ ಶಿಕ್ಷಣವನ್ನು ಒದಗಿಸುವ ಸಲುವಾಗಿ ಪಠ್ಯ ಪುಸ್ತಕಗಳಲ್ಲಿ ಲೈಂಗಿಕತೆಗೆ ಸಂಬಂಧಿಸಿದ ವಿಚಾರಗಳನ್ನು ಅಳವಡಿಸಬೇಕೆಂಬ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದಂತೆಯೇ ಸಮಾಜದ ವಿವಿಧ ಮಜಲುಗಳಲ್ಲಿ ಬಿಸಿ ಬಿಸಿ ಚರ್ಚೆಗಳು ಆರಂಭವಾಗಿ ಕೆಲವರು ಪರವಾಗಿಯೂ, ಇನ್ನು ಕೆಲವರು ವಿರೋಧವಾಗಿಯೂ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಆದರೆ ಗಮನಿಸಬೇಕಾದ ಮುಖ್ಯ ವಿಷಯವೆಂದರೆ, ಸರ್ಕಾರವಾಗಲೀ ಅಥವಾ ಇನ್ನಾವುದೇ ಸಂಘ ಸಂಸ್ಥೆಯಾಗಲೀ ಗ್ರಾಮೀಣ ಪ್ರದೇಶಗಳಲ್ಲಿ ಈ ವಿಷಯ ಕುರಿತಂತೆ ಅಭಿಪ್ರಾಯಗಳನ್ನು ಸಂಗ್ರಹಿಸಲಿಲ್ಲ. 'ದಿ ಸಂಡೇ ಇಂಡಿಯನ್' ಪತ್ರಿಕೆ ಕೈಗೊಂಡ ಅಧ್ಯಯನದ ಪ್ರಕಾರ ಪ್ರತಿಕ್ರಿಯಿಸಿದ ಬಹುತೇಕ ಜನರು ಲೈಂಗಿಕ ಶಿಕ್ಷಣದ ಅಗತ್ಯತೆಯ ಬಗ್ಗೆ ಮತ್ತು ಅದನ್ನು ಪಠ್ಯಪುಸ್ತಕಗಳಲ್ಲಿ ಸೇರಿಸಬೇಕೆಂದು ತಿಳಿಸಿದ್ದಾರೆ. ಆದರೂ ನಮ್ಮ ಸರ್ಕಾರಗಳು ಈ ವಿಷಯವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿವೆ.

ಆದರೆ ಅಭಿವೃದ್ಧಿ ಹೊಂದಿದ ಪಾಶ್ಚಾತ್ಯ ರಾಷ್ಟ್ರಗಳಲ್ಲಿನ ಲೈಂಗಿಕ ಶಿಕ್ಷಣದ ಸ್ಥಿತಿ ಇಲ್ಲಿನ ಸ್ಥಿತಿಗಿಂತ ಭಿನ್ನವಾಗಿರುವುದನ್ನು ನಾವು ಕಾಣಬಹುದು. ಲೈಂಗಿಕತೆಯ ಬಗ್ಗೆ ಮುಕ್ತ ಚರ್ಚೆಗೆ ಅವಕಾಶ ನೀಡುವ ನಿಟ್ಟಿನಲ್ಲಿ ಬ್ರಿಟನ್ನಿನ ಸರ್ಕಾರ

೧೯೭೩ರಲ್ಲಿಯೇ ಲೈಂಗಿಕ ಶಿಕ್ಷಣವನ್ನು ಜಾರಿಗೊಳಿಸಿತು. ಅಲ್ಲದೇ ಭಾರತದ ಮಹಾನ್ ಗ್ರಂಥವಾದ ಕಾಮಸೂತ್ರವನ್ನು ಅಲ್ಲಿನ ೧೦ನೆಯ ತರಗತಿಯ ವಿದ್ಯಾರ್ಥಿಗಳು ಪಠ್ಯ ವಿಷಯವಾಗಿ ಅಧ್ಯಯನ ಮಾಡುತ್ತಾರೆ.

ಜನರ ಆಸೆ ಆಕಾಂಕ್ಷೆಗಳು, ಜೀವನ ವಿಧಾನಗಳು ಬದಲಾದಂತೆ ಸಮಾಜದಲ್ಲಿ ವಿವಿಧ ರೀತಿಯ ಕಾಯಿಲೆಗಳು ಉದ್ಭವಿಸುತ್ತಿರುವುದು ಎಲ್ಲರಿಗೂ ಗೊತ್ತಿರುವ ವಿಚಾರ. ಆದರೆ ಈ ವಿಷಯದ ಬಗ್ಗೆ ಭಾರತದಲ್ಲಿ ಎಷ್ಟು ಜನರಿಗೆ ಅರಿವಿದೆ ಎಂಬುದು ಇನ್ನೂ ನಿಗೂಢ. ಹಳ್ಳಿಗಳಿಂದಲೇ ತುಂಬಿ ತುಳುಕುತ್ತಿರುವ, ಅವಿದ್ಯಾವಂತರ ಸಂಖ್ಯೆ ಹೆಚ್ಚಿರುವ ಹಾಗೂ ಇಂದಿಗೂ ಮೂಢನಂಬಿಕೆಗಳನ್ನು ಅನುಸರಿಸಿಕೊಂಡು ಬರುತ್ತಿರುವ ಭಾರತೀಯ ಗ್ರಾಮೀಣ ಭಾಗದ ಯುವಕರಲ್ಲಿ ಲೈಂಗಿಕ ವಿಷಯಗಳ ಮತ್ತು ಲೈಂಗಿಕತೆಯ ಬಗ್ಗೆ ಎಷ್ಟರಮಟ್ಟಿಗೆ ತಿಳಿವಳಿಕೆ ಇದೆ ಎಂಬುದನ್ನು ಅರಿಯುವ ಸಲುವಾಗಿ ೨೦೦೭ನೆಯ ಇಸವಿಯಲ್ಲಿ ಕರ್ನಾಟಕದ ಹಿಂದಿನ ಕೋಲಾರ ಜಿಲ್ಲೆ(ಪ್ರಸ್ತುತ ಚಿಕ್ಕಬಳ್ಳಾಪುರ ಜಿಲ್ಲೆ) ಚಿಕ್ಕಬಳ್ಳಾಪುರ ತಾಲ್ಲೂಕಿನ ಮಂಡಿಕಲ್ ಗ್ರಾಮದಲ್ಲಿ ಪ್ರಮುಖವಾಗಿ ವಿದ್ಯಾವಂತ ಯುವಕರನ್ನು ಕೇಂದ್ರವಾಗಿಟ್ಟುಕೊಂಡು ಕೈಗೊಂಡ ಅಧ್ಯಯನ ನಿಜಕ್ಕೂ ಕೆಲವು ಕುತೂಹಲದ ಸಂಗತಿಗಳನ್ನು ಹೊರಹಾಕಿದೆ.

**ಗ್ರಾಮೀಣ ಯುವಕರಲ್ಲಿ ಲೈಂಗಿಕತೆಯ ಬಗ್ಗೆ ಇರುವ ಜ್ಞಾನ** ಎಂಬ ವಿಷಯದ ಬಗ್ಗೆ ಕೈಗೊಂಡ ಅಧ್ಯಯನಕ್ಕಾಗಿ ನಿರ್ದಿಷ್ಟ ಜನಸಂಖ್ಯೆ ಮತ್ತು ನಿಗದಿತ ವಯಸ್ಸಿನವರನ್ನು ಮಾತ್ರ ಸಂದರ್ಶಿಸಲಾಯಿತು. ಸಂದರ್ಶಿಸಿದವರಲ್ಲಿ ಯುವಕ, ಯುವತಿಯರ ಅನುಪಾತ (೫೦:೫೦) ಸಮವಾಗಿದ್ದು, ೧೮ರಿಂದ ೨೫ ವರ್ಷ ವಯಸ್ಸಿನ ವಿದ್ಯಾವಂತರನ್ನು ಮಾತ್ರ ಸಂದರ್ಶನಕ್ಕೆ ಆಯ್ಕೆ ಮಾಡಿಕೊಳ್ಳಲಾಯಿತು. ಸಂದರ್ಶಿಸಿದ ಪ್ರತಿಯೊಬ್ಬರೂ ತಮ್ಮ ಪ್ರೌಢ ಶಿಕ್ಷಣವನ್ನು ಮುಗಿಸಿದ್ದು ಕೆಲವರು ವಿದ್ಯಾಭ್ಯಾಸವನ್ನು ಮುಂದುವರಿಸುತ್ತಿದ್ದು, ಪದವಿ ಪೂರ್ವ ಶಿಕ್ಷಣ ಮತ್ತು ಪದವಿ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಇನ್ನುಳಿದವರು ವ್ಯಾಸಂಗ ಮುಗಿಸಿ ಸಮಾಜದ ವಿವಿಧ ರಂಗಗಳಲ್ಲಿ ದುಡಿಯುತ್ತಿದ್ದವರು. ಪ್ರಾಥಮಿಕ ದತ್ತಾಂಶಗಳೇ ಅಧ್ಯಯನದ ಜೀವಾಳ. ಅಧ್ಯಯನಕ್ಕೆ ಪ್ರಶ್ನಾವಳಿಗಳನ್ನು ಸಿದ್ಧಪಡಿಸಿ ನೇರವಾಗಿ ಸಂದರ್ಶನದ ಮೂಲಕ ದತ್ತಾಂಶಗಳನ್ನು ಸಂಗ್ರಹಿಸಲಾಯಿತು. ಊರಿನ ಜನಸಂಖ್ಯೆ, ಇತಿಹಾಸ, ಭೌಗೋಳಿಕ ವಿಸ್ತಾರ, ಜನರ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳನ್ನು ತಿಳಿಯಲು ಗ್ರಾಮ ಪಂಚಾಯತಿ, ಅಂಗನವಾಡಿ, ಹಿರಿಯರಿಂದ ಮತ್ತು ಯುವಕ ಸಂಘಗಳಿಂದ ವಿಷಯವನ್ನು ಸಂಗ್ರಹಿಸಲಾಯಿತು.

ಸಂದರ್ಶಿಸಿದ ಕೆಲವೇ ಮಂದಿ ಮಾತ್ರ ಲಿಂಗ ಮತ್ತು ಲೈಂಗಿಕತೆಗಳ ನಡುವಿನ ವ್ಯತ್ಯಾಸವನ್ನು ಗುರುತಿಸಿದ್ದು, ಲೈಂಗಿಕತೆ ವಿಷಯಗಳ ಬಗ್ಗೆ ಮಾತನಾಡಲು ಕೆಲವರು ಹಿಂಜರಿದರೂ ತದನಂತರ ಉತ್ತಮವಾಗಿ ಪ್ರತಿಕ್ರಿಯಿಸಿದ್ದಾರೆ. ಸಂದರ್ಶಿಸಿದ ಕೇವಲ ಶೇ. ೧೦ರಷ್ಟು ಜನ ಲೈಂಗಿಕ ಶಿಕ್ಷಣದ ಅವಶ್ಯಕತೆ ಇಲ್ಲವೆಂದೂ, ಅದರ ಬಗ್ಗೆ ಮಾತನಾಡುವುದು ತಪ್ಪೆಂದೂ, ಲೈಂಗಿಕ ಶಿಕ್ಷಣವು ಮಕ್ಕಳ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆಂದೂ ಅಭಿಪ್ರಾಯಪಟ್ಟರು. ಆದರೆ ಇನ್ನುಳಿದ (ಶೇ. ೯೦) ಯುವಕ/ಯುವತಿಯರು ಲೈಂಗಿಕ ಶಿಕ್ಷಣದ ಅವಶ್ಯಕತೆ ಇದೆ ಎಂದು ಒಪ್ಪಿಕೊಂಡಿದ್ದಾರೆ. ಲೈಂಗಿಕ ವಿಷಯಗಳ ಬಗ್ಗೆ ತಮ್ಮಲ್ಲಿರುವ ತಪ್ಪು ತಿಳಿವಳಿಕೆ ಮತ್ತು ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಮತ್ತು ಲೈಂಗಿಕ ಸಂಬಂಧಿ ಕಾಯಿಲೆಗಳ ಬಗ್ಗೆ ಸಂಪೂರ್ಣವಾಗಿ ತಿಳಿಯಲು ಲೈಂಗಿಕ ಶಿಕ್ಷಣವನ್ನು ಶಾಲೆಗಳಲ್ಲಿ ನೀಡಿದರೆ ಉತ್ತಮ ಎಂದು ಸಂದರ್ಶಿಸಿದ ಬಹುಪಾಲು ಯುವಕ/ಯುವತಿಯರು ತಿಳಿಸಿದರು. ಇತರೆ ಮಾರ್ಗಗಳಿಂದ ಪಡೆಯುವ ಮಾಹಿತಿಗಿಂತ ಶಾಲೆಯಲ್ಲಿ ದೊರೆಯುವ ಮಾಹಿತಿ ತುಂಬಾ ಪರಿಣಾಮಕಾರಿಯಾಗಿರುತ್ತದೆಂದೂ, ಸಮೂಹ ಮಾಧ್ಯಮಗಳಿಂದ ಮತ್ತು ಸಹಪಾಠಿಗಳಿಂದ ಪಡೆಯುವ ಮಾಹಿತಿಗಳು ಪರಿಪೂರ್ಣವಾಗಿರದೇ ದೋಷಪೂರಿತವಾಗಿರುತ್ತವೆ; ಅಲ್ಲದೆ ಅನೇಕ ಅವಾಂತರಗಳಿಗೆ ಎಡೆಮಾಡಿಕೊಡುತ್ತವೆ ಎಂದು ಯುವಕರು ಭಾವಿಸುತ್ತಾರೆ.

ಲೈಂಗಿಕತೆಗೆ ಸಂಬಂಧಿಸಿದ ಕಾಯಿಲೆಗಳು ಮತ್ತು ಸುರಕ್ಷಿತ ಲೈಂಗಿಕತೆಗೆ ಸಂಬಂಧಿಸಿದಂತೆ, ಸಂದರ್ಶಿಸಿದ ಕೇವಲ ಶೇ. ೧೬ರಷ್ಟು ಮಂದಿ ಮಾತ್ರ ಜಾಗೃತರಾಗಿದ್ದು, ಸುರಕ್ಷಿತ ಲೈಂಗಿಕತೆಗೆ ಸಂಬಂಧಿಸಿದಂತೆ ಪ್ರಮುಖವಾಗಿ ಯುವತಿಯರು ಹೆಚ್ಚು ಜಾಗೃತರಾಗಿದ್ದಾರೆ ಎಂಬ ವಿಷಯ ತಿಳಿದುಬಂತು. ಆದರೂ ಗ್ರಾಮೀಣ ಭಾಗದ ಯುವಕರು ಸುರಕ್ಷತೆಯ ಬಗ್ಗೆ ಹೆಚ್ಚಾಗಿ ಚಿಂತಿಸುವುದಿಲ್ಲ ಎಂಬುದು ಅಧ್ಯಯನದಿಂದ ತಿಳಿದುಬಂದಿತು. ಲೈಂಗಿಕ ಸಂಬಂಧಿ ಕಾಯಿಲೆಯಾದ ಎಚ್.ಐ.ವಿ/ಏಯ್ಡ್ಸ್‌ನ್ನು ಹೊರತುಪಡಿಸಿದರೆ ಬೇರೆ ಯಾವುದೇ ಲೈಂಗಿಕ (ಗುಪ್ತ) ರೋಗಗಳ ಬಗ್ಗೆ ಅವರಿಗೆ ಅರಿವಿಲ್ಲದಿರುವುದು ನಿಜವಾಗಿಯೂ ನಂಬಲಸಾಧ್ಯ. ಆದಾಗ್ಯೂ ಸಂದರ್ಶಿಸಿದ ಶೇ. ೮೬ ಯುವಕರಿಗೆ ಮಾತ್ರ ಎಚ್.ಐ.ವಿ/ ಏಯ್ಡ್ಸ್ ಬಗ್ಗೆ ತಕ್ಕಮಟ್ಟಿಗೆ ಅರಿವಿರುವುದು ಕಂಡುಬಂತು. ಇತರೆ ಸಾಮಾನ್ಯ ಲೈಂಗಿಕ ಕಾಯಿಲೆಗಳಾದ ಗೊನೋರಿಯಾ, ಸಿಫಿಲಿಸ್... ಇತ್ಯಾದಿ ಕಾಯಿಲೆಗಳ ಬಗ್ಗೆ ಕಿಂಚಿತ್ತೂ ಅರಿವಿಲ್ಲದಿರುವುದರಿಂದ ಗ್ರಾಮೀಣ ಭಾಗದ ಯುವಕರು ಅನೇಕ ಸಂಕಷ್ಟಗಳಿಗೆ ಗುರಿಯಾಗುತ್ತಿದ್ದಾರೆ.

ಲೈಂಗಿಕ ವಿಷಯಗಳ ಬಗ್ಗೆ ಪರಿಪೂರ್ಣ ಮಾಹಿತಿ ಇಲ್ಲದಿರುವುದು, ತಿಳಿದ ಕೆಲವು ವಿಷಯಗಳ ಬಗೆಗಿನ ಹಾಗೂ ಹೆಚ್ಚೆಚ್ಚು ತಿಳಿಯಬೇಕೆಂಬ ಕುತೂಹಲದಿಂದ ಸಮಾಜದಲ್ಲಿ ಸುಲಭವಾಗಿ ದೊರೆಯುವ ಅಶ್ಲೀಲ ಚಿತ್ರಗಳ ಮೊರೆಹೋಗುತ್ತಿರುವುದಾಗಿ ಸಂದರ್ಶಿಸಿದ ಬಹುಪಾಲು ಯುವಕರು ಒಪ್ಪಿಕೊಂಡಿದ್ದಾರೆ. ಅಲ್ಲದೇ ಗ್ರಾಮೀಣ ಭಾಗದ ಯುವಕರು ಲೈಂಗಿಕ ಸಮಸ್ಯೆಗಳನ್ನು ಕಡೆಗಣಿಸುವುದು ಸಾಮಾನ್ಯ ಎಂಬುದು ದೃಢಪಟ್ಟಿದ್ದು, ಲೈಂಗಿಕ ವಿಷಯಕ್ಕೆ ಸಂಬಂಧಿಸಿದ, ಹಾಗೆಯೇ ಯುವಕರಲ್ಲಿರುವ ನಿಷೇಧಾತ್ಮಕ ಮನೋಭಾವನೆ ಲೈಂಗಿಕ ಆರೋಗ್ಯ ಹದಗೆಡುವಂತೆ ಮಾಡಿದೆ. ಕೆಲ ಯುವಕರು ಸುರಕ್ಷಿತ ಲೈಂಗಿಕತೆಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸುವುದಾಗಿ, ಬಹುಶಃ ಆದರಿಂದಲೇ ಕಾಂಡೋಮ್ ಉಪಯೋಗವನ್ನು ಸಂಪೂರ್ಣವಾಗಿ ಕಡೆಗಣಿಸಿರುವುದು ಕಂಡುಬಂದಿದೆ. ನಿರೀಕ್ಷಿಸಿದ ಮತ್ತು ಸಂಪೂರ್ಣ ತೃಪ್ತಿ ಸಿಗದಿರುವುದು ಕಾಂಡೋಮ್ ಉಪಯೋಗದ ನಿರ್ಲಕ್ಷ್ಯಕ್ಕೆ ಪ್ರಮುಖ ಕಾರಣ ಎಂದು ಕೆಲ ಯುವಕರು ತಮ್ಮ ಅಭಿಪ್ರಾಯವನ್ನು ಹಂಚಿಕೊಂಡಿದ್ದಾರೆ.

ಸಂದರ್ಶಿಸಲಾದ ಶೇ. ೬೮ ಯುವಕರು ಸಲಿಂಗಿ, ಉಭಯಲಿಂಗಿ ಮತ್ತು ಸಾಮಾನ್ಯ ಲೈಂಗಿಕತೆಗಳ ನಡುವೆ ಯಾವುದೇ ರೀತಿ ವ್ಯತ್ಯಾಸವಿಲ್ಲವೆಂದು ತಿಳಿಸಿದ್ದು ಅವರಲ್ಲಿ ಲೈಂಗಿಕತೆಗೆ ಸಂಬಂಧಿಸಿದಂತೆ ಇರುವ ಜ್ಞಾನದ ಮಟ್ಟವನ್ನು ತಿಳಿಸುತ್ತದೆ. ಸಂದರ್ಶಿಸಿದ ಬಹುಪಾಲು ಯುವಕರು ಮಾತ್ರ ಮದುವೆ ಕೇವಲ ಲೈಂಗಿಕ ತೃಷೆಯನ್ನು ತೀರಿಸಿಕೊಳ್ಳಲು ಮಾಡಿಕೊಳ್ಳುವ ಒಂದು ರೀತಿಯ ಒಪ್ಪಂದ ಎಂದು ಅಭಿಪ್ರಾಯಪಡುತ್ತಾರೆ. ಭಾರತದಲ್ಲಿ ನಡೆಯುತ್ತಿರುವ ಲೈಂಗಿಕ ಸಂಬಂಧಿ ಅಪರಾಧಗಳಿಗೆ ಲೈಂಗಿಕ ಶಿಕ್ಷಣ ಇಲ್ಲದಿರುವುದೂ ಒಂದು ಕಾರಣವಿರಬಹುದೇ, ಎಂದು ಪ್ರಶ್ನಿಸಿದಾಗ ಇದ್ದೀತು ಎಂದು ಪ್ರತಿಕ್ರಿಯಿಸಿದ್ದಾರೆ. ಅಸಾಂಪ್ರದಾಯಿಕ ಲೈಂಗಿಕತೆ, ಜಾಗೃತಿ, ಮಾಹಿತಿಯ ಕೊರತೆ ಮತ್ತು ಮದುವೆಯ ಬಗ್ಗೆ ಪೂರ್ವ ಯೋಜನೆಗಳಿಲ್ಲದಿರುವುದು ಭಾರತದ ಜನಸಂಖ್ಯೆ ಹೆಚ್ಚಾಗಲು ಮುಖ್ಯ ಕಾರಣವೆಂದು ಬಹುಪಾಲು ಯುವಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಗಂಗಾಧರ ರೆಡ್ಡಿ ಎನ್.**
ಚಲಕಾಯಲಪರ್ತಿ, ಚಿಕ್ಕಬಳ್ಳಾಪುರ ತಾಲ್ಲೂಕು, ಜಿಲ್ಲೆ

## ಸುದ್ದಿ ಚಿತ್ರ



**ನವಕರ್ನಾಟಕ ಪ್ರಕಟಿಸಿರುವ ಚಿತ್ರಕಲಾ ಮಾಲೆಯ ನಾಲ್ಕು ಪುಸ್ತಕಗಳ ಅನಾವರಣ ೮-೫-೨೦೦೯ರಂದು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ನೆರವೇರಿತು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಶ್ರೀ ಆರ್. ಎಸ್. ರಾಜಾರಾಮ್, ಬೇಬಿ ಪರಾಗ, ಪ್ರೊ॥ ಎಂ. ಜೆ. ಕಮಲಾಕ್ಷಿ, ಶ್ರೀ ಟಿ. ಪ್ರಭಾಕರ್, ಡಾ॥ ರಾಘವೇಂದ್ರ ಎಚ್. ಕುಲಕರ್ಣಿ ಮತ್ತು ಶ್ರೀ ಬಾಬು ಜತ್ತಕರ್**

**ಪೀ**ಣ್ಯದಲ್ಲಿರುವ ನವಕರ್ನಾಟಕ ಮುದ್ರಣಾಲಯ ಮತ್ತು ಗೋದಾಮು ಕಟ್ಟಡಗಳ ನಿರ್ಮಾಣ ಮುಗಿದ ನಂತರ, ಉಳಿದ ಸುಮಾರು ಮುಕ್ಕಾಲು ಎಕರೆಯಷ್ಟು ಭೂಮಿಯಲ್ಲಿ ಒಂದು ಅಚ್ಚುಕಟ್ಟಾದ ತೋಟ ಮಾಡುವ ಯೋಜನೆ, ಸಂಸ್ಥೆಯ ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಆರ್. ಎಸ್. ರಾಜಾರಾಮ್ ಅವರಿಗೆ ಹೊಳೆಯಿತು.

ವಾಹನಗಳನ್ನು ನಿಲ್ಲಿಸಲು ಸ್ಥಳ, ಕಟ್ಟಡಗಳ ಮುಂಭಾಗದಲ್ಲಿ ಹುಲ್ಲುಹಾಸು, ಒಂದು ಕಡೆ ಪುಟ್ಟ ಗುಲಾಬಿತೋಟ – ಹೀಗೆ ಖಾಲಿ ಸ್ಥಳವನ್ನು ಹಂಚಿಕೆ ಮಾಡಲಾಯಿತು. ಕಾಂಪೌಂಡಿಗೆ ಹೊಂದಿಕೊಂಡಂತೆ ಸುತ್ತಲೂ ತೆಂಗಿನ ಸಸಿಗಳನ್ನು ನೆಡಲಾಯಿತು. ಶ್ರೀ ರಾಜಾರಾಮ್‌ರ ಪ್ರಯತ್ನದಿಂದ ದಕ್ಷಿಣ ಕರಾವಳಿಯಿಂದ, ಹಾಗೂ ಬೇರೆ ಬೇರೆ ಕಡೆಗಳಿಂದ ಹಣ್ಣಿನ ಗಿಡಗಳನ್ನು ತಂದು ಅವನ್ನು ಬೆಂಗಳೂರಿನ ಹವಾಮಾನಕ್ಕೆ ಒಗ್ಗಿಸಲಾಯಿತು.

ಗುಲಾಬಿ ತೋಟದಲ್ಲಿ ಸುಮಾರು ಮೂವತ್ತೈದು ಪ್ರಭೇದಗಳ ಎಂಬತ್ತರಷ್ಟು ಗುಲಾಬಿ ಗಿಡಗಳನ್ನು ಬೆಳೆಸಲಾಯಿತು. ಇವುಗಳಿಗೆ ವಿಶೇಷ ಪೋಷಣೆ ಅಗತ್ಯವಾಗುವುದರಿಂದ ಕುದುರೆ ಗೊಬ್ಬರವನ್ನು ತರಿಸಿ ಹಾಕಲಾಯಿತು. ತೋಟಗಾರಿಕೆಯ ಅನುಭವವಿದ್ದ ಶ್ರೀ ಕಾವೇರಪ್ಪ ಎಂಬುವವರು ವಾರದಲ್ಲಿ ಎರಡು ದಿನ ಬಂದು ಹೊಸ ತೋಟದ ಉಸ್ತುವಾರಿ ನೋಡಿಕೊಳ್ಳುತ್ತಿದ್ದರು. ಅವರು ಲಾಲ್‌ಬಾಗ್ ತೋಟದಿಂದ ಹಲವು ಹೂವು, ಹಣ್ಣಿನ ಗಿಡಗಳನ್ನು ತಂದು ನಾಟಿ ಹಾಕಿದರು.

# ನವಕರ್ನಾಟಕ ತೋಟ ಸಾವಯವ ಅನುಭವ

ಗುಲಾಬಿ ತೋಟದಲ್ಲಿ ಬಣ್ಣಬಣ್ಣದ ಮೊಗ್ಗುಗಳು, ಹೂಗಳು ಅರಳಿ, ರಸ್ತೆಯಲ್ಲಿ ಅತ್ತಿತ್ತ ಹೋಗಿಬರುವವರು ಒಂದು ಕ್ಷಣ ನಿಂತು ಗುಲಾಬಿಯ ಸೊಬಗನ್ನು ಸವಿಯುವಂತೆ ಮಾಡಿದವು. ಹೂಗಳು ಆಫೀಸಿನ ಹೂದಾನಿಗಳನ್ನು ಅಲಂಕರಿಸಿದವು. ಸುಮಾರು ವರ್ಷಗಳ ನಂತರ ಗಿಡಗಳ ಹೂಬಿಡುವ ಸಾಮರ್ಥ್ಯ ಕುಗ್ಗತೊಡಗಿತು. ಕೆಲವೊಮ್ಮೆ ನೀರಿನ ಅಭಾವವೂ ಉಂಟಾಯಿತು. ಗುಲಾಬಿ ತೋಟವಿದ್ದ ಸ್ಥಳದಲ್ಲಿ ಸಣ್ಣ ಕೈತೋಟ ಕ್ರಮೇಣ ತಲೆಯೆತ್ತಿತು.

ನವಕರ್ನಾಟಕದ ತೋಟದಲ್ಲಿ ಹಣ್ಣಿನ ಗಿಡಗಳ ಜೊತೆಗೆ ನೇರಿಳೆ, ಅಂಟುವಾಳ ಇತ್ಯಾದಿ ಕಾಡುಮರಗಳನ್ನು ಬೆಳೆಸಲಾಗಿದೆ. ದಕ್ಷಿಣ ಕನ್ನಡದ ಕರಾವಳಿಯಿಂದ ತಂದು ಬೆಳೆಸಿರುವ ದಿವಿ ಹಲಸು, ಬಿಂಬುಳಿ, ದಾರೆಹುಳಿ ಮುಂತಾದ ಮರಗಳಲ್ಲದೆ ತೆಂಗು, ಮಾವು, ಹಲಸು, ಚಕ್ಕೋತ, ದಾಳಿಂಬೆ, ಸಪೋಟ, ಬೆಣ್ಣೆ ಹಣ್ಣು (ಅವಕಾಡೊ), ಪಪಾಯ, ಅಂಜೂರ, ನೆಲ್ಲಿ, ಕಿರುನೆಲ್ಲಿ, ಜಲಸೇಬು, ನಿಂಬೆ, ಅಮಟೆ, ಸೀಬೆ, ಬಾಳೆ – ಮುಂತಾದ ಹಣ್ಣುಗಳ ಮರಗಳಿವೆ. ಚಕ್ರಮುನಿ ಸೊಪ್ಪಿನ ಗಿಡಗಳಿವೆ. ಕರಿಬೇವು, ನುಗ್ಗೆ ಮರಗಳಿವೆ. ಚಪ್ಪರದವರೆ ಬಳ್ಳಿ ಇದೆ. ಕಾಫಿ ಗಿಡಗಳಿವೆ.

ಚಿತ್ರ-ಲೇಖನ
**ಕೆ. ಪಿ. ಸ್ವಾಮಿ**

ಕೈತೋಟದಲ್ಲಿ ವರ್ಷಪೂರ್ತಿ ಸೊಪ್ಪು, ಹುರುಳಿ ಕಾಯಿ, ಮೂಲಂಗಿ, ಕ್ಯಾರೆಟ್, ಪುದೀನ, ಬಸಳೆ, ಬದನೆ – ಮುಂತಾದ ಸೊಪ್ಪು ಮತ್ತು ತರಕಾರಿಗಳನ್ನು ಬೆಳೆಸಲಾಗುತ್ತದೆ.

ದಾಸವಾಳ, ಮಲ್ಲಿಗೆ, ಪಾರಿಜಾತ, ಕನಕಾಂಬರ, ಗುಲಾಬಿ, ಸುಗಂಧರಾಜ, ಮೇ-ಫ್ಲವರ್ – ಮುಂತಾದ ಹೂವಿನ ಗಿಡಗಳಿವೆ. ನವಕರ್ನಾಟಕದ ಹಿತೈಷಿಯೊಬ್ಬರು ತಮಾಷೆಯಾಗಿ ಹೇಳುವಂತೆ ಅಲ್ಲಿ ಇಲ್ಲದಿರುವುದು ಸಂಜೀವಿನಿ ಗಿಡವೊಂದೇ!









ತೋಟದ ಗಿಡ ಮರಗಳಿಗೆ ರಸಗೊಬ್ಬರ ಬಳಕೆಯಿಂದ ಆಗುವ ಹಾನಿಯ ಕುರಿತು ತಿಳಿವಳಿಕೆ ಹೆಚ್ಚಿದಂತೆ, ರಸಗೊಬ್ಬರ ಮತ್ತು ಹಾನಿಕಾರಕ ಕೀಟನಾಶಕಗಳ ಬಳಕೆಯನ್ನು ಸಂಪೂರ್ಣ ತ್ಯಜಿಸಲಾಯಿತು. ಸಾವಯವ ಗೊಬ್ಬರ ತಯಾರಿಸಿಕೊಂಡು ಬಳಸುವುದನ್ನು ರೂಢಿಗೆ ತರಲಾಯಿತು.

ಅಲ್ಲಿ ಸಿಬ್ಬಂದಿ ಕುಟುಂಬಗಳಿಗೆಂದು ಕೆಲವು ಅತಿಥಿಗೃಹಗಳಿವೆ. ತ್ಯಾಜ್ಯ ವಸ್ತುಗಳನ್ನು, ಮರದ ಎಲೆಗಳನ್ನು ಒಂದು ಗುಂಡಿಯಲ್ಲಿ ತುಂಬಿಸಿಟ್ಟು ಗೊಬ್ಬರ ಮಾಡಲಾಗುತ್ತದೆ. ಜೊತೆಗೆ ಕುರಿಗೊಬ್ಬರ ಬೆರೆಸಲಾಗುತ್ತದೆ. ಕೆಲವೊಮ್ಮೆ ಕತ್ತರಿಸಿದ ಹಸಿಸೊಪ್ಪನ್ನು ಸಹ ತುಂಬಿಸಲಾಗುತ್ತದೆ. ಕ್ರಿಮಿನಾಶಕಗಳ ಬಳಕೆ ಇಲ್ಲವೆಂದೇ ಹೇಳಬೇಕು. ಬೇವಿನ ಸೊಪ್ಪನ್ನು ಬೇಯಿಸಿ ತಯಾರಿಸಿದ ದ್ರಾವಣವನ್ನು ಕ್ರಿಮಿನಾಶಕವಾಗಿ ಸಿಂಪಡಿಸಿದ್ದುಂಟು. ರಸಗೊಬ್ಬರದ ಬಳಕೆ ಸಂಪೂರ್ಣ ನಿಷಿದ್ಧ.

ಕೆಲವು ವರ್ಷಗಳ ಹಿಂದೆ ಮಳೆಯ ಅಭಾವದಿಂದ ತೊಂದರೆ ಉಂಟಾಯಿತು. ಅದೇ ಸಂದರ್ಭದಲ್ಲಿ ನುಸಿ ಪೀಡೆಯಿಂದ, ಜೊತೆಗೆ ನೀರಿನ ಕೊರತೆಯಿಂದ ತೆಂಗಿನ ಕಾಯಿಗಳ ಗಾತ್ರ ಕುಗ್ಗತೊಡಗಿತು. ಆಗ ತೆಂಗಿನ ಮರದ ಬುಡದಲ್ಲಿ ನೀರು ತಂಗಲು ಸಹಾಯಕವಾಗುವಂತೆ ಸುತ್ತಲೂ ಕಟ್ಟೆ ಕಟ್ಟಿಸಿ, ಎರೆಹುಳು ಗೊಬ್ಬರ ತರಿಸಿ ಹಾಕಲಾಯಿತು. ಜೊತೆಗೆ ನವಕರ್ನಾಟಕ ಮುದ್ರಣಾಲಯದ ಆವರಣದಲ್ಲಿ ಮಳೆಕೊಯ್ಲು ಮೂಲಕ ಮಳೆನೀರನ್ನು ಭೂಮಿಗೆ ಇಂಗಿಸುವ ಮತ್ತು ಬೋರ್‌ವೆಲ್ ರೀಚಾರ್ಜ್ ಮಾಡಿಸುವ ಕ್ರಮ ಕೈಗೊಳ್ಳಲಾಯಿತು.

ಬೋರ್‌ವೆಲ್ ರೀಚಾರ್ಜ್ ಮಾಡಿಸಿದ ನಂತರ, ಬೇಸಿಗೆ ಕಾಲದಲ್ಲಿ ಸಹ ಭೂಮಿಯ ನೀರಿನ ಮಟ್ಟ ಕಡಿಮೆಯಾಗಿಲ್ಲ. ಇದರಿಂದ ಬೇಸಿಗೆಯಲ್ಲಿ ಸಹ ಗಿಡಗಳು ಸೊರಗದೆ ಎಂದಿನಂತೆ ನಳನಳಿಸುತ್ತವೆ.

ಎರೆಹುಳು ಗೊಬ್ಬರದ ಪ್ರಯೋಗದ ನಂತರ ಆಶ್ಚರ್ಯಕರ ರೀತಿಯಲ್ಲಿ ನುಸಿ ಪೀಡೆ ಮಾಯವಾಯಿತಲ್ಲದೆ, ಮರಗಳಲ್ಲಿ ಫಲವೂ ಹೆಚ್ಚಿತು. ಕಾಯಿಗಳ ಗಾತ್ರವೂ ಹೆಚ್ಚಾಯಿತು. ಈ ತೆಂಗಿನ ಮರಗಳಿಂದ ಏನಿಲ್ಲವೆಂದರೂ ವರ್ಷಕ್ಕೆ ಒಂದು ಸಾವಿರದಷ್ಟು ಕಾಯಿಗಳು ದೊರಕುತ್ತವೆ.

ತೋಟದಲ್ಲಿ ಗಿಡಗಳಿಗೆ, ಕೈತೋಟದ ಬೆಳೆಗಳಿಗೆ ನೀರುಣಿಸಲು ಇಬ್ಬರು ಸಿಬ್ಬಂದಿ ಇದ್ದಾರೆ. ಗಿಡಗಳ ಸುತ್ತಲೂ ಅಗತೆ, ಅವಕ್ಕೆ ಆಗಾಗ ಸಾವಯವ ಗೊಬ್ಬರ ಹಾಕುವುದು, ಕಳೆ ಕೀಳುವುದು – ಮುಂತಾದ ಕೆಲಸವನ್ನು ಅವರು ಮಾಡುತ್ತಾರೆ.

ನವಕರ್ನಾಟಕ ತೋಟದಲ್ಲಿ ಬೆಳೆದು ಅರಳಿದ ಎಷ್ಟೋ ಹೂಗಳು, ಹಣ್ಣುಗಳು, ತರಕಾರಿಗಳು ನವಕರ್ನಾಟಕ ಪ್ರಕಟಣೆಗಳ ಮುಖಪುಟಗಳಲ್ಲಿ, ಒಳಪುಟಗಳಲ್ಲಿ ಅಚ್ಚಾಗಿವೆ.

ನವಕರ್ನಾಟಕದ ವೈಶಿಷ್ಟ್ಯವೆಂದರೆ ತೋಟದ ಉತ್ಪನ್ನಗಳನ್ನು ಮಾರಾಟ ಮಾಡುವುದಿಲ್ಲ. ತೋಟದಲ್ಲಿ ಬೆಳೆಯುವ ಕರಿಬೇವಿನ ಸೊಪ್ಪು, ಕೀರೆ, ಹರಿವೆದಂಟಾಗಲಿ, ನೇರಳೆ ಹಣ್ಣಿನಿಂದ ಹಿಡಿದು ಮಾವು, ಹಲಸು, ಅಂಜೂರದ ಹಣ್ಣಾಗಲಿ, ಎಲ್ಲವನ್ನೂ ನವಕರ್ನಾಟಕದ ಸಿಬ್ಬಂದಿಗಳಿಗೆ ಉಚಿತವಾಗಿ ಹಂಚಲಾಗುತ್ತದೆ! ಹಲಸು ಮತ್ತು ಮಾವಿನ ಹಣ್ಣಿನ ಕಾಲದಲ್ಲಿ ಆಫೀಸಿಗೆ ಬರುವ ಅತಿಥಿಗಳಿಗೂ ಅವುಗಳ ರುಚಿ ನೋಡುವ ಅವಕಾಶ ಲಭಿಸುತ್ತದೆ!

ಚಿತ್ರ-ಲೇಖನ : ಕೆ. ಪಿ. ಸ್ವಾಮಿ
ನಂ. ೧೬೮, ೧೦ನೇ ಮೇನ್, ೩ನೇ ಹಂತ, ಪೀಣ್ಯ ಕೈಗಾರಿಕಾ ನಗರ
ಬೆಂಗಳೂರು - ೫೬೦ ೦೫೮







ಲಾಹೋರ್ ಭೇಟಿಯ ಮೂಲಕ ಮಾನವೀಯ ಸಂಬಂಧಗಳ ಕುರಿತು ನಾನು ಗಳಿಸಿದ ಅನುಭವಗಳೇ ಬೇರೆ; ಭಾರತೀಯ ಹಾಗೂ ಪಾಕಿಸ್ತಾನೀ ಮಾಧ್ಯಮಗಳು ಬಿಂಬಿಸುತ್ತಿರುವ, ಜನಸಾಮಾನ್ಯರು ಹೊಂದಿರುವ ಅಭಿಪ್ರಾಯಗಳೇ ಬೇರೆ. ಪಾಕಿಸ್ತಾನದ ಬಗ್ಗೆ, ಮುಸ್ಲಿಮರ ಬಗ್ಗೆ ಪೂರ್ವಗ್ರಹಪೀಡಿತ, ಆಧಾರವಿಲ್ಲದ ಸುಳ್ಳು ವರದಿಗಳು ಲೆಕ್ಕವಿಲ್ಲದಷ್ಟು ಪ್ರಕಟವಾಗುತ್ತಿರುವುದು ಬೇಸರದ ಸಂಗತಿ. ಇಂತಹ ಎಲ್ಲ ಪತ್ರಕರ್ತರು, ಸುದ್ದಿ ಮಾಧ್ಯಮದವರು ಲಾಹೋರ್‌ಗೆ ಒಮ್ಮೆಯಾದರೂ ಭೇಟಿ ನೀಡಿ ಸತ್ಯದ ದರ್ಶನ ಪಡೆಯುವುದು ಸೂಕ್ತ.

# ನನ್ನ ಲಾಹೋರ್ ದೋಸ್ತಿ ಯಾತ್ರೆ

**ಪಾ**ಕಿಸ್ತಾನಕ್ಕೆ ಭೇಟಿ ಒಮ್ಮೆ ನೀಡಬೇಕೆಂಬ ಹಂಬಲ ಕಾಲೇಜು ದಿನಗಳಿಂದಲೂ ನನ್ನಲ್ಲಿತ್ತು. ಅಕ್ಟೋಬರ್ ೧೨-೧೮, ೨೦೦೮ರಂದು ನೀರಾವರಿ ಸಮಸ್ಯೆಗಳ ಕುರಿತಂತೆ ಲಾಹೋರಿನಲ್ಲಿ ಅಂತರರಾಷ್ಟ್ರೀಯ ಮಹಾಧಿವೇಶನವೊಂದು ಜರುಗಲಿದೆ ಎಂಬ ಸುದ್ದಿ ತಿಳಿದು ಅಂತಹ ಒಂದು ಸುವರ್ಣಾವಕಾಶವನ್ನು ಬಿಡಬಾರದು, ನಾನೂ ಒಬ್ಬ ಪ್ರತಿನಿಧಿಯಾಗಿ ಆ ಸಮ್ಮೇಳನದಲ್ಲಿ ಭಾಗವಹಿಸಬೇಕು ಎಂದು ತೀರ್ಮಾನಿಸಿ, ಆ ದಿಶೆಯಲ್ಲಿ ಯಶಸ್ವಿಯೂ ಆದೆ. ನನ್ನ ಬಹು ದಿನಗಳ ಹಂಬಲ ಈಡೇರಿಸಲು ಸಾಧ್ಯವಾದುದು ಹಿರಿಯ ಸಂಶೋಧಕರಾಗಿ ಆಸ್ಟ್ರೇಲಿಯಾದಲ್ಲಿ ನನಗೆ ಮಾರ್ಗದರ್ಶನ ನೀಡುತ್ತಿದ್ದ ಡಾ|| ಇಜಾಜ಼್ ಕುರೇಶಿ ಅವರ ನೆರವಿನಿಂದ. ಅಂದಿನ ದಿನಗಳಲ್ಲಿ ಪಾಕಿಸ್ತಾನದಲ್ಲಿ ಭಯೋತ್ಪಾದಕರ ವಿಧ್ವಂಸಕಾರಿ ಕೃತ್ಯಗಳು, ದೊಂಬಿ, ಗಲಾಟೆಗಳೇ ತುಂಬಿಹೋಗಿದ್ದಂತಹ ಪ್ರಕ್ಷುಬ್ಧ ವಾತಾವರಣದ ಹಿನ್ನೆಲೆಯಲ್ಲಿ ನನ್ನ ಹಿತೈಷಿಗಳು, ಸ್ನೇಹಿತರು ಮತ್ತು ಸಹೋದ್ಯೋಗಿಗಳು ಭೇಟಿಯನ್ನು ರದ್ದುಪಡಿಸಬೇಕೆಂದು ಎಡೆಬಿಡದೆ ಒತ್ತಾಯಮಾಡಿದರು. ಇನ್ನು ಕೆಲವರಂತೂ ಜಗತ್ತಿನಲ್ಲಿ ನೋಡಿಬರಬೇಕಾದ ಹಲವಾರು ದೇಶಗಳಿರುವಾಗ ಯಾವತ್ತಿಗೂ ಗಲಭೆ ಪೀಡಿತವಾಗಿರುವ, ಭಯೋತ್ಪಾದಕರ ತಾಣವಾಗಿರುವ ಪಾಕಿಸ್ತಾನವನ್ನೇ ಏಕೆ ಆಯ್ಕೆಮಾಡಿಕೊಂಡೆ ಎಂದು ಗೇಲಿಮಾಡಿದ್ದೂ ಉಂಟು. ಆದರೂ, ಪಟ್ಟುಬಿಡದೆ ಹೊರಟುನಿಂತೆ. ಕೆಲವರು ಇದೊಂದು ದುಸ್ಸಾಹಸ ಎಂದು ಜರೆದರು. ಇನ್ನು ಕೆಲವು ಗೆಳೆಯರು ''ಆ ನೆಲದಲ್ಲಿ ಯಾರಾದರೂ ನಿನ್ನನ್ನು ಅಪಹರಿಸಿಕೊಂಡು ಹೋಗುವುದು ಖಂಡಿತ. ಕೊಲೆಗೆ ಈಡಾಗುತ್ತೀಯ, ಇಲ್ಲವೇ ನಿನ್ನ ಮೇಲೆ ಬಾಂಬು ಸಿಡಿಸಲಾಗುತ್ತದೆ'' ಎಂದೆಲ್ಲಾ ಬೆದರಿಸ ಹತ್ತಿದರು. ಇದರಿಂದಾಗಿ ನನ್ನ ಕುಟುಂಬವರ್ಗದವರಿಗೆ ಎಲ್ಲಿಲ್ಲದ ಆತಂಕ. ಇವೆಲ್ಲಕ್ಕೂ ಭಿನ್ನವಾಗಿ, ''ಯಾವ ಆತಂಕವೂ ಇಲ್ಲದೆ ಹೋಗಿ ಬಾ, ಎಲ್ಲ ಸರಿ ಇರುತ್ತೆ. ಅಲ್ಲಿನ ನಿಜಸ್ಥಿತಿ ನಿನ್ನ ಅನುಭವಕ್ಕೂ ಬರುತ್ತೆ'' ಎಂದು ಬೆನ್ನುತಟ್ಟಿದವರು ನನ್ನ ಆಪ್ತಮಿತ್ರರಾದ ಅಪ್ಪಾಸಾಹೇಬ ಯರ್ನಾಳ್, ಹೇಮಂತ ಕುಮಾರ್ ಮತ್ತು ಪರಮೇಶ್ವರ್ ಗೌಡರು. ಈ ಪ್ರವಾಸ ಕೈಗೊಳ್ಳುವುದು ಒಂದು ಸವಾಲೇ ಸರಿ ಎಂದು ನಿರ್ಧರಿಸಿ ಪ್ರಯಾಣಕ್ಕೆ ಸಿದ್ಧತೆ ನಡೆಸಿದೆ.

ಅಕ್ಟೋಬರ್ ೧೧ರ ಮುಂಜಾನೆ 'ದೋಸ್ತಿ' ಬಸ್ಸು ದೆಹಲಿಯಿಂದ ಲಾಹೋರಿನತ್ತ ಹೊರಟಿತು. (ಭಾರತ-ಪಾಕಿಸ್ತಾನ ಎರಡೂ ರಾಷ್ಟ್ರಗಳ ಸ್ನೇಹ ಸಂವರ್ಧನೆಯ ಸಂಕೇತವಾಗಿ ಪ್ರಾರಂಭಿಸಲಾಗಿದ್ದ 'ದೋಸ್ತಿ'ಯ ಚೊಚ್ಚಲು ಪಯಣದಲ್ಲಿ ಮಾಜಿ ಪ್ರಧಾನಿ ವಾಜಪೇಯಿ ಅವರೂ ಇದ್ದರು.) ಗ್ರ್ಯಾಂಡ್ ಟ್ರಂಕ್ ರಸ್ತೆಯಲ್ಲಿ ಧಾವಿಸುತ್ತಿದ್ದ ಬಸ್ಸಿನಲ್ಲಿ ಪ್ರಯಾಣಿಕರಿಗೆ ಬೆಂಗಾವಲಾಗಿ ಪೊಲೀಸ್ ರಕ್ಷಕರ ಪಡೆ. ಒಮ್ಮಿಂದೊಮ್ಮೆಗೇ ನಾನೊಬ್ಬ ವಿ.ಐ.ಪಿ. ಆಗಿಬಿಟ್ಟ ಅನುಭವ! 'ದೋಸ್ತಿ' ಲಾಹೋರಿನ ಪಿ.ಟಿ.ಡಿ.ಸಿ. ಬಸ್ ನಿಲ್ದಾಣ ತಲುಪಿದಾಗ ಸಂಜೆಯಾಗಿತ್ತು. ಆಗಲೇ ಕತ್ತಲು ಆವರಿಸುತ್ತಿತ್ತು. ನನ್ನನ್ನು ಬರಮಾಡಿಕೊಳ್ಳಲು ಅಲ್ಲಿಗೆ ಬಂದಿದ್ದ ಗೆಳೆಯ ಅಬ್ಬಾಸ್ ಸಿದ್ದಿಕಿ ನಾನು ವಾಸ್ತವ್ಯ ಹೂಡಲಿದ್ದ ಪಾಕಿಸ್ತಾನದ ಮಾನವ ಹಕ್ಕುಗಳ ಆಯೋಗದ ಅತಿಥಿ ಗೃಹಕ್ಕೆ ಕರೆದೊಯ್ದರು.

ಲಾಹೋರ್ ತಲುಪಿದ ವಿಷಯವನ್ನು ಮನೆಯವರಿಗೆ ತಿಳಿಸುವ ಸಲುವಾಗಿ ಅಂದು ರಾತ್ರಿಯೇ ಅತಿಥಿಗೃಹದಿಂದ ಹೊರಟೆ. ನನ್ನ ಜೊತೆಗಿದ್ದ ಅತಿಥಿಗೃಹದ ಕಚೇರಿಯ ನೌಕರ ಆಸಿಫ್ ಅಲ್ಲೇ ಹತ್ತಿರದಲ್ಲಿದ್ದ ದೂರವಾಣಿ ಸೌಕರ್ಯವಿದ್ದ ಅಂಗಡಿಯೊಂದಕ್ಕೆ ಕರೆದುಕೊಂಡು ಹೋಗಿ ಅದರ ಯಜಮಾನ ಸಾದಿಕ್‌ನನ್ನು ಪರಿಚಯಿಸಿದ. ಸುಮಾರು ೨೩-೨೪ರ ಹರೆಯದ ಸಾದಿಕ್ ಅತೀವ ಉತ್ಸಾಹ ತೋರಿ ಕೈಕುಲುಕಿ ಲವಲವಿಕೆಯಿಂದ ಬರಮಾಡಿಕೊಂಡ. ''ಯಾವುದಾದರೂ ತಂಪು ಪಾನೀಯ ಅಥವಾ ಟೀ ತರಿಸಲೇ'' ಎಂದು ವಿಚಾರಿಸಿದ. ದೂರದ ಪ್ರಯಾಣದಿಂದ ಆಯಾಸಗೊಂಡಿದ್ದೆ. ಮೇಲಾಗಿ ಅದು ನಾನೆಂದೂ ಕಂಡರಿಯದಿದ್ದ ಊರು. ಒಂದು ಕ್ಷಣ ಅವನು ಕೇಳಿದ ಪ್ರಶ್ನೆ, ಅವನು ತೋರಿದ ಸೌಜನ್ಯ ಏಕೋ ಏನೋ ನನ್ನಲ್ಲಿ ಸಂದೇಹಕ್ಕೆ ಎಡೆಮಾಡಿ ಕೊಟ್ಟಿತು. ದಿಕ್ಕು ತೋಚದಂತಾಗಿದ್ದ ನಾನು ಅವೆರಡನ್ನೂ ಕುಡಿಯುವ ಅಭ್ಯಾಸವಿಲ್ಲ ಎಂದುಬಿಟ್ಟೆ. ಅದೇ ವೇಳೆ ನಾನೆಂದೂ ಕಾಣದಂತಹ ಬಣ್ಣಬಣ್ಣದ ದಿರಿಸು ಧರಿಸಿದ್ದ ವ್ಯಕ್ತಿಗಳು ಅಂಗಡಿಯೊಳಗೆ ಇಣುಕುಹಾಕಿ ಮಾತುಕತೆಯಲ್ಲಿ ತೊಡಗುತ್ತಿದ್ದರು. ಅಲ್ಲಿಯ ಇಡೀ ವಾತಾವರಣದಿಂದಾಗಿ ತಬ್ಬಿಬ್ಬಾಗಿಬಿಟ್ಟೆ. ''ದೇಖೋ ಭೈ, ಈ ಭಾಯ್‌ಸಾಬ್ ಭಾರತದಿಂದ ಬಂದಿದ್ದಾರೆ'' ಎಂದು ನನ್ನನ್ನು ಸಾದಿಕ್ ಅಂಗಡಿಗೆ ಬರುತ್ತಿದ್ದವರೆಲ್ಲರಿಗೂ ಪರಿಚಯ ಮಾಡಿಸಿದ. ನನಗೇಕೋ ಎಲ್ಲಿಲ್ಲದ ಮುಜುಗರ. ಈ ಗಡಿಬಿಡಿಯಲ್ಲೇ ಕೆಲವು ದೂರವಾಣಿ ಕರೆಗಳನ್ನು ಮಾಡಿ ಮುಗಿಸಿ, ಹಣ ಪಾವತಿಸಿ ಇನ್ನೇನು ಹೊರಡಬೇಕು ಎನ್ನುವಷ್ಟರಲ್ಲಿ ತಂಪುಪಾನೀಯ ನನ್ನ ಮುಂದೆ ಹಾಜರ್! ನಿಜಕ್ಕೂ ಸಾದಿಕ್ ಒಬ್ಬ ಅಸಾಧ್ಯ ವಾಚಾಳಿ. ಭಾರತದ ಬಗ್ಗೆ ಅವನು ಕೇಳುತ್ತಿದ್ದ ಪ್ರಶ್ನೆಗಳಿಗೆ ಕೊನೆಯೇ ಇಲ್ಲವೇನೋ

ಡಾ|| ರಾಜೇಂದ್ರ ಪೋದ್ದಾರ್

ಎನಿಸುತ್ತಿತ್ತು. ಕಡೆಗೂ ಅಲ್ಲಿಂದ ಜಾರಿಕೊಳ್ಳಲು ಗ್ಲಾಸ್‌ನಲ್ಲಿದ್ದ ತಂಪು ಪಾನೀಯವನ್ನು ಕುಡಿದು ಹೊರಗೆ ಹೆಜ್ಜೆಯಿಟ್ಟೆ. ನಮ್ಮ ಈ ಸಾದಿಕ್ ಅಷ್ಟಕ್ಕೇ ಬಿಡಬೇಕಲ್ಲ! ''ಸಾಬ್, ಊಟ ಎಲ್ಲಿ ಮಾಡುತ್ತೀರಿ, ದಾಲ್, ರೋಟಿ ತರಿಸಲೇ ?'' ಎಂದು ಕೇಳಿದ. ಊಟ ಆಗಿದೆ ಎಂದೆ. ಲಾಹೋರ್‌ನಿಂದ ಹೊರಡುವ ಮುನ್ನ ಒಂದುಬಾರಿಯಾದರೂ ತನ್ನ ಮನೆಗೆ ಊಟಕ್ಕೆ ಬರಬೇಕೆಂದು ಆಹ್ವಾನಿಸಿದ. ಅಂತೂ ಅಂಗಡಿಯಿಂದ ಅತಿಥಿಗೃಹದತ್ತ ಹೊರಟೆ. ಸಾದಿಕ್‌ನ ವಿಚಿತ್ರ ವರ್ತನೆ ನನ್ನ ಕುತೂಹಲವನ್ನು ಕೆರಳಿಸಿತ್ತು. ನನ್ನ ಜೊತೆಗಿದ್ದ ಅಸಿಫ್ ''ಸಾಬ್, ಸಾದಿಕ್ ಭಾರತದಲ್ಲಿ ಹುಟ್ಟಿದವ. ಅವನಿಗೆ ತಾನು ಹುಟ್ಟಿದ ನೆಲವೆಂದರೆ ಅಪಾರ ಪ್ರೀತಿ, ಅಭಿಮಾನ. ಹೇಗಾದರೂ ಮಾಡಿ ಅಲ್ಲಿಗೆ ಹೋಗಿಬರಬೇಕೆಂದು ಯಾವಾಗಲೂ ಹಂಬಲಿಸುತ್ತಿರುತ್ತಾನೆ. ಆದರಿಂದಾಗಿಯೇ ಅವನಲ್ಲಿಗೆ ಬರುವ ಎಲ್ಲ ಭಾರತೀಯರೊಂದಿಗೆ ಹೀಗೆ ಅತ್ಯಂತ ಸಲುಗೆ, ಪ್ರೀತಿ, ವಿಶ್ವಾಸಗಳಿಂದ ವರ್ತಿಸುತ್ತಾನೆ'' ಎಂದು ವಿವರಣೆ ನೀಡಿದ. ಅವನ ಈ ಮಾತುಗಳು ನನ್ನ ಮನಸ್ಸನ್ನು ನಿಜಕ್ಕೂ ಕಲಕಿಬಿಟ್ಟವು. ಸಾದಿಕ್‌ನಂತಹ ಒಬ್ಬ ಮುಗ್ಧನ ಬಗ್ಗೆ, ತಾನು ಹುಟ್ಟಿದ ದೇಶದ ಬಗ್ಗೆ ಅಭಿಮಾನ ಇರುವವನ ಬಗ್ಗೆ ಅನವಶ್ಯಕವಾಗಿ ಯಾಕಾದರೂ ಸಂದೇಹಪಟ್ಟೆನೋ ಎಂಬ ಪಾಪಪ್ರಜ್ಞೆ ನನ್ನನ್ನು ಆ ರಾತ್ರಿ ನಿದ್ದೆಯಲ್ಲೂ ಕಾಡಹತ್ತಿತು. ಅಂದು ಸಂಜೆ ಜರುಗಿದ ಘಟನೆಗಳು ನನ್ನಲ್ಲಿ ಅನೇಕ ಪ್ರಶ್ನೆಗಳನ್ನು ಹುಟ್ಟುಹಾಕಿದವು.

ಮಹಾಧಿವೇಶನಕ್ಕೆ ಬಂದ ಪ್ರತಿನಿಧಿಗಳು ನಗರದಲ್ಲಿ ಸುತ್ತಾಡಿಬರಲು ಕಡ್ಡಾಯವಾಗಿ ಸಂಘಟಕರ ಅನುಮತಿ ಪಡೆಯಬೇಕಿತ್ತು. ಪೊಲೀಸರ ರಕ್ಷಣೆಯಿಲ್ಲದೆ ಹೊರಗೆ ಕಾಲಿಡುವಂತಿರಲಿಲ್ಲ. ಇದಾವುದನ್ನೂ ಲೆಕ್ಕಿಸದೆ ನಾನು, ಅಸಿಫ್ ನಗರ ಪ್ರದಕ್ಷಿಣೆಗೆ ಹೊರಟೆವು. ಮೊದಲಿಗೆ ನಾವು ಭೇಟಿ ನೀಡಿದ ಸ್ಥಳ ಲಾಹೋರ್‌ನ ಕೋಟೆ. ಇದು ಹತ್ತಾರು ಕಟ್ಟಡಗಳು, ಉದ್ಯಾನವನಗಳು, ಸಣ್ಣಪುಟ್ಟ ಕೋಟೆಗಳು, ಮಿನರೆಟ್ಟುಗಳು ಮತ್ತು ಹಲವಾರು ಐತಿಹಾಸಿಕ ಕಟ್ಟಡಗಳನ್ನೊಳಗೊಂಡ ಬೃಹತ್ ಸಂಕೀರ್ಣ. ಚಕ್ರವರ್ತಿ ಅಕ್ಬರ್ ನಿರ್ಮಿಸಿದ ಬಿಳಿಬಣ್ಣದ ಆಲಮ್‌ಗಿರಿ ಗೇಟ್‌ಅನ್ನು ಹಾದು ಈ ಬೃಹತ್ ಕೋಟೆಯ ಒಳಗೆ ಪ್ರವೇಶಿಸಬೇಕು. ಇಟ್ಟಿಗೆಯಿಂದ ಕಟ್ಟಿರುವ ಈ ಕೋಟೆಯ ಗೋಡೆಯ ನಿರ್ಮಾಣಕ್ಕೆ ಶತಮಾನಗಳುದ್ದಕ್ಕೂ ಹಲವಾರು ರಾಜರುಗಳು ತಮ್ಮ ಕೊಡುಗೆ ನೀಡಿದ್ದಾರೆ. ಹಾಗೇ ಸ್ವಲ್ಪ ಮುಂದೆ ಸಾಗಿದರೆ ದಿವಾನ್-ಇ-ಖಾಸ್, ದಿವಾನ್-ಇ-ಆಮ್, ಶೀಷ್ ಮಹಲ್, ಮಹಾರಾಜ ರಣಜಿತ್ ಸಿಂಗ್‌ನ ಅರಮನೆ ಎಲ್ಲವೂ ಸಿಗುತ್ತವೆ. ಸ್ವಲ್ಪ ಮುಂದೆ ನಡೆದರೆ ವಿಶಾಲವಾದ ಹುಲ್ಲುಹಾಸು. ಅಲ್ಲಿ ಅಕಸ್ಮಾತ್ತಾಗಿ ಯುವಕರ ಗುಂಪೊಂದನ್ನು ಭೇಟಿಯಾಗುವ ಸಂದರ್ಭ ಉಂಟಾಯಿತು. ಮಾಮೂಲಿನಂತೆ ಅವರೊಡನೆ ಸಂಭಾಷಣೆಯಲ್ಲಿ ತೊಡಗಿ ಪರಸ್ಪರ ಹಿತಾಸಕ್ತಿಗಳ ದೃಷ್ಟಿಯಲ್ಲಿ ಭಾರತ-ಪಾಕಿಸ್ತಾನ ಎರಡೂ ರಾಷ್ಟ್ರಗಳ ನಡುವಿನ ಸ್ನೇಹ ಸಂಬಂಧಗಳು ಬೆಳೆಯುವ ಅವಶ್ಯಕತೆಯಿದೆ, ಎರಡೂ ರಾಷ್ಟ್ರಗಳು ಶಾಂತಿಯುತ ಸಹಬಾಳ್ವೆ ನಡೆಸಿ ಇತರ ರಾಷ್ಟ್ರಗಳಿಗೆ ಮಾದರಿಯಾಗಬೇಕಿದೆ ಎಂಬುದನ್ನು ಮನದಟ್ಟು ಮಾಡಿದೆ. ನನ್ನ ಮಾತುಗಳು ಅವರಿಗೆ ಬಹಳ ಇಷ್ಟವಾಗಿರಬೇಕು. ''ಇಂದಿನಿಂದ ನಾವು ನಿಮ್ಮ ಅಭಿಮಾನಿಗಳು ಸರ್. ಅಧಿವೇಶನದಲ್ಲಿ ನೀವು ಪ್ರಬಂಧವನ್ನು ಮಂಡಿಸುವಾಗ ನಾವೆಲ್ಲರೂ ಹಾಜರಿರುತ್ತೇವೆ'' ಎನ್ನುತ್ತ ನಮ್ಮನ್ನು ಅತ್ಯಂತ ಪ್ರೀತಿಯಿಂದ ಬೀಳ್ಕೊಟ್ಟರು. ಆಲಮ್‌ಗಿರಿ ಗೇಟಿನ ಮುಂದೆ ಮನೋಹರವಾದ ಕಟ್ಟಡಗಳು ಮತ್ತು ಉದ್ಯಾನವನ ಇರುವ ಹಜ಼ಾರಿಬಾಗ್ ಇದೆ. ನಂತರ ನಮಗೆ ಸಿಗುವುದು ಕೆಂಪು ಮರಳುಗಲ್ಲಿನಿಂದ ನಿರ್ಮಿಸಲಾಗಿರುವ, ಇಡೀ ಜಗತ್ತಿನಲ್ಲೇ ಅತ್ಯಂತ ಭವ್ಯ ಹಾಗೂ ಬೃಹತ್ ಕಟ್ಟಡಗಳಲ್ಲೊಂದಾದ, ಸುಸಂಬದ್ಧವಾಗಿ ರಚಿಸಲಾಗಿರುವ ಶಾಹಿ ಮಸೀದಿ. ಅಲ್ಲಿರುವ ಮಿನರೆಟ್ಟುಗಳು ಮತ್ತು ಕಲ್ಲು ಕೆತ್ತನೆಗಳು ಮನಸ್ಸಿಗೆ ಮುದ ನೀಡುತ್ತವೆ. ಶಾಹಿ ಮಸೀದಿಯ ಪ್ರವೇಶದ್ವಾರದಲ್ಲಿ ಕೆಂಪು ಮರಳುಶಿಲೆಯಿಂದ ನಿರ್ಮಿಸಲಾಗಿರುವ ಖ್ಯಾತ ಕವಿ ಮತ್ತು ತತ್ವಜ್ಞಾನಿ ಅಲ್ಲಾಮ ಇಕ್ಬಾಲ್‌ನ ಸಮಾಧಿಯಿದೆ. ರಾಜ್ಯದ ರಕ್ಷಣಾದಳದವರು ದಿವಂಗತ ಇಕ್ಬಾಲ್ ಮಹಾಕವಿಗೆ ಪ್ರತಿದಿನ ಗೌರವ ಸಲ್ಲಿಸುವುದು ಇಲ್ಲಿ ಮೊದಲಿನಿಂದಲೂ ನಡೆದುಕೊಂಡು ಬರುತ್ತಿರುವ ಸಂಪ್ರದಾಯ.

ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸ್ಫೂರ್ತಿ ನೀಡಿದವರಲ್ಲಿ ಅಲ್ಲಾಮ ಇಕ್ಬಾಲನೂ [illegible] ಸಮಾಧಿಯ ಮೇಲೆ ಆತನು ಬರೆದ ಕವನಗಳನ್ನು ಕೆತ್ತಲಾಗಿದೆ. ಈ ಮಹಾನ್ ಕವಿಯ ನೆನಪಿಗೆ ನಾನೂ ನಮನಗಳನ್ನು ಸಲ್ಲಿಸಿದೆ. ನಾವು ಆ ಬೃಹತ್ ಆವರಣದಲ್ಲಿದ್ದ ಮತ್ತೊಂದು ವಿಶಾಲ ಉದ್ಯಾನವನವನ್ನು ತಲುಪುವ ವೇಳೆಗೆ ಸಂಜೆಯಾಗಿತ್ತು.

ಉದ್ಯಾನವನದ ಮಧ್ಯಭಾಗದಲ್ಲಿ ಪಾಕಿಸ್ತಾನವನ್ನು ಒಂದು ಪ್ರತ್ಯೇಕ ಮುಸ್ಲಿಮ್ ರಾಷ್ಟ್ರವೆಂದು ಘೋಷಿಸಿದುದರ ಕುರುಹಾಗಿ ಮಿನಾರ್-ಇ-ಪಾಕಿಸ್ತಾನ್ ಎಂಬ ಎತ್ತರದ ಸ್ತಂಭವೊಂದನ್ನು ನಿರ್ಮಿಸಲಾಗಿದೆ. ಲಾಹೋರಿನ ಸಾವಿರಾರು ಜನ ವಯಸ್ಕರು, ಯುವಕರು ತಮ್ಮ ಸಂಜೆಗಳನ್ನು ಅಲ್ಲಿ ಕಳೆಯುತ್ತಾರೆ. ಆ ದೃಶ್ಯವನ್ನು ನೋಡುವುದೇ ಒಂದು ಅಪರೂಪದ ಅನುಭವ.

ಒಂದು ದಿನ ಅದಾವುದೋ ಇಂಜಿನಿಯರಿಂಗ್ ಕಾಲೇಜಿನ ವಿದ್ಯಾರ್ಥಿಗಳ ತಂಡವನ್ನು ಭೇಟಿಮಾಡುವ ಸಂದರ್ಭ ಒದಗಿಬಂತು. ಒಬ್ಬರನ್ನೊಬ್ಬರು ಕೈಕುಲುಕಿದ ನಂತರ ಅವರೆಲ್ಲರಿಂದ ಒಕ್ಕೊರಲಿನ ''ಸಲಾಮ್ ಸರ್, ತಾವು ಇಂಡಿಯಾದಿಂದ ಬಂದಿರುವವರಲ್ಲವೇ ?'' ಎಂಬ ಪ್ರಶ್ನೆ. ಸರಿ ಅವರೊಡನೆ ಸುಮಾರು ಹೊತ್ತು ಹರಟೆ. ಭಾರತದ ಬಗ್ಗೆ ಅವರ ಅನಿಸಿಕೆಗಳೇನು ಎಂದು ತಿಳಿದುಕೊಳ್ಳ ಬೇಕೆಂಬ ಕುತೂಹಲ ನನಗೆ. ಅವರೆಲ್ಲರಿಗೂ ತಮ್ಮ ರಾಷ್ಟ್ರವು ಭಾರತದೊಡನೆ ಸೌಹಾರ್ದಯುತ ಸಂಬಂಧಗಳನ್ನು ಬೆಳೆಸಿಕೊಳ್ಳಬೇಕೆಂಬ ಹಂಬಲ, ಭಾರತಕ್ಕೊಮ್ಮೆ ಭೇಟಿ ನೀಡಬೇಕೆಂಬ ಮಹದಾಶಯ. ''ನಾವು ಭಾರತದ ಪ್ರವಾಸ ಮಾಡಬೇಕೆಂದಿದ್ದೇವೆ. ವೀಸಾ ಸಿಗುವುದು ಬಹಳ ಕಷ್ಟವೇ ಸರ್ ?'' ಎಂಬ ಅವರ ಪ್ರಶ್ನೆಯಲ್ಲಿ ಬಹಳ ಆತಂಕವಿತ್ತು. ''ಅದೇನು ಅಂತಹ ಸಮಸ್ಯೆಯಲ್ಲ ಬಿಡಿ'' ಎಂದು ಭರವಸೆ ನೀಡಿ ಅವರ ಆಶಯಗಳಿಗೆ ಸ್ಪಂದಿಸುವ ದಿಶೆಯಲ್ಲಿ ''ನಾವೆಲ್ಲರೂ ಒಂದು ದಿನ ನಮ್ಮ ಎರಡೂ ರಾಷ್ಟ್ರಗಳ ನಡುವಿನ ಗಡಿಯನ್ನು ಅಳಿಸಿಹಾಕೋಣ'' ಎಂದೆ. ಆ ಯುವಕರು ಅತ್ಯುತ್ಸಾಹದಿಂದ ''ಸರ್ ನಿಮಗೊಂದು ಸಲಾಮ್. ನಾವು ನಿಮ್ಮೊಂದಿಗಿದ್ದೇವೆ'' ಎಂದರು. ಅವರ ಆನಂದ ಹೇಳತೀರದು. ಇನ್ನೇನು ಬೀಳ್ಕೊಡುವ ಸಮಯ. ''ಸರ್ ನಮ್ಮನ್ನು ಮರೆಯಬೇಡಿ. ಅದರಲ್ಲೂ ನನ್ನನ್ನು ಸರ್. ನಾನು ವಫಾ (ವಫಾ ಭಟ್) ಅಂತ'' ಎಂಬ ಇಂಪಾದ ಧ್ವನಿಯೊಂದು ಆ ಗುಂಪಿನ ಯಾರಿಂದಲೋ ಕೇಳಿಬಂತು. ಹಿಂತಿರುಗಿ ನೋಡಿದೆ. ನನ್ನ ಅಣ್ಣನ ಮಗಳ ಧ್ವನಿ ನೆನಪಿಗೆ ಬಂದು ಭಾರ ಹೃದಯದಿಂದ ಅಲ್ಲಿಂದ ಅತಿಥಿಗೃಹದತ್ತ ಹೆಜ್ಜೆ ಹಾಕಿದೆ.

ಪ್ರತಿದಿನ ಅಧಿವೇಶನ ಮುಗಿದ ನಂತರ ಲಾಹೋರಿನ ಯಾವುದಾದರೊಂದು ಪ್ರಮುಖ ಸ್ಥಳದಲ್ಲಿ ದೊಡ್ಡ ಔತಣಕೂಟಗಳು ಜರುಗುತ್ತಿದ್ದವು. ಅಂತಹ ಔತಣಕೂಟಗಳಲ್ಲೊಂದು ಲಾಹೋರಿನ ಹೃದಯಭಾಗದಲ್ಲಿರುವ ಜಿನ್ನಾಬಾಗ್‌ನಲ್ಲಿ ಜರುಗಿದ್ದು ಇನ್ನೂ ನನ್ನ ನೆನಪಿನಲ್ಲಿ ಹಸುರಾಗಿದೆ. ಜಿನ್ನಾಬಾಗ್ ಅತ್ಯಂತ ವಿಶಾಲವಾದ ಉದ್ಯಾನವನ. ಸ್ವಾತಂತ್ರ್ಯ ಪೂರ್ವದ ಕಾಲದಲ್ಲಿ ಬ್ರಿಟಿಷರ ಪ್ರತಿನಿಧಿ ಲಾರೆನ್ಸ್ ಕುಟುಂಬದವರು ಜಗತ್ತಿನೆಲ್ಲೆಡೆಯಿಂದ ಅಪರೂಪದ ತಳಿಗಳನ್ನು ತರಿಸಿ ಈ ಉದ್ಯಾನವನದಲ್ಲಿ ನೆಡಿಸಿದ್ದರಂತೆ. ಇಂದು ಅವೆಲ್ಲವೂ ಬೆಳೆದುನಿಂತಿರುವ ದೃಶ್ಯ



ನಯನ ಮನೋಹರ. ಅಂದು ರಾತ್ರಿ ಇಡೀ ಜಿನ್ನಾಬಾಗ್ ಒಂದು ಕನಸಿನ ಪ್ರಪಂಚವಾಗಿ ಮಾರ್ಪಟ್ಟಿತ್ತು. ಎಲ್ಲೆಲ್ಲೂ ಬಣ್ಣಬಣ್ಣದ ದೀಪಗಳು, ಸುಗಂಧಗಳು, ಬಲೂನುಗಳು, ಹೂಗಳು, ಕಾರಂಜಿಗಳು. ಅಲ್ಲಲ್ಲಿ ಆ ನೆಲದ ಸಾಂಪ್ರದಾಯಿಕ ಹಾಡುಗಳು, ಕುಣಿತಗಳು, ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳು, ಪಂಜಾಬಿನ ಹತ್ತು ಹಲವು ಬಗೆಯ ಸಾಂಪ್ರದಾಯಿಕ ಮತ್ತು ಆಧುನಿಕ ಉಡುಪುಗಳನ್ನು ಧರಿಸಿ ಸಂಭ್ರಮದಿಂದ ಅಡ್ಡಾಡುತ್ತಿದ್ದವರು – ಎಲ್ಲವನ್ನು ನೋಡುವುದೇ ಒಂದು ಮೋಜು. ಊಟಕ್ಕಂತೂ ಪಂಜಾಬಿ ಶೈಲಿಯಲ್ಲಿ ಸಿದ್ಧಪಡಿಸಿದ ತರಹೇವಾರಿ ಸಸ್ಯಾಹಾರಿ ಮತ್ತು ಮಾಂಸಾಹಾರಿ ಖಾದ್ಯಗಳು, ಸಿಹಿತಿಂಡಿಗಳು, ಐಸ್‌ಕ್ರೀಮ್, ತಂಪಾದ ಪಾನೀಯಗಳು (ಮದ್ಯಪಾನವನ್ನು ಹೊರತು ಪಡಿಸಿ). ಅಂದಿನ ಸಂಗೀತ, ನೃತ್ಯ, ಊಟ ಎಲ್ಲವೂ ಲಾಹೋರಿನ ಭವ್ಯ ಸಂಸ್ಕೃತಿಯನ್ನು ಪ್ರತಿನಿಧಿಸುವಂತಿದ್ದವು. ನಾನು ದೆಹಲಿಯಿಂದ ಹೊರಡುವ ಮುನ್ನ ಲಾಹೋರಿನಲ್ಲಿ ವಾಸ್ತವ್ಯ ಹೂಡಲು ನನಗೆ ನೆರವಾಗಿದ್ದ ಡಾ॥ ಸುರೇಶ್ ಶರ್ಮ ಅವರು ಹೇಳಿದ್ದ ''ರಾಜೇಂದ್ರ, ಪಂಜಾಬಿಗಳು ಎಷ್ಟು ಒಳ್ಳೆಯ ಮನಸ್ಸಿನವರು, ಉದಾರಿಗಳು ಎಂಬುದು ಇನ್ನು ಕೆಲವೇ ದಿನಗಳಲ್ಲಿ ನಿನ್ನ ಅನುಭವಕ್ಕೆ ಬರಲಿದೆ'' ಎಂದು ಹೇಳಿದ ಮಾತುಗಳು ನೆನಪಿಗೆ ಬಂದವು. ಶರ್ಮರ ಮಾತುಗಳು ಎಷ್ಟು ಸರಿ, ಅಲ್ಲವೇ! ಎಂದು ನನಗೆ ನಾನೇ ಹೇಳಿಕೊಂಡು ಸುಮ್ಮನಾದೆ.

ಲಾಹೋರ್‌ನಿಂದ ಹೊರಡುವ ಮುನ್ನ ಖ್ಯಾತ ಇಕ್ಬಾಲ್ ಅಕಾಡೆಮಿಗೆ ಭೇಟಿ ನೀಡಿ ಅಲ್ಲಿನ ಸಿಬ್ಬಂದಿಯ ಪರಿಚಯ ಮಾಡಿಕೊಂಡೆ. ಅಕಾಡೆಮಿಯ ಉಪನಿರ್ದೇಶಕ ಶ್ರೀ ಇರ್ಷಾದ್ ಅವರದು ಬಹಳ ಆಪ್ಯಾಯಮಾನವಾದ ವ್ಯಕ್ತಿತ್ವ. ಅವರ ಗಡ್ಡ ಅದಕ್ಕೆ ಇನ್ನೂ ಹೆಚ್ಚು ಮೆರಗು ನೀಡಿತ್ತು.

ಭಾರತ - ಪಾಕಿಸ್ತಾನ ಎರಡೂ ರಾಷ್ಟ್ರಗಳ ನಡುವಣ ಸಂಬಂಧಗಳು, ಸಾಂಸ್ಕೃತಿಕ ಸಂಘಟನೆಗಳು, ಸಾಹಿತ್ಯ, ಕವಿ ಇಕ್ಬಾಲ್. ಹೀಗೆ ಹಲವಾರು ವಿಷಯಗಳ ಬಗ್ಗೆ ಸುಮಾರು ಹೊತ್ತು ಹರಟೆ. ಭಾರತ, ಪಾಕಿಸ್ತಾನ ನಡುವಣ ಸಮಸ್ಯೆಗಳ ಕುರಿತಂತೆ ನಾವಿಬ್ಬರೂ ಸಮಾನ ಮನಸ್ಕರು ಎಂಬ ಅಭಿಪ್ರಾಯ ಅಂದಿನ ಮೊದಲ ಭೇಟಿಯಲ್ಲೇ ಮೂಡಿದುದರಲ್ಲಿ ಅಚ್ಚರಿಯೇನಿಲ್ಲ. ಬೀಳ್ಕೊಡುವಾಗ ಇರ್ಷಾದ್ ಅವರಿಗೆ ನಾನು ''ಖುದಾ ಹಫೀಜ್'' ಎಂದು ಹೇಳಲು ಮರೆಯಲಿಲ್ಲ. ನಾವು ಹೊರಡುವ ಮುನ್ನಾ ದಿನ ಮತ್ತೆ ಅಕಾಡೆಮಿಗೆ ಭೇಟಿ ನೀಡಿದೆ. ಇರ್ಷಾದ್ ಸಾಬ್ ಪ್ರೀತಿಯಿಂದ ಬರಮಾಡಿ ಕೊಂಡರು. ಬಹಳ ಹೊತ್ತು ಎರಡೂ ರಾಷ್ಟ್ರಗಳ ನಡುವೆ ಜರುಗಬೇಕಾಗಿರುವ ಸಾಂಸ್ಕೃತಿಕ ವಿನಿಮಯಗಳು, ವೀಸಾ ಸಮಸ್ಯೆ, ಅವರು ಹಿಂದೊಮ್ಮೆ ಭಾರತಕ್ಕೆ ನೀಡಿದ ಭೇಟಿಯ ಅನುಭವಗಳು, ಮುಂದಿನ ದಿನಗಳಲ್ಲಿ ಅವರು ನೀಡಬೇಕಾಗಿರುವ ಭೇಟಿ ಮುಂತಾದ ವಿಚಾರಗಳ ಬಗ್ಗೆ ಮಾತನಾಡಿದೆವು. ನಡುನಡುವೆ ತಿಂಡಿ ತಿನಿಸು, ಕಾಫಿ. ಅಲ್ಲಿಂದ ಹೊರಡಲು ಸಿದ್ಧನಾಗುತ್ತಿದ್ದಂತೆ ಇರ್ಷಾದ್ ಕುರ್ಚಿಯಿಂದ ಎದ್ದುಬಂದು ನನ್ನನ್ನು ಆಲಂಗಿಸಿಕೊಂಡು

**ಬೆಲೆ ಗಗನಕ್ಕೆ ; ಜನತೆ ತತ್ತರ**



ನಾನು ಜೀವನದಲ್ಲಿ ಎತ್ತರಕ್ಕೆ ಏರುತ್ತೇನಮ್ಮ... ಬೆಲೆಗಳಷ್ಟು ಎತ್ತರಕ್ಕೇರುತ್ತೇನಮ್ಮ...

''ರಾಜೇಂದರ್‌ಜೀ, ಇಂದು ಒಬ್ಬ ಸುಸಂಸ್ಕೃತ ಸ್ನೇಹಪರ ವ್ಯಕ್ತಿಯನ್ನು ಭೇಟಿ ಮಾಡಿರುವುದು ನನಗೆ ತುಂಬ ಖುಷಿ ತಂದಿದೆ'' ಎನ್ನುತ್ತ ನನ್ನನ್ನು ಬೀಳ್ಕೊಟ್ಟರು. ಲಾಹೋರ್ ಭೇಟಿಯ ಸಂದರ್ಭದಲ್ಲಿ ನನ್ನ ಅನುಭವಕ್ಕೆ ಬಂದ ಭಾವುಕ ಕ್ಷಣಗಳನ್ನು ಎಂದಿಗೂ ಮರೆಯಲಾರೆ.

ಸರಿ, ಇನ್ನು ಸ್ವದೇಶಕ್ಕೆ ಪ್ರಯಾಣ ಬೆಳೆಸುವ ತರಾತುರಿ. ನೇರ ಅತಿಥಿಗೃಹಕ್ಕೆ ಧಾವಿಸಿ ನಾನು ತಂಗಿದ್ದ ಕೊಠಡಿಯ ಬಾಡಿಗೆ ಎಷ್ಟಾಗಿದೆ ಎಂದು ಕೇರ್‌ಟೇಕರ್ ಬಷೀರ್ ಅಹ್ಮದ್‌ರನ್ನು ವಿಚಾರಿಸಿದೆ. ''ಬಾಕಿ ಯಾವುದೂ ಇಲ್ಲ. ಎಲ್ಲವನ್ನೂ ನಿಮ್ಮ ಸ್ನೇಹಿತ ಅಬ್ಬಾಸ್ ಸಿದ್ದಿಕಿ ಪಾವತಿಸಿ ಹೋಗಿದ್ದಾರೆ'' ಎಂದ ಬಷೀರ್ ಅಹ್ಮದ್. ಒಂದು ಕ್ಷಣ ಮಾತೇ ಹೊರಡದಂತಾಯಿತು. ಸ್ವಲ್ಪ ಸಮಯದ ನಂತರ ಅಬ್ಬಾಸ್, ಅವನ ಮಡದಿ ಮತ್ತು ಸುಂದರವಾದ ಬೊಂಬೆಗಳಂತಿದ್ದ ಮೂವರು ಹೆಣ್ಣುಮಕ್ಕಳು ನನಗೆ ವಿದಾಯ ಹೇಳಲು ಪ್ರತ್ಯಕ್ಷರಾದರು. ಎಲ್ಲರೂ ಸಿಹಿ ತಿಂಡಿಯನ್ನು ಹಂಚಿಕೊಂಡು ತಿಂದೆವು. ನಮ್ಮಿಬ್ಬರ ಕ್ಯಾಮರಾಗಳು ಬ್ಯುಸಿ ಆದವು. ಅಲ್ಲಿಂದ ಹೊರಡುವಾಗ ಶ್ರೀಮತಿ ಅಬ್ಬಾಸ್ ''ಭಾಯಿಸಾಬ್, ಪಾಕಿಸ್ತಾನದಲ್ಲೂ ನಿಮ್ಮದೊಂದು ಮನೆ ಇದೆ ಎಂದು ಭಾವಿಸಿ ಮತ್ತೊಮ್ಮೆ ಬರುವಾಗ ದಯವಿಟ್ಟು ನಿಮ್ಮ ಕುಟುಂಬದವರೊಂದಿಗೆ ನಮ್ಮಲ್ಲಿಗೆ ಬನ್ನಿ'' ಎಂದಾಗ ಕಣ್ಣುಗಳು ಮಂಜಾದವು. ಪ್ರೀತಿ, ಪ್ರೇಮ, ಪರಸ್ಪರ ಗೌರವ ಎಂಬಂತಹ ಮಾನವೀಯ ಮೌಲ್ಯಗಳಿಗೆ ಯಾವ ಗಡಿ ಇರಲು ಸಾಧ್ಯ, ಪರಸ್ಪರ ಅನ್ಯೋನ್ಯತೆಯಿಂದ ವರ್ತಿಸಲು ಇತರರ ಹಂಗೇಕೆ, ಎಂಬಂತಹ ಭಾವನೆಗಳು ಉಕ್ಕಿಬಂದವು.

ಪಾಕಿಸ್ತಾನದ ಜನಜೀವನದ ಬಗ್ಗೆ ಹರಟುತ್ತ ಅತಿಥಿ ಗೃಹದ ನೌಕರರೊಂದಿಗೆ ಮಿಕ್ಕ ಸಮಯವನ್ನು ಕಳೆದೆ. ಮರುದಿನ ಅಕ್ಟೋಬರ್ ೧೭ರಂದು ಮುಂಜಾನೆ 'ದೋಸ್ತಿ' ಬಸ್ಸಿನಲ್ಲಿ ಕೂರುತ್ತಲೇ ಪಾಕಿಸ್ತಾನಕ್ಕೆ ವಿದಾಯ ಹೇಳಿದೆ. ಅಬ್ಬ! ಎಂತೆಂತಹ ಕ್ಷಣಗಳು, ಎಂತೆಂತಹ ಜನ, ಎಂತೆಂತಹ ಬಾಂಧವ್ಯಗಳು!

ಲಾಹೋರ್ ಭೇಟಿಯ ಮೂಲಕ ಮಾನವೀಯ ಸಂಬಂಧಗಳ ಕುರಿತು ನಾನು ಗಳಿಸಿದ ಅನುಭವಗಳೇ ಬೇರೆ; ಭಾರತೀಯ ಹಾಗೂ ಪಾಕಿಸ್ತಾನೀ ಮಾಧ್ಯಮಗಳು ಬಿಂಬಿಸುತ್ತಿರುವ, ಜನಸಾಮಾನ್ಯರು ಹೊಂದಿರುವ ಅಭಿಪ್ರಾಯಗಳೇ ಬೇರೆ. ಪಾಕಿಸ್ತಾನದ ಬಗ್ಗೆ, ಮುಸ್ಲಿಮರ ಬಗ್ಗೆ ಪೂರ್ವಗ್ರಹಪೀಡಿತ, ಆಧಾರವಿಲ್ಲದ ಸುಳ್ಳು ವರದಿಗಳು ಲೆಕ್ಕವಿಲ್ಲದಷ್ಟು ಪ್ರಕಟವಾಗುತ್ತಿರುವುದು ಬೇಸರದ ಸಂಗತಿ. ಇಂತಹ ಎಲ್ಲ ಪತ್ರಕರ್ತರು, ಸುದ್ದಿ ಮಾಧ್ಯಮದವರು ಲಾಹೋರ್‌ಗೆ ಒಮ್ಮೆಯಾದರೂ ಭೇಟಿ ನೀಡಿ ಸತ್ಯದ ದರ್ಶನ ಪಡೆಯುವುದು ಸೂಕ್ತ. ಯುವಕರಾದಿಯಾಗಿ ಪಂಜಾಬಿನ ಎಲ್ಲ ಜನಸಾಮಾನ್ಯರು ಭಾರತದ ಬಗ್ಗೆಯಾಗಲೀ, ಭಾರತೀಯರ ಬಗ್ಗೆಯಾಗಲೀ ಕಿಂಚಿತ್ ದ್ವೇಷಭಾವನೆಯನ್ನೂ ವ್ಯಕ್ತಪಡಿಸಲಿಲ್ಲ. ಇದು ನನ್ನ ಸ್ವಂತ ಅನುಭವದ ಮಾತು.

ಅವರೆಲ್ಲರಿಗೂ ಪಾಕಿಸ್ತಾನವು ಭಾರತದೊಡನೆ ಶಾಂತಿಯುತ ಸಹಬಾಳ್ವೆ, ಸೌಹಾರ್ದಯುತ ಸಂಬಂಧಗಳನ್ನು ಹೊಂದಿರಬೇಕೆಂಬ ಉತ್ಕಟ ಆಕಾಂಕ್ಷೆಯಿದೆ. ತಮಗೆ ಶಾಂತಿ (ಅಮನ್) ಬೇಕೆಂಬುದು ಅಲ್ಲಿನ ಜನಸಾಮಾನ್ಯರ ಕಳಕಳಿಯ ಬೇಡಿಕೆಯಾಗಿದೆ. ಇದು, ಎರಡೂ ರಾಷ್ಟ್ರಗಳ ಜನರು ೧೯೪೭ರಲ್ಲಿ ಭಾರತ-ಪಾಕಿಸ್ತಾನ ಪ್ರತ್ಯೇಕಗೊಂಡ ಕರಾಳ ದಿನಗಳನ್ನು ಮರೆತು ನಮ್ಮ ಮುಂದಿನ ಪೀಳಿಗೆಯವರಿಗೆ ನೆಮ್ಮದಿಯ ನಾಳೆಗಳನ್ನು ನಿರ್ಮಿಸಲು ಹೆಜ್ಜೆ ಇಡಬೇಕಾಗಿರುವ ಸಂದರ್ಭ. ಇಲ್ಲಿ, ''ನಾವಿಬ್ಬರೂ ಒಂದೇ ಮನುಷ್ಯ ಜಾತಿಗೆ ಸೇರಿದವರು. ನಮಗೆ ಭವ್ಯವಾದ ಸಾಂಸ್ಕೃತಿಕ ಪರಂಪರೆಯಿದೆ'' ಎಂಬ ಅಶೋಕ ದಳವಾಯಿ ಅವರ ಮಾತುಗಳು ನೆನಪಿಗೆ ಬರುತ್ತವೆ.

ನಮ್ಮೆರಡೂ ರಾಷ್ಟ್ರಗಳ ಜನರ ನಡುವೆ, ಸಂಸ್ಥೆಗಳ ನಡುವೆ ವಿವಿಧ ಮಟ್ಟಗಳಲ್ಲಿ ಸಂಪರ್ಕಗಳು ವಿನಿಮಯಗಳು ಹೆಚ್ಚು ಹೆಚ್ಚು ಜರುಗಬೇಕಿದೆ. ಕೆಲವು ಜಾಗತಿಕ ಶಕ್ತಿಗಳು ನಮ್ಮೀ ಉಪಖಂಡದ ಜನರ ನಡುವೆ ಅನಗತ್ಯ ಭಿನ್ನಾಭಿಪ್ರಾಯಗಳನ್ನು, ಪರಸ್ಪರ ದ್ವೇಷವನ್ನು ಉಂಟುಮಾಡಲು ಪ್ರಯತ್ನಿಸುವುದು ಇಂದು ನೆನ್ನೆಯದಲ್ಲ. ಈ ಕುರಿತು ಜನರಲ್ಲಿ ಎಚ್ಚರ ಮೂಡಿಸುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ.

ಭಾರತ ಪಾಕಿಸ್ತಾನ ರಾಷ್ಟ್ರಗಳ ನಡುವೆ ಭಾವನಾತ್ಮಕ ಸಂಬಂಧಗಳು ಬೆಳೆಯಬೇಕಿದೆ ಎಂದ ಮಾತ್ರಕ್ಕೆ ಭಯೋತ್ಪಾದನೆ, ಜಮ್ಮು-ಕಾಶ್ಮೀರ ಸಮಸ್ಯೆ, ನದಿ ನೀರಿನ ಹಂಚಿಕೆ ಇವುಗಳನ್ನು ಕಡೆಗಣಿಸಲಾಗದು. ಯಾವತ್ತಿಗೂ ಈ ಎಲ್ಲ ಸಮಸ್ಯೆಗಳನ್ನು ರಾಜಕೀಯ ವೇದಿಕೆಗಳ ಮೂಲಕ, ಮಾತುಕತೆಗಳ ಮೂಲಕ ಬಗೆಹರಿಸಿಕೊಳ್ಳಬಹುದಾದ ಸಾಧ್ಯತೆಗಳಿವೆ. ನಮ್ಮೆರಡೂ ರಾಷ್ಟ್ರಗಳ ನಡುವೆ ಗಡಿಯೇ ಇಲ್ಲದಂತಹ ದಿನಗಳನ್ನು ಎದುರುನೋಡೋಣ. ಅಂತೆಯೇ ದಕ್ಷಿಣ ಏಷಿಯಾ ರಾಷ್ಟ್ರಗಳು ಶಾಂತಿಯುತ ಸಹಬಾಳ್ವೆಯಿಂದಿದ್ದು ಆರ್ಥಿಕ ಪ್ರಗತಿ ಸಾಧಿಸುವಂತಾಗಲು ನಾವೆಲ್ಲರೂ ಶ್ರಮಿಸಲು ಒಂದಾಗೋಣ.

ಡಾ॥ ರಾಜೇಂದ್ರ ಪೋದ್ದಾರ್
ಸಹ ಪ್ರಾಧ್ಯಾಪಕರು, ಕೃಷಿ ಅರ್ಥಶಾಸ್ತ್ರ ವಿಭಾಗ
ಕೃಷಿ ಮಹಾ ವಿದ್ಯಾಲಯ, ವಿಜಾಪುರ - ೫೮೬ ೧೦೧

ಹೆಸರಾಂತ ಆಂಗ್ಲ ಪತ್ರಿಕೆಯೊಂದರಲ್ಲಿ ಬಂದ ವರದಿಯೊಂದು ಹೀಗಿತ್ತು – ''ಭಾರತದ ಬಗೆಗಿನ ಸಿನಿಮಾವೊಂದು ವಿದೇಶಗಳಲ್ಲಿ ಪ್ರಶಸ್ತಿಗಳನ್ನು ಬಾಚಿಕೊಳ್ಳುತ್ತಿರುವುದು ಪ್ರತಿಯೊಬ್ಬ ಭಾರತೀಯನೂ ಹೆಮ್ಮೆ ಪಡತಕ್ಕಂತಹ ವಿಷಯ...''

ಇದಕ್ಕೆ ಪ್ರತಿಯಾಗಿ ಓದುಗರೊಬ್ಬರು ಬರೆದ ಪತ್ರ – ''ಕಲೆಯ ಮುಖ್ಯ ಕರ್ತವ್ಯವೆಂದರೆ ವಾಸ್ತವವನ್ನು ಪ್ರತಿಬಿಂಬಿಸುವುದು. ಆ ದೃಷ್ಟಿಯಲ್ಲಿ 'ಸ್ಲಂಡಾಗ್ ಮಿಲಿಯನೇರ್' ಒಂದು ಅದ್ಭುತ ಚಿತ್ರ.''

ಕೆಲವು ವಾರಗಳ ಹಿಂದೆ, ದುರ-ದರ್ಶನದ ವಾಹಿನಿಗಳಲ್ಲಿ ಈ ಚಿತ್ರದ ಬಗ್ಗೆ ಪ್ರಶಂಸೆಯ ಸುರಿಮಳೆ. ಆಸ್ಕರ್ ಪ್ರಶಸ್ತಿ ಪಡೆದಾದ ಮೇಲಂತೂ ಈ ಪ್ರವೃತ್ತಿ ಪರಾಕಾಷ್ಠೆ ತಲುಪಿತ್ತು. ರಾಜೀವ್ ಮಸಂದ, ಖಾಲಿದ್ ಮೆಹಮೂದ್‌ರಂತಹ ಹೆಸರಾಂತ



# ಏಕಿಷ್ಟು ಅಬ್ಬರ...?! 'ಸ್ಲಂಡಾಗ್ ಮಿಲಿಯನೇರ್'

## ಸಿನಿಮಾದ ಬಗ್ಗೆ ಒಂದು ಅಭಿಪ್ರಾಯ

**ರಾಜೇಶ ಎನ್. ನಾಯ್ಕ**

ವಿಮರ್ಶಕರೂ ಮಾತಾಡಿದ್ದೂ ಉತ್ಪ್ರೇಕ್ಷೆಯ ದನಿಯಲ್ಲೆ. ಈ ಸಿನಿಮಾದಲ್ಲಿ ತೋರಿಸಿದ ಮುಂಬೈ ಕೊಳಚೆವಾಸಿಗಳ ದುರ್ಭರ ಜೀವನಕ್ಕಿಂತಲೂ ಹೆಚ್ಚು ಅಸಹ್ಯ ಹುಟ್ಟಿಸುತ್ತಿದ್ದುದು, ಅದರ (ಸಿನಿಮಾದ) ಬಗ್ಗೆ ಭಾರತದಲ್ಲಿ ಬಂದಂತಹ ವಿಮರ್ಶೆಗಳು. ಈ ಕೃತಿಯನ್ನು ಒಂದು ಸಿನಿಮಾದ ರೀತಿಯಲ್ಲಿ ವಿಶ್ಲೇಷಿಸದೆ, ಪಾಶ್ಚಿಮಾತ್ಯರ ದೃಷ್ಟಿಕೋನದಲ್ಲೇ, ಅದು ಪಡೆದಂತಹ ಪ್ರಶಸ್ತಿಯ ನೆರಳಿನಲ್ಲೇ ನೋಡಿ, – ಅದನ್ನೇ ಸಮಸ್ತ ಭಾರತೀಯರ ಅಭಿಪ್ರಾಯ ಎಂಬಂತೆ ಬಿಂಬಿಸುವಂತಹ ಪ್ರವೃತ್ತಿ ನಮ್ಮ ಸಾಂಸ್ಕೃತಿಕ ದಿವಾಳಿತನಕ್ಕೆ ಹಿಡಿದ ಕನ್ನಡಿಯಾಗಿದೆ. ಈ ಚಿತ್ರವನ್ನು ಹೊಗಳಿದ್ದಷ್ಟೇ ಅಲ್ಲ, ಇದರ ವಿರುದ್ಧ ಬಂದಂತಹ ವಿಮರ್ಶೆಗಳನ್ನೂ ಬಾಲಿಶ ಎಂದು ಹೀಗಳೆಯುವ ಮನೋಭಾವವು ಕೂಡ ನಮ್ಮೀ ಉದಾರೀಕೃತ ಭಾರತದಲ್ಲಿ ಉದ್ಭವಿಸುತ್ತಿರುವ ದಿವಾಳಿತನದ ಪ್ರತೀಕವಷ್ಟೆ!

೫ - ವಿಮರ್ಶಕರ ಆಯ್ಕೆ ಪ್ರಶಸ್ತಿ
೪ - ಗೋಲ್ಡನ್ ಗ್ಲೋಬ್ ಪ್ರಶಸ್ತಿ
೭ - ಬಾಫ್ಟಾ ಪ್ರಶಸ್ತಿ
೮ - ಆಸ್ಕರ್ ಪ್ರಶಸ್ತಿ

ಇಷ್ಟೆಲ್ಲಾ ಪ್ರಶಂಸೆಗೆ ಒಳಗಾದ 'ಸ್ಲಂಡಾಗ್ ಮಿಲಿಯನೇರ್' ಚಿತ್ರದಲ್ಲಿ ಇರುವುದಾದರೂ ಏನು ? ಇದೊಂದು ನಮ್ಮ ಕಾಲದ ಅದ್ಭುತ ಕಲಾಕೃತಿಯೇ ? ಇದರ ಯಶಸ್ಸಿನ ಗುಟ್ಟಾದರೂ ಏನು ?

ಈ ಸಿನಿಮಾಗೆ ಮೂಲ ಪ್ರೇರಣೆ, ಭಾರತೀಯ ವಿದೇಶಾಂಗ ಸೇವೆಯ ಅಧಿಕಾರಿ ವಿಕಾಸ ಸ್ವರೂಪ್ ಎಂಬಾತ ಬರೆದಂತಹ ಪ್ರಶ್ನೆ-ಉತ್ತರ ಪುಸ್ತಕ. ಭಾರತದಲ್ಲಿ ಅಷ್ಟಾಗಿ ಹೆಸರು ಮಾಡಿರದಿದ್ದರೂ ಈ ಪುಸ್ತಕ ವಿದೇಶಗಳಲ್ಲಿ ಭರ್ಜರಿಯಾಗಿ ಮಾರಾಟವಾಗಿತ್ತು. ಈಗೊಂದು ವರ್ಷದ ಹಿಂದೆ ನನ್ನ ವಿದೇಶಿ ಗೆಳೆಯರೊಬ್ಬರು (ಅವರಿನ್ನೂ ಭಾರತವನ್ನು ನೋಡಿಲ್ಲ) ಈ ಪುಸ್ತಕ ಓದಿ, ಇಲ್ಲಿಯ ಸಮಾಜ ಅದರಲ್ಲೂ ಮಕ್ಕಳ ಜೀವನ ಸ್ಥಿತಿಯ ಬಗ್ಗೆ ವ್ಯಕ್ತಪಡಿಸಿದ ಅಭಿಪ್ರಾಯ ಕೇಳಿ ನನಗೆ ಆಶ್ಚರ್ಯವಾಗಿತ್ತು. ಚಿತ್ರವನ್ನು ನೋಡಿದ ಮೇಲೆ ಅವರ ಅಭಿಪ್ರಾಯದ ಹಿಂದಿರುವ ಕಾರಣ ತಿಳಿಯಿತು. ಈ ಪುಸ್ತಕವನ್ನು ಚಿತ್ರಕಥೆಗೆ ಇಳಿಸಿದ್ದು ಸೈಮನ್ ಬೀಫಾಯ್; ಚಿತ್ರದ ನಿರ್ದೇಶಕರು ಬ್ರಿಟನ್‌ನ ಹೆಸರಾಂತ ನಿರ್ದೇಶಕ ಡ್ಯಾನಿ ಬಾಯ್ಲ್. ಇದಿಷ್ಟು ಕಥೆಯ ತಿರುಳು. – ಹೀಗೆ ಮುಂಬೈನ ಕೊಳಚೆ ಪ್ರದೇಶದಲ್ಲಿ ಬೆಳೆದ ಹುಡುಗನೊಬ್ಬ 'ಕೌನ್ ಬನೇಗಾ ಕರೋಡ್‌ಪತಿ' ಸ್ಪರ್ಧೆಯಲ್ಲಿ ಗೆದ್ದು ಎಲ್ಲರೂ ಹುಬ್ಬೇರಿಸುವಂತೆ ಮಾಡುತ್ತಾನೆ. ಅದು ಹೇಗೆ ಒಬ್ಬ ಸ್ಲಂ-ವಾಸಿ ಎಲ್ಲಾ ಪ್ರಶ್ನೆಗಳಿಗೂ ನಿಖರವಾಗಿ ಉತ್ತರಿಸಿ ಇಪ್ಪತ್ತು ಮಿಲಿಯನ್ ರೂಪಾಯಿಗಳನ್ನು ಗೆಲ್ಲಲು ಸಾಧ್ಯ ? ಸಂಘಟಕರ ಈ ಕುತೂಹಲಕ್ಕೆ ಸಾಥ್ ನೀಡುವ ಕೆಲಸ ಮುಂಬೈ ಪೊಲೀಸರದ್ದು. ಮುಂದುವರೆಯುತ್ತ ಗೊತ್ತಾಗುವುದು, ಹೇಗೆ ಸ್ಪರ್ಧೆಯಲ್ಲಿ ಕೇಳಿದ ಪ್ರತಿಯೊಂದು ಪ್ರಶ್ನೆಯೂ ಆ ಹುಡುಗನ ಜೀವನದಲ್ಲಿ ನಡೆದಿರುವ ಘಟನೆಗಳೊಂದಿಗೆ ತಾಳೆಹೊಂದಿತ್ತೆಂದು ಮಾನವೀಯ ಆಯಾಮ ಹೆಚ್ಚಿಸಲು, ಇವೆಲ್ಲದರ ನಡುವೆ ನಾಯಕನ ಬಾಲ್ಯಕಾಲದ ಪ್ರೇಮಕಥೆಯನ್ನು ಹೆಣೆಯಲಾಗಿದೆ.

ಚಿತ್ರ ಶುರುವಾಗುತ್ತಲೇ ಪ್ರೇಕ್ಷಕರೆದುರು ತೆರೆದುಕೊಳ್ಳುವುದು ನಾಯಕ ಜಮಾಲ್‌ನ ಬಾಲ್ಯ ಜೀವನ. ಮನೋಜ್ಞ ಸಂಗೀತ, ಆಹ್ಲಾದಕರ ಚಿತ್ರೀಕರಣ, ಬಾಲಕಲಾವಿದರ ಮನಮುಟ್ಟುವ ಅಭಿನಯ ಎಲ್ಲವೂ ನೋಡುಗರನ್ನು ಆವರಿಸುತ್ತಿದ್ದಂತೆ ಶುರುವಾಗುವುದು ಬಾಲಿಶ ನಿರೂಪಣೆಯ ಆರಂಭ – ಬಾಲಿವುಡ್ಡಿನ ಯಾವುದೇ ವ್ಯಾಪಾರಿ ಸರಕಿಗೆ ಕಡಿಮೆ ಇಲ್ಲದಂತೆ !

ಚಿತ್ರದ ಆರಂಭದಲ್ಲೇ ಹೀಗೊಂದು ದೃಶ್ಯ – ನಾಯಕ ಜಮಾಲ್ ಇನ್ನೂ ಚಿಕ್ಕ ಹುಡುಗ. ಆಳೆತ್ತರಕ್ಕೆ ಮಂದಹಲಗೆಯ ಮೇಲೆ ನಿರ್ಮಿತವಾದ, ಮೇಲ್ಛಾವಣಿಯಿಲ್ಲದ ಪಾಯಿಖಾನೆಯಲ್ಲಿ ಜಮಾಲ್ ಬಹಿರ್ದೆಸೆಗೆ ಕುಳಿತಿದ್ದಾನೆ. ಅದು ಮುಂಬೈ ಕೊಳಚೆ ಪ್ರದೇಶದಲ್ಲಿ ಸಾಮಾನ್ಯವಾಗಿ ( ? ) ಕಂಡುಬರುವ ಪಾಯಿಖಾನೆ – ಮಧ್ಯದಲ್ಲಿ ಇರುವ ದೊಡ್ಡ ತೂತು ಬಿಟ್ಟರೆ ಪಾಯಿಖಾನೆ ಎಂದು ಕರೆಸಿಕೊಳ್ಳಲು ಬೇರಾವುದೇ ಯೋಗ್ಯತೆ ಇಲ್ಲದ್ದು. ಜಮಾಲ್‌ನ ಅಣ್ಣ ಸಲೀಂ, ಬಾಗಿಲ ಹೊರಗೆ ಕಾಯುತ್ತಿದ್ದಾನೆ, ತನ್ನ ಸರದಿಗಾಗಿ - ಬೇಗ ಬಾ ಎಂದು ಬಾಗಿಲು ಬಡಿಯುತ್ತಾ. ಅಷ್ಟರಲ್ಲೇ ಅಲ್ಲೊಂದು ಹೆಲಿಕಾಪ್ಟರ್‌ನ ಆಗಮನ. ಅದರ ಹಿಂದೆ ಎದ್ದೇಳುವ ದನಿ ''ಅಮಿತಾಭ್ ಬಚ್ಚನ್ ಆಗಯಾ... !'' ಅಮಿತಾಭ್‌ನ ಹೆಸರು ಕೇಳಿದ್ದೆ ಸರಿ, ಮಾಡುವ ಕೆಲಸವನ್ನೂ ಅರ್ಧಕ್ಕೆ ನಿಲ್ಲಿಸಿ ಹೊರಡಲು ಅಣಿಯಾಗುತ್ತಾನೆ ಜಮಾಲ್. ಅಣ್ಣ ಸಲೀಂಗೆ ತಮ್ಮನ ಮೇಲೆ ಸಿಟ್ಟು. ಹೊರಗಿನಿಂದ ಬಾಗಿಲು ಹಾಕಿ ಸಲೀಂ ಓಡಿಹೋಗುತ್ತಾನೆ. ಜಮಾಲ್ ಏನು ಮಾಡುತ್ತಾನೆ... ? ಅಮಿತಾಭ್ ಬಚ್ಚನ್‌ನನ್ನು ನೋಡಲೇಬೇಕೆನ್ನುವ ತವಕ. ಬೇರೇನೂ ದಾರಿ ಕಾಣದೆ ಪಾಯಿಖಾನೆಯ ಮಧ್ಯದ ರಂಧ್ರದಲ್ಲೇ ಇಳಿದು ಕೆಳಗೆ ಶೇಖರವಾಗಿದ್ದ ಮಲದ ರಾಶಿಯಲ್ಲೇ ಮುಳುಗೆದ್ದು ಅಮಿತಾಭ್ ಇರುವಲ್ಲಿಗೆ ಓಡಿಹೋಗುತ್ತಾನೆ. ಮೈಯೆಲ್ಲಾ ಮೆತ್ತಿಕೊಂಡಿರುವ ಮಲದ ಸಮೇತ! ಆತನಿಗೆ ಅಮಿತಾಭ್‌ನ ಹಸ್ತಾಕ್ಷರ ಸಿಗುವುದು ಸತ್ಯವೋ ಸುಳ್ಳೋ ಅನ್ನುವುದು ಬೇರೆ ವಿಚಾರ, ಆದರೆ ಮಲದ ರಾಶಿಯಲ್ಲಿ ಮುಳುಗೇಳುವ ಪಾತ್ರದ ಮನಃಸ್ಥಿತಿಯ ಬಗ್ಗೆ ಏನನ್ನಿಸುತ್ತದೆ ? ಹೆಸರಾಂತ ವಿಮರ್ಶಕ ರಾಜೀವ ಮಸಂದ ಹೇಳುತ್ತಾರೆ: ''ಇಡೀ ಚಿತ್ರದ ಅತ್ಯಂತ ಹೃದಯಸ್ಪರ್ಶಿ ಘಟನೆ ಅದು. ಆ ಪಾತ್ರದ ಆಕಾಂಕ್ಷೆ - ಹೋರಾಟ - ವಿಜಯವನ್ನೂ ಸಂಕ್ಷಿಪ್ತವಾಗಿ ಸಾರಿ ಹೇಳುವ ದೃಶ್ಯ !''

ಇರಬಹುದು ! ಆದರೆ ಚಿತ್ರದ ಬಾಲಿಶ ನಿರೂಪಣಾ ಕ್ರಮ ಶುರುವಾಗುವುದೇ ಇಲ್ಲಿಂದ. ಮುಂಬೈನ ಯಾವುದೋ ಮೂಲೆಯಲ್ಲಿರುವ ಮಹಾನಗರ ಪಾಲಿಕೆಯಲ್ಲಿನ ಶಾಲೆಯೊಂದರಲ್ಲಿ ಪ್ರಾಥಮಿಕ ತರಗತಿಗೆ ಪಠ್ಯಭಾಗದ ಪುಸ್ತಕ 'ದಿ ಥ್ರೀ ಮಸ್ಕೆಟರ್ಸ್' (ನಮ್ಮಲ್ಲೂ ಪದವಿಯ ಹಂತದಲ್ಲೂ ಆ ಪುಸ್ತಕವನ್ನು ಓದುತ್ತೇವೋ ಇಲ್ಲವೋ ಅನ್ನುವುದು ಬೇರೆ ವಿಚಾರ). ಸ್ವಲ್ಪ ಮುಂದುವರೆದು, ಆ ಕೊಳಚೆ ಪ್ರದೇಶದಲ್ಲಿ ಕೋಮುಗಲಭೆ ಜರುಗಿರುವ ಸಂದರ್ಭದಲ್ಲಿ ತನ್ನ ತಾಯಿಯನ್ನು ಕಳೆದುಕೊಂಡು ಅನಾಥರಾಗುತ್ತಾರೆ. ಜಮಾಲ್ ಮತ್ತು ಸಲೀಂ. ಈ ಗೊಂದಲದಲ್ಲಿ ತಪ್ಪಿಸಿಕೊಂಡು ಓಡುವಾಗ ಈ ಹುಡುಗರಿಗೆ ದಾರಿ ಮಧ್ಯದಲ್ಲಿ ಎದುರಾಗುವವನು ಬಲರಾಮ – ಅದೂ ಎಡಗೈಯಲ್ಲಿ ಆಶೀರ್ವದಿಸುತ್ತ! ಈ ಗಲಭೆಯ ನಡುವೆಯೇ ಅಣ್ಣ - ತಮ್ಮಂದಿರ ಜೊತೆಯಾಗುವಳು



ಲತಿಕಾ, – ಪಕ್ಕಾ ಬಾಲಿವುಡ್ ಶೈಲಿಯಲ್ಲಿ! ನಂತರ ಈ ಮಕ್ಕಳು ಸಿಕ್ಕಿಹಾಕಿಕೊಳ್ಳುವುದು ಮುಂಬೈನ ಭಿಕ್ಷಾಟನಾ ಮಾಫಿಯಾ ಕೈಯಲ್ಲಿ. ಅಲ್ಲಿಂದ ತಪ್ಪಿಸಿಕೊಂಡು ಹೋಗಿ ಸೇರುವುದು ನೇರವಾಗಿ ಆಗ್ರಾಕ್ಕೆ. ಅಲ್ಲಿ ಶುರುವಾಗುವುದು ಇವರ ಡಾಲರ್ ಗಳಿಕೆ – ವಿದೇಶಿ ಪ್ರವಾಸಿಗರನ್ನು ಯಾಮಾರಿಸಿ! ಆಗ್ರಾದಲ್ಲಿ ಸ್ವಲ್ಪ ಹಣ ಗಳಿಸಿ ಈ ಸಹೋದರರು ಮುಂಬೈಗೆ ಮರಳುತ್ತಾರೆ. ಇಲ್ಲಿಂದ ಮುಂದೆ ಸಲೀಂ ಮುಂಬೈ ಭೂಗತ ಜಗತ್ತಿನ ಸಂಪರ್ಕಕ್ಕೆ ಬಂದರೆ ಜಮಾಲ್ ಲತಿಕಾಳ ನೆನಪಿನಲ್ಲಿ ತನ್ನದೇ ದಾರಿ ಹುಡುಕುತ್ತಿರುತ್ತಾನೆ. ಭಿಕ್ಷಾಟನಾ ಮಾಫಿಯಾ ಕೈಯಲ್ಲಿ ಕಳೆದುಹೋಗುವ ಲತಿಕಾ ಮುಂಬೈನ ವೇಶ್ಯಾಗೃಹವೊಂದರಲ್ಲಿ ಈ ಸಹೋದರರಿಗೆ ಮರಳಿ ದೊರಕುತ್ತಾಳೆ. ಬಾಲಿವುಡ್ ಮಾದರಿಯ ಹೊಡೆದಾಟ - ಬಡಿದಾಟಗಳ ನಂತರ ಮೂವರೂ ಅಲ್ಲಿಂದ ತಪ್ಪಿಸಿಕೊಂಡು ಹೊಸ ಬದುಕಿನ ಹುಡುಕಾಟದಲ್ಲಿ ತೊಡಗುತ್ತಾರೆ. ಈ ನಡುವೆ, ಗೂಂಡಾ ಮನೋಭಾವದ ಸಲೀಂ ಲತಿಕಾಳೊಂದಿಗೆ ಅನುಚಿತವಾಗಿ ವರ್ತಿಸಿದುದು ಜಮಾಲ್ ಅವರಿಂದ ದೂರವಾಗಲು ಕಾರಣವಾಗುತ್ತದೆ. ಜಮಾಲ್ ಕಾಲ್‌ಸೆಂಟರ್‌ವೊಂದರಲ್ಲಿ ಚಹಾ ಮಾರುವ ಹುಡುಗನಾಗಿ ತನ್ನ ದಾರಿ ತುಳಿದಿರುತ್ತಾನೆ. 'ಕೌನ್ ಬನೇಗಾ ಕರೋಡ್‌ಪತಿ' – ಕಾರ್ಯಕ್ರಮದಲ್ಲಿ ಆತನಿಗೆ ಆಕಸ್ಮಿಕವಾಗಿ ದೊರೆಯುವ ಅವಕಾಶ ಜಮಾಲ್‌ನ ಜೀವನವನ್ನೇ ಬದಲಾಯಿಸಿಬಿಡುತ್ತದೆ. ಆತ ಎಲ್ಲಾ ಪ್ರಶ್ನೆಗಳಿಗೂ ಹೇಗೆ ಉತ್ತರಿಸುತ್ತಾ ಹೋಗುತ್ತಾನೆ ಮತ್ತು ಹೇಗೆ ಆತ ತನ್ನ ಬಾಲ್ಯದ ಗೆಳತಿಯನ್ನು ಮರಳಿ ಪಡೆಯುತ್ತಾನೆ ಎನ್ನುವುದೇ ಚಿತ್ರದಲ್ಲಿ ಉಳಿಯುವ ಕುತೂಹಲ.

ಮೇಲ್ನೋಟಕ್ಕೆ ಒಂದು 'ವಾಣಿಜ್ಯ ಸರಕಿಗೆ' ಬೇಕಾಗುವ ಎಲ್ಲ ಅಂಶಗಳಿದ್ದರೂ, ಚಿತ್ರ ಎಡವುವುದು ಅದರ ನಿರೂಪಣೆಯಲ್ಲಿ. ಮುಂಬೈನ ಕಪೋರಿ ಹಿಂದಿಯಲ್ಲಿ ಮಾತನಾಡುವ ಬಾಲಕ ಜಮಾಲ್, ಹದಿಹರೆಯಕ್ಕೆ ಬರುತ್ತಿದ್ದಂತೆ, ಬ್ರಿಟಿಷ್ ಇಂಗ್ಲಿಷ್‌ನಲ್ಲಿ ಮಾತನಾಡುತ್ತಾನೆ! ಚಿತ್ರದ ದ್ವಿತೀಯಾರ್ಧದಲ್ಲಿ ಬರುವ ಬಹುತೇಕ ಮುಖ್ಯ ಪಾತ್ರಗಳು ಯೂರೋಪ್/ಅಮೆರಿಕಾದ ಸ್ಲಂಗಳಿಂದ ಆಮದು ಮಾಡಿಕೊಂಡಂತೆ ಕಾಣುತ್ತವೆ. ಈ ಪಾತ್ರಗಳಲ್ಲಿ ಕಂಡುಬರುವ ವಿಚಿತ್ರ ಆತ್ಮವಿಶ್ವಾಸ ತರ್ಕಕ್ಕೆ ನಿಲುಕದ್ದು. ಬಾಡಿಗೆ ಹಂತಕ ರಾಗಿರುವ ಸಲೀಂನಿಗೂ ಗೊತ್ತು ಭಾರತದ ಬೆಳವಣಿಗೆಯ ಬಗ್ಗೆ – ಅದಕ್ಕೆ ಆತ ಹೇಳುತ್ತಾನೆ –

''ಜಗತ್ತಿನ ಮಧ್ಯದಲ್ಲಿ ಇಂದು ಭಾರತ ಇದೆ; ಭಾರತದ ಮಧ್ಯದಲ್ಲಿ ಮುಂಬೈ ಇದೆ; ಇಂದು ಈ ಮುಂಬೈನ ಮಧ್ಯದಲ್ಲಿ ನಾನಿದ್ದೇನೆ!'' ಸಲೀಂನ ಪೋಷಕ ಮುಂಬೈನ ಮಾಫಿಯಾ ದೊರೆ. ಆತನೋ ಕ್ರಿಕೆಟ್ ಬಗ್ಗೆ ಮತಿಭ್ರಮಣೆ ಹೊಂದಿದ ರೀತಿಯಲ್ಲಿ ವರ್ತಿಸಿರುತ್ತಾನೆ. ಇಷ್ಟಾದರೂ ಆತನ ಬೆಳಗಿನ ಉಪಾಹಾರ ಸ್ಯಾಂಡ್‌ವಿಚ್! ಚಿತ್ರದ ಉದ್ದಕ್ಕೂ ಇದೇ ರೀತಿ ಪಾಶ್ಚಿಮಾತ್ಯ ಪ್ರೇಕ್ಷಕರಿಗಾಗಿಯೇ ಭಾರತದ ನಗರ ಜೀವನವನ್ನು ಬಿಂಬಿಸುತ್ತಾ ಹೋಗುತ್ತಾರೆ. ಆಗ್ರಾದಲ್ಲಿ ಅಮೆರಿಕಾದ ಪ್ರವಾಸಿಗರಿಂದ ಸಿಗುವ ಡಾಲರ್ ನೋಟೊಂದನ್ನು ಜಮಾಲ್ ಮುಂಬೈನ ಬೀದಿಯೊಂದರಲ್ಲಿ ಸಿಗುವ ಭಿಕ್ಷುಕ ಹುಡುಗನಿಗೆ ನೀಡುತ್ತಾನೆ. ಕುರುಡನಾದರೂ ಆತನಿಗೆ ತಕ್ಷಣ ತಿಳಿಯುತ್ತದೆ ಅದು ಅಮೆರಿಕನ್ ಡಾಲರ್ ಎಂದು!

(ಲ್ಯಾಟಿನ್ ಅಮೆರಿಕಾದಲ್ಲಿರುವ ಡಾಲರ್ ಪ್ರೀತಿ ಭಾರತದಲ್ಲಿ ಇದೆಯೆ?)

ಜಮಾಲ್‌ನ ಅಣ್ಣ ಸಲೀಂ, ಹಾರ್ಲೆಮ್‌ನಿಂದ ಆಮದು ಮಾಡಿಕೊಂಡ ಪಾತ್ರದ ತರಹ ಒಂದರ ಹಿಂದೊಂದು ಕೊಲೆ ಮಾಡುತ್ತಾ ಹೋಗುತ್ತಾನೆ; ಯಾವುದೇ ಆತಂಕವಿಲ್ಲದೆ! ಕಾಲ್‌ಸೆಂಟರ್‌ನಲ್ಲಿ ಜಮಾಲ್‌ಗೆ ಸಲೀಂನ ಮೊಬೈಲ್ ನಂಬರ್ ಸಿಗುವುದು. (ವಾಸ್ತವದಲ್ಲಿ ಇದು ಅಸಾಧ್ಯ!) ಅಣ್ಣ-ತಮ್ಮಂದಿರು ಒಂದಾಗಲು ಕಾರಣವಾಗುತ್ತದೆ. ಈ ನಡುವೆ ಜಮಾಲ್‌ನಿಗೆ 'ಕೌನ್ ಬನೇಗಾ ಕರೋಡ್‌ಪತಿ' ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶ ಸಿಗುತ್ತದೆ. ಆ ಕಾರ್ಯಕ್ರಮದ ನಿರೂಪಕನಿಗೆ ಯಾಕೋ ಜಮಾಲ್‌ನ ಮೇಲೆ ದ್ವೇಷ – ಅದಕ್ಕೇ ಆಗಾಗ್ಗೆ ಅವನನ್ನು ಗೇಲಿ ಮಾಡುತ್ತಿರುತ್ತಾನೆ. ಎಲ್ಲದಕ್ಕಿಂತ ಹೆಚ್ಚಾಗಿ ಆ ಕಾರ್ಯಕ್ರಮ ನಡೆಯುವುದು ನೇರಪ್ರಸಾರದಲ್ಲಿ. ವಾಸ್ತವದಲ್ಲಿ ಕೌನ್ ಬನೇಗಾ ಕರೋಡ್‌ಪತಿ ಒಂದು ಮುದ್ರಿತ ಕಾರ್ಯಕ್ರಮ. ಇನ್ನೂ ಕೆಲವು ಚಿಕ್ಕ ಪುಟ್ಟ ದೋಷಗಳೊಂದಿಗೆ ಸಾಗುತ್ತದೆ – ಅಸಂಬದ್ಧ, ಅತಾರ್ಕಿಕ ನಿರೂಪಣೆ – ಪಕ್ಕಾ ಬಾಲಿವುಡ್ ಶೈಲಿಯಲ್ಲಿ ಮುಕ್ತಾಯವನ್ನು ಕಾಣುತ್ತಾ!

ಹಾಗಾದರೆ ಈ ಚಿತ್ರದ ಯಶಸ್ಸಿಗೆ ಕಾರಣವೇನು? ಬಹುಶಃ ಪಾಶ್ಚಿಮಾತ್ಯರು ಒಪ್ಪುವ ರೀತಿಯಲ್ಲಿ, ಅವರ ದೃಷ್ಟಿಕೋನಕ್ಕನುಗುಣವಾಗಿ ನೀಡಿರುವ ತೃತೀಯ ಜಗತ್ತಿನ ಜೀವನದ ನಿರೂಪಣೆಯೇ ಚಿತ್ರದ ಯಶಸ್ಸಿಗೆ ಕಾರಣವಿರಬೇಕು. ಯೂರೋಪ್- ಅಮೆರಿಕಾದಲ್ಲಿ ಬಹು ಪ್ರಶಂಸಿತ ತೃತೀಯ ಜಗತ್ತಿನ ಸಿನಿಮಾಗಳಿರುವುದು ಇದೇ ನೆಲೆಯಲ್ಲಿ. ೨೦೦೮ರ ಆಸ್ಕರ್ (ಶ್ರೇಷ್ಠ ವಿದೇಶಿ ಚಿತ್ರ) ಪ್ರಶಸ್ತಿ ಗೆದ್ದ ದಕ್ಷಿಣ ಆಫ್ರಿಕಾದ ಟ್ಸೊಟ್ಸಿ ಅಮೆರಿಕಾದಲ್ಲಿ ಬಹುಪ್ರಶಂಸಿತ. ನೈಜೀರಿಯಾದ ದಿ ಕೊನ್ಸ್ಟಾಂಟ್ ಗಾರ್ಡನರ್, ವೆನಿಜುವೆಲಾದ ಸೆಕುಕ್ಸ್ರೋ ಎಕ್ಸ್‌ಪ್ರೆಸ್ ಇವೆಲ್ಲಾ ಚಿತ್ರಗಳಲ್ಲಿರುವ ಸಾಮಾನ್ಯ ಅಂಶವೆಂದರೆ ಅವು ಕಟ್ಟಿಕೊಡುವ ತೃತೀಯ ಜಗತ್ತಿನ ದುಸ್ತರ ಜೀವನ ಶೈಲಿಯನ್ನು ಯೂರೋ - ಅಮೆರಿಕನ್ ದೃಷ್ಟಿಕೋನದಲ್ಲಿ. ರಾನಾ/ದಾಸ್‌ಗುಪ್ತಾ 'ದಿ ನ್ಯೂ ಸ್ಟೇಟ್ಸ್‌ಮನ್' ಪತ್ರಿಕೆಯಲ್ಲಿ ಬರೆಯುತ್ತಾ ಯೂರೋ - ಅಮೆರಿಕಾದ ಈ ಮನಃಸ್ಥಿತಿಯನ್ನು ಪ್ರಶ್ನಿಸುತ್ತಾರೆ. ಅವರು ಹೇಳುವಂತೆ ಈ ಮನಃಸ್ಥಿತಿ ಪಶ್ಚಿಮ ಜಗತ್ತಿನ ಕಾಯಿಲೆಯ ಪ್ರತೀಕ. ಈ ತಲೆಮಾರಿನವರಿಗೆ, ಅವರದೇ ಸಮಾಜ ಯೋಜಿತ ವ್ಯವಸ್ಥೆ ಒಂದು ರೀತಿಯಲ್ಲಿ ನೀರಸಮಯ. ಹೊಸ ಆರ್ಥಿಕ ವ್ಯವಸ್ಥೆಯಲ್ಲಿ ಮೇಲೆದ್ದು ಬರುತ್ತಿರುವ ತೃತೀಯ ಜಗತ್ತಿನ ಬೃಹನ್ನಗರಗಳಲ್ಲಿನ ಜೀವನದ ಅನಿಶ್ಚಿತತೆ ಹೆಚ್ಚು ಮುದ ನೀಡುವ ವಿಚಾರ. ಅವರ ಸಾಂಸ್ಕೃತಿಕ ವಲಯದಲ್ಲಿ ತೃತೀಯ ಜಗತ್ತಿಗೆ ಈ ಸ್ಥಾನ ಸಿಗಲು ಕಾರಣ, ಯೂರೋ ಅಮೆರಿಕಾದ ಆರ್ಥಿಕ ಸಾಮಾಜಿಕ ವ್ಯವಸ್ಥೆಯನ್ನು ಒಪ್ಪಿಕೊಂಡಿದ್ದರಿಂದಾಗಿ.

ಅದೇನೇ ಇರಲಿ, 'ಸ್ಲಂಡಾಗ್ ಮಿಲಿಯನೇರ್'ನ ಯಶಸ್ಸಿಗಿಂತಲೂ ದೊಡ್ಡ ದುರಂತವೆಂದರೆ ಅದನ್ನು ಭಾರತದ ಸಿನಿಮಾ ವಲಯವು ಸ್ವೀಕರಿಸಿದ ರೀತಿ. ಪ್ರಶಸ್ತಿಯ ಮಾನದಂಡದಿಂದಲೇ ಅಳೆದು, ಅದರ ಶ್ರೇಷ್ಠತೆಯನ್ನು ಇಲ್ಲಿ ಪುನರ್‌ಸ್ಥಾಪಿಸಲು ಮಾಡಿರುವ ಪ್ರಯತ್ನ ನಮ್ಮ ಸಾಂಸ್ಕೃತಿಕ - ಬೌದ್ಧಿಕ ವಲಯ ಯಾವ ದಿಸೆಯಲ್ಲಿ ಹೋಗುತ್ತಿದೆ ಅನ್ನುವುದರ ನಿದರ್ಶನ. ಕೇವಲ ಅಮೆರಿಕಾದ ಚಿತ್ರಗಳಿಗೆ ಸೀಮಿತವಾಗಿರುವ (ಶ್ರೇಷ್ಠ ವಿದೇಶಿ ಚಿತ್ರ ಹೊರತುಪಡಿಸಿ) ಅಲ್ಲಿಯ ಹತ್ತು - ಹನ್ನೆರಡು ನಿರ್ಮಾಣ ಸಂಸ್ಥೆಗಳ ನಡುವೆ ಗಿರಕಿ ಹೊಡೆಯುವ ಆಸ್ಕರ್ ಪ್ರಶಸ್ತಿ ಈ ಚಿತ್ರಕ್ಕೆ ದೊರಕಿದೆ ಎನ್ನುವುದಕ್ಕಿಂತಲೂ ಆ ಪ್ರಶಸ್ತಿಯು ದೊರಕಿದಾಕ್ಷಣ ಸಂಸತ್ತಿನಲ್ಲಿ ನಡೆದ ಚರ್ಚೆ - ಅಭಿನಂದನೆ, ರಾಜಕೀಯ ಪಕ್ಷಗಳ ಡಾಂಭಿಕ ನಡೆವಳಿಕೆ ನಮಗೆ ಪ್ರಸ್ತುತವಾಗಬೇಕಾಗಿದೆ. ಒಂದು ರಾಷ್ಟ್ರೀಯ ಪಕ್ಷವಂತೂ ಚುನಾವಣಾ ಪ್ರಚಾರಕ್ಕಾಗಿ ಈ ಸಿನಿಮಾದ ಹಾಡುಗಳ ಹಕ್ಕು ಪಡೆದುಕೊಂಡಿದ್ದು ಅದರ ಬೌದ್ಧಿಕ ದಿವಾಳಿತನಕ್ಕೆ ಸಾಕ್ಷಿಯಾಗಿದೆ. ಭಾರತದ ನಗರಗಳಲ್ಲಿ ಕೊಳಚೆ ಪ್ರದೇಶದ ಬೆಳವಣಿಗೆಯಲ್ಲಿ ಆ ಪಕ್ಷದ ಪಾತ್ರವಿದ್ದರೂ ಈ ಚಿತ್ರಕ್ಕೆ ದೊರಕಿದ ಪ್ರಶಸ್ತಿಯಲ್ಲೂ ತನ್ನ ಸಾಧನೆ ಇದೆ ಎಂದು ಹೇಳಿಕೊಳ್ಳುತ್ತಿರುವುದರ ಹಿಂದೆ ಯಾವ ಅರ್ಥವಿದೆ ಎಂದು ತಿಳಿಯುತ್ತಿಲ್ಲ!

ಈ ಚಿತ್ರದ ಕುರಿತು ಕೆಲವೊಂದು ಕ್ಷುಲ್ಲಕ ಕಾರಣಕ್ಕೆ ಪ್ರತಿಭಟನೆಗಳು ನಡೆದಿರುವುದು ದಿವಾಳಿತನದ ಮತ್ತೊಂದು ಮುಖವಷ್ಟೆ. ಈ ಪ್ರತಿಭಟನೆಗಳನ್ನ ದೊಡ್ಡದಾಗಿ ಚಿತ್ರಿಸಿ ಅದರ ಬಗ್ಗೆ ಪುಟಗಳಷ್ಟು ವಿಶ್ಲೇಷಣೆ ಮಾಡುತ್ತಿರುವ ಪಾಶ್ಚಿಮಾತ್ಯರ ಯಜಮಾನಿಕೆ ಧೋರಣೆ ಹೇಳುವುದಿಷ್ಟು – ''ಅತ್ಯಾಚಾರವನ್ನು ತೊಲಗಿಸಲಾಗದಿದ್ದರೆ, ಕನಿಷ್ಠ ಅದನ್ನು ಸವಿಯುವುದನ್ನಾದರೂ ಕಲಿಯಬೇಕು.''

– ನಮ್ಮ ಉತ್ತರ ಈ ಸವಾಲಿಗೆ ಹೇಗಿರಬೇಕು? ನಮ್ಮ ಕಲಾವಿದರು, ಸಂಗೀತಕಾರರು, ತಂತ್ರಜ್ಞರುಗಳಿಗೆಲ್ಲಾ ಅವರ ಶಹಬ್ಬಾಸ್‌ಗಿರಿ ದೊರೆತ ಕ್ಷಣ ನಾವೂ ''ಜೈ ಹೋ!'' ಎನ್ನಬೇಕೆ? ಈ ಪ್ರಶಸ್ತಿಗಳ ಬೆನ್ನಹಿಂದೆಯೇ ಹಾಲಿವುಡ್ಡಿನ ನಿರ್ಮಾಣ ವಿತರಣಾ ಸಂಸ್ಥೆಗಳು ಭಾರತಕ್ಕೆ ದೊಡ್ಡ ಪ್ರಮಾಣದಲ್ಲಿ ಲಗ್ಗೆಹಾಕುತ್ತವೆ. ಈ ಬಗ್ಗೆಯೂ ಸಂಸತ್ತಿನಲ್ಲಿ ಚರ್ಚೆಯಾದರೆ ದೇಶದ ಸಾಂಸ್ಕೃತಿಕ ಭವಿಷ್ಯಕ್ಕೆ ಒಳಿತು, ಅಲ್ಲವೆ?

ರಾಜೇಶ ಎನ್. ನಾಯ್ಕ
ನಂ ೧೭, ೨ನೇ ಮಹಡಿ, ಮುನೇಶ್ವರ ದೇವಸ್ಥಾನದ ಬೀದಿ
ಕುವೆಂಪು ಶಾಲೆಯ ಹತ್ತಿರ, ನಾಗಶೆಟ್ಟಿಹಳ್ಳಿ . ಬೆಂಗಳೂರು - ೯೪

# ಎಲುಬಿಲ್ಲದ ನಾಲಿಗೆ ನಂಜನ್ನು ಕಾರಿದಾಗ...

ಮ. ಶ್ರೀ. ಮುರಳಿಕೃಷ್ಣ

ರಸಾಸ್ವಾದನೆಯ ಶಕ್ತಿ ಹೊಂದಿರುವುದರ ಜೊತೆಗೆ ನಾಲಿಗೆಯಾಗಿದೆ ನುಡಿಬ್ರಹ್ಮ. ನುಡಿಗಳು ಎರಡು ವೈರುಧ್ಯಗಳನ್ನು ಹೊಂದಿರುತ್ತವೆ. ಒಂದು ರಚನಾತ್ಮಕ; ಮತ್ತೊಂದು ಧ್ವಂಸಾತ್ಮಕ. ಅವು ಮನಸ್ಸುಗಳನ್ನು ಕಟ್ಟುತ್ತವೆ; ಕೆಡವುತ್ತಲೂ ಇರುತ್ತವೆ. ''ನುಡಿದರೆ ಮುತ್ತಿನ ಹಾರದಂತಿರಬೇಕು'' ಎಂಬ ವಚನ, ''ಆಚಾರವಿಲ್ಲದ ನಾಲಿಗೆ ನಿನ್ನ ನೀಚ ಬುದ್ಧಿಯ ಬಿಡು ನಾಲಿಗೆ'' ಎಂದು ಹಾಡಿದ ಪುರಂದರದಾಸರು, ಇನ್ನೂ ಅನೇಕ ಖ್ಯಾತನಾಮರ ಉಕ್ತಿಗಳು, ಮಾತುಗಳ ಬಗೆಗೆ ಬೆಳಕನ್ನು ಚೆಲ್ಲುತ್ತವೆ. ಇವೆಲ್ಲ ನೆನಪಿಗೆ ಬಂದದ್ದು ಉತ್ತರ ಪ್ರದೇಶದ ಫಿಲಿಬಿಟ್ ಕ್ಷೇತ್ರದಲ್ಲಿ ಬಿಜೆಪಿಯ ಅಭ್ಯರ್ಥಿಯಾಗಿರುವ ವರುಣ ಗಾಂಧಿಯ ನಂಜನ್ನು ಕಾರಿದ ಚುನಾವಣಾ ಭಾಷಣ ಕೇಳಿ, ಓದಿದ ಮೇಲೆ.

ಚುನಾವಣೆಯ ಕಾಲದಲ್ಲಿ ವಾಕ್‌ಸಮರಗಳು ಜರುಗುವುದು ಸಾಮಾನ್ಯ. ವ್ಯಂಗ್ಯ, ನಿಂದೆ, ತಮಾಷೆ ಮುಂತಾದವು ಜನರನ್ನು ಬೇಗನೆ ತಲುಪುತ್ತವೆ. ಈ ನಾಡಿಮಿಡಿತ ಅರಿತ ರಾಜಕಾರಣಿಗಳು ಸಭೆಗಳಲ್ಲಿ ತಮ್ಮಲ್ಲಿರುವ ಆಣಿಮುತ್ತುಗಳನ್ನು ಹರಿಬಿಡುತ್ತಿರುತ್ತಾರೆ. ಮಾಧ್ಯಮದವರಿಗೂ ಇವುಗಳು ರಸಗವಳ. ಆದರೆ ಇಂಥಾ ಸಂದರ್ಭಗಳಲ್ಲಿ ಎಡವಟ್ಟಾದಾಗ ದೂಷಣೆಗೆ ಒಳಗಾಗುವುದು ಮಾಧ್ಯಮಗಳೇ. ಪ್ರಸ್ತುತ ತಂತ್ರಜ್ಞಾನದ ನೂತನ ಆವಿಷ್ಕಾರಗಳು ರಾಜಕಾರಣಿಗಳ ಲಂಗು ಲಗಾಮಿಲ್ಲದ ನಾಲಿಗೆಗಳಿಗೆ ಬ್ರೇಕ್ ಹಾಕಿವೆ. ಸೀಡಿ, ಡಿವಿಡಿಗಳಲ್ಲಿ ಹಾಗೂ ಟಿವಿಯ ಸಾಧನಗಳಲ್ಲಿ ದಾಖಲಾಗಿರುವ ವಿವರಗಳನ್ನು ಸಾರಾಸಗಟಾಗಿ ತಳ್ಳಿ ಹಾಕುವುದು ಸುಲಭವಲ್ಲ. ಕೆಲವು ವರ್ಷಗಳ ಹಿಂದೆ ಪರಿಸ್ಥಿತಿ ಬೇರೆಯದೇ ಆಗಿತ್ತು. ಹೇಳಿಕೆಯೊಂದು ತೀವ್ರ ವಿವಾದಕ್ಕೆ ಗುರಿಯಾದಾಗ, ಅದನ್ನು ತಿರುಚಲಾಗಿದೆಯೆಂದು ಸಂಬಂಧಪಟ್ಟ ರಾಜಕಾರಣಿ/ನೇತಾರ ಸ್ಪಷ್ಟೀಕರಣ ನೀಡಿ ಕೈ ತೊಳೆದುಕೊಂಡುಬಿಡುತ್ತಿದ್ದ. ಆಗ ಮುದ್ರಣ ಮಾಧ್ಯಮದ್ದೇ ಕಾರುಬಾರು. ವಿದ್ಯುನ್ಮಾನ ಮಾಧ್ಯಮಗಳ ಪ್ರವೇಶದ ನಂತರ ರಾಜಕಾರಣಿಗಳು ತುಟಿ ಬಿಚ್ಚಿದಾಗ ಸ್ವಲ್ಪ ನಿಗಾ ವಹಿಸುತ್ತಾರೆ.

ಇತ್ತೀಚೆಗೆ ವರುಣ ಗಾಂಧಿ ಮಾಡಿದ ಭಾಷಣ ಕೋಮು ಸಾಮರಸ್ಯವನ್ನು ಕದಡುವಷ್ಟು ಹಸಿಹಸಿಯಾಗಿತ್ತು. ಆತ ನೇರವಾಗಿ ಕೈಹಾಕಿದ್ದು ಉರಿಜ್ವಾಲೆಗೆ. ಇದಾದ ನಂತರ ಆತ ವರ್ತಿಸಿದ್ದು ತನ್ನ ತಂದೆ ಸಂಜಯ ಗಾಂಧಿಯಂತೆಯೇ. ಕಾನೂನಿನ ಸಮನ್ಸ್‌ಗಳ ತುಚ್ಛೀಕರಣ. ತನ್ನ ಅತಿರೇಕಗಳ ಬಗೆಗೆ ವಿಚಾರಣೆ ಮಾಡುತ್ತಿರುವ ನ್ಯಾಯಾಧೀಶರ ನಡವಳಿಕೆಯನ್ನು 'ರಾಜಕೀಯ ಪ್ರೇರಿತ' ಎಂಬ ಖಂಡನೆ ಮತ್ತು ತನ್ನ ಚೇಲಾಗಳನ್ನು ಎತ್ತಿಕಟ್ಟಿ ಹಿಂಸೆಗೆ ಕುಮ್ಮಕ್ಕು ನೀಡಿದ ಪರಿ ಮುಂತಾದವು ತುರ್ತುಪರಿಸ್ಥಿತಿ ಮತ್ತು ನಂತರದ ಅವಧಿಯ ಸಂಜಯ ಗಾಂಧಿಯ ಪ್ರಶ್ನಾರ್ಹ ಕಾರ್ಯಾಚರಣೆಗಳನ್ನು ನೆನಪಿಗೆ ತಂದವು. ತುರ್ತುಪರಿಸ್ಥಿತಿಯನ್ನು ಲೇವಡಿ ಮಾಡಿದ 'ಕಿಸ್ಸಾ ಕುರ್ಸಿಕಾ' ಎಂಬ ಹಿಂದಿ ಚಲನಚಿತ್ರಕ್ಕೆ ಎಂಥಾ ಗತಿ ಒದಗಿತು ಎಂಬುದು ತಿಳಿದ ಸಂಗತಿಯೇ.

ಪ್ರಸ್ತುತ ಚಾಲ್ತಿಯಲ್ಲಿರುವ ಜನತಾ ಪ್ರಾತಿನಿಧ್ಯ ಕಾನೂನಿನ ಅನ್ವಯ ಒಬ್ಬ ಅಭ್ಯರ್ಥಿ ಚುನಾವಣಾ ಪ್ರಚಾರದಲ್ಲಿ ತೊಡಗಿರುವಾಗ ಅವನನ್ನು/ಅವಳನ್ನು ಅನರ್ಹಗೊಳಿಸಲು ಸಾಧ್ಯವಾಗುವುದಿಲ್ಲ. ಕೋರ್ಟು ಅಭ್ಯರ್ಥಿಯನ್ನು ತಪ್ಪಿತಸ್ಥನೆಂದು ತೀರ್ಪು ನೀಡಿದ ತರುವಾಯ ಚುನಾವಣಾ ಆಯೋಗ ಅವನನ್ನು/ಅವಳನ್ನು ಅನರ್ಹಗೊಳಿಸಬಹುದು. ಆದರೆ ಆ ವೇಳೆಗಾಗಲೇ, ಆ ಅಭ್ಯರ್ಥಿ ರಾಜಕೀಯ ವಾತಾವರಣವನ್ನು ವಿಷಮಯ ಗೊಳಿಸಿರುತ್ತಾನೆ(ಳೆ). ಕೋಮುವಾದದ ಆಧಾರದ ಮೇಲೆ ಜನರ ನಡುವೆ ಕಂದಕವನ್ನು ನಿರ್ಮಿಸಿರುತ್ತಾನೆ (ಳೆ) ಮತ್ತು ದ್ವೇಷವನ್ನು ಮತಗಳನ್ನಾಗಿ ಪರಿವರ್ತಿಸಿರುತ್ತಾನೆ(ಳೆ). ತಡವಾಗಿ ಜಾರಿಯಾಗುವ ಅನರ್ಹಗೊಳಿಸುವ ಕ್ರಮ ಮೂಲ ಅಪರಾಧವನ್ನು ಸ್ವಲ್ಪ ನಿವಾರಿಸಬಹುದು ಅಷ್ಟೆ. ಕಾನೂನಿನಲ್ಲಿರುವ ಈ ದೋಷದಿಂದ ಹಲವು ರಾಜಕಾರಣಿಗಳು ತಮ್ಮ ಮನಸ್ಸಿಗೆ ಬಂದಂತೆ ವರ್ತಿಸುತ್ತಾರೆ.

ಆದರೂ ಚುನಾವಣಾ ಆಯೋಗ ಇದುವರೆಗೆ ೩೪೨೩ ಮಂದಿಯ ವಿರುದ್ಧ ಅನರ್ಹತಾ ಕ್ರಮವನ್ನು ಜಾರಿಗೊಳಿಸಿ, ಅವರು ಚುನಾವಣೆಯಲ್ಲಿ ಸ್ಪರ್ಧಿಸದಂತೆ ತಡೆಹಿಡಿದಿದೆ. ಇವರಲ್ಲಿ ಹೆಚ್ಚಿನ ಮಂದಿ ಭ್ರಷ್ಟ ಆಚರಣೆಗಳ ಆಪಾದನೆಗಳಿಂದ ಕಳಂಕಿತರಾಗಿದ್ದರು ಎಂಬುದು ಗಮನೀಯ ವಿಚಾರ. ವರುಣ ಗಾಂಧಿಯ ವಿಷಯದಲ್ಲಿ ಚುನಾವಣಾ ಆಯೋಗ ಸೀಡಿಗಳ ವಿಶ್ವಾಸಾರ್ಹತೆಯ ಬಗೆಗೆ ವಿಶೇಷತಜ್ಞರ ಅಭಿಪ್ರಾಯ ಪಡೆಯಬಹುದಿತ್ತು. ಆದರೆ ಏಕೋ ಅದು ಈ ಕ್ರಮಕ್ಕೆ ಮುಂದಾಗಲಿಲ್ಲ.

ಚುನಾವಣಾ ಸಮಯದಲ್ಲಿ ಒಬ್ಬ ಅಭ್ಯರ್ಥಿ ತೀವ್ರ ಸ್ವರೂಪದ ಅಪರಾಧವನ್ನು ಎಸಗಿದ್ದರೆ, ಅಂತಹ ವ್ಯಕ್ತಿಯ ವಿರುದ್ಧ ಆಪಾದನಾ ಪಟ್ಟಿ ದಾಖಲಾಗಿದ್ದರೆ ವಿಚಾರಣೆಯ ಮುನ್ನವೆ ಆತ/ಆಕೆಯನ್ನು ಅನರ್ಹಗೊಳಿಸಬಹುದೆಂಬ ಶಿಫಾರಸನ್ನು ಚುನಾವಣಾ ಆಯೋಗ ೧೯೯೮ರಲ್ಲಿ ಮಾಡಿತು. ಆದರೆ ಕಳೆದ ವರ್ಷ ಒಂದು ಸಂಸದೀಯ ಸಮಿತಿ ಈ ಶಿಫಾರಸ್ಸನ್ನು ತಳ್ಳಿಹಾಕಿತು. ಈ ಸಮಿತಿಯಲ್ಲಿ ರಾಮ್ ಜೇಠಮಲಾನಿ ಮತ್ತು ಅಭಿಷೇಕ್ ಸಿಂಘ್ವಿಯಂಥ ಕಾನೂನು ತಜ್ಞರಿದ್ದರು.

ಫಿಲಿಬಿಟ್‌ನಲ್ಲಿ ವರುಣ ಗಾಂಧಿ ವಿಷಪೂರಿತ ಭಾಷಣ ಮಾಡಿದ ತರುವಾಯ ಲಾಲು ಪ್ರಸಾದ್ ಯಾದವ್, ಕಾಗೋಡು ತಿಮ್ಮಪ್ಪ, ಅನಂತಕೃಷ್ಣ ಹೆಗಡೆ ಮುಂತಾದ ನಾಯಕಮಣಿಗಳು ತಮ್ಮ ವಾಕ್

*ಪ್ರಸ್ತುತ ಚಾಲ್ತಿಯಲ್ಲಿರುವ ಜನತಾ ಪ್ರಾತಿನಿಧ್ಯ ಕಾನೂನಿನ ಅನ್ವಯ ಒಬ್ಬ ಅಭ್ಯರ್ಥಿ ಚುನಾವಣಾ ಪ್ರಚಾರದಲ್ಲಿ ತೊಡಗಿರುವಾಗ ಅವನನ್ನು/ಅವಳನ್ನು ಅನರ್ಹಗೊಳಿಸಲು ಸಾಧ್ಯವಾಗುವುದಿಲ್ಲ. ಕೋರ್ಟು ಅಭ್ಯರ್ಥಿಯನ್ನು ತಪ್ಪಿತಸ್ಥನೆಂದು ತೀರ್ಪು ನೀಡಿದ ತರುವಾಯ ಚುನಾವಣಾ ಆಯೋಗ ಅವನನ್ನು / ಅವಳನ್ನು ಅನರ್ಹಗೊಳಿಸಬಹುದು. ಆದರೆ ಆ ವೇಳೆಗಾಗಲೇ, ಆ ಅಭ್ಯರ್ಥಿ ರಾಜಕೀಯ ವಾತಾವರಣವನ್ನು ವಿಷಮಯಗೊಳಿಸಿರುತ್ತಾನೆ (ಳೆ). ಕೋಮುವಾದದ ಆಧಾರದ ಮೇಲೆ ಜನರ ನಡುವೆ ಕಂದಕವನ್ನು ನಿರ್ಮಿಸಿರುತ್ತಾನೆ (ಳೆ) ಮತ್ತು ದ್ವೇಷವನ್ನು ಮತಗಳನ್ನಾಗಿ ಪರಿವರ್ತಿಸಿರುತ್ತಾನೆ (ಳೆ). ತಡವಾಗಿ ಜಾರಿಯಾಗುವ ಅನರ್ಹಗೊಳಿಸುವ ಕ್ರಮ ಮೂಲ ಅಪರಾಧವನ್ನು ಸ್ವಲ್ಪ ನಿವಾರಿಸಬಹುದು ಅಷ್ಟೆ. ಕಾನೂನಿನಲ್ಲಿರುವ ಈ ದೋಷದಿಂದ ಹಲವು ರಾಜಕಾರಣಿಗಳು ತಮ್ಮ ಮನಸ್ಸಿಗೆ ಬಂದಂತೆ ವರ್ತಿಸುತ್ತಾರೆ.*

ಚತುರತೆಯನ್ನು ಮರೆದರು. ಅವರ ಕೆಲವು ಹೇಳಿಕೆಗಳು ಆಕ್ಷೇಪಾರ್ಹವಾಗಿದ್ದವು. ಆದರೆ ಬಿಜೆಪಿಯ ಪಿತಾಮಹ, ಮಾಜಿ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಗುಜರಾತಿನ ೨೦೦೨ರ ಹತ್ಯಾಕಾಂಡದ ನಂತರ ''ಮುಸಲ್ಮಾನರು ಎಲ್ಲಿ ವಾಸಮಾಡಿದರೂ ಇತರರೊಡನೆ ಸಹಬಾಳ್ವೆ ನಡೆಸಲು ಅವರಿಗೆ ಇಷ್ಟವಿರುವುದಿಲ್ಲ, ಇತರರೊಡನೆ ಬೆರೆಯಲು ಅವರಿಗೆ ಇಷ್ಟವಾಗುವುದಿಲ್ಲ, ಅವರು ವಿಚಾರಗಳನ್ನು ಶಾಂತ ರೀತಿಯಲ್ಲಿ ಪ್ರತಿಪಾದನೆ ಮಾಡುವ ಬದಲು, ಬೆದರಿಕೆ ಮತ್ತು ಭಯದ ಮೂಲಕ ಪ್ರಚುರಪಡಿಸುತ್ತಾರೆ'' ಎಂದರು. ತರುವಾಯ ಅವರು ತಾನು ತೀವ್ರವಾದಿ ಇಸ್ಲಾಂನ ಅನುಯಾಯಿಗಳ ಕುರಿತು ಮಾತನಾಡಿದ್ದು ಎಂದು ಸಮಜಾಯಿಷಿ ನೀಡಿ ಜಾರಿಕೊಂಡರು. ಈ ಪ್ರಕರಣ ಸಂಸತ್‌ನಲ್ಲಿ ಕೋಲಾಹಲಕ್ಕೆ ಕಾರಣವಾಯಿತು. ಇದೇ ವಾಜಪೇಯಿ ಗುಜರಾತಿನಲ್ಲಿ ಜನಾಂಗೀಯ ಹತ್ಯೆಗಳು ಜರುಗಿದ ನಂತರ ನರೇಂದ್ರ ಮೋದಿಯನ್ನು ಕುರಿತು – ''ಅವರು ರಾಜಧರ್ಮವನ್ನು ಪಾಲಿಸಲಿಲ್ಲ'' ಎಂದರು ! ಇಂಥಾ ಮಂದಿ ತಮ್ಮ ನಾಲಿಗೆಯನ್ನು ಹೇಗೆ ಹೊರಳಿಸಬಲ್ಲರು ಎಂಬುದಕ್ಕೆ ಈ ವೃತ್ತಾಂತಗಳು ಉತ್ತಮ ನಿದರ್ಶನಗಳು.

ಮುಸಲ್ಮಾನರ ಕುರಿತು ವಿಷಭಾಷಣ ಪ್ರಯೋಗ ವಾಗಿದ್ದು ಇದೇ ಮೊದಲ ಬಾರಿಯಲ್ಲ. ರಥಯಾತ್ರೆಯ ಸಮಯದಲ್ಲಿ, ರಾಮಜನ್ಮಭೂಮಿ 'ಬಿಡುಗಡೆ'ಯ ಆಂದೋಳನದಲ್ಲಿ, ಸಾಧ್ವಿ ಋತಂಭರಾ ಅಂಥವರು ಪ್ರವರ್ಧಮಾನಕ್ಕೆ ಬಂದದ್ದು ತಮ್ಮ ದ್ವೇಷಪೂರಿತ ಭಾಷಣಗಳಿಂದ. ಕೋಮು ಸೌಹಾರ್ದಕ್ಕೆ ಕೊಳ್ಳಿಯಿಡುವ ಮಾತುಗಳಿಂದ ಆಕೆ ಜನರನ್ನು ಪ್ರಚೋದಿಸುವುದರಲ್ಲಿ ಸಫಲಳಾದಳು. ಹಿಂದುತ್ವ ರಾಜಕೀಯದ ಪ್ರಮುಖ ಭಾಷಣಗಾರ್ತಿಯಾಗಿ ಬಿಜೆಪಿಗೆ ಓಟು ಗಳಿಸುವ ಸಾಧನವಾದಳು. ಇದು ಅಂದಿನ ಪ್ರಸಂಗವಾಯಿತು. ಇತ್ತೀಚಿನ ಒಂದು ಘಟನೆಯತ್ತ ಗಮನ ಹರಿಸೋಣ.

ಉತ್ತರ ಪ್ರದೇಶದಲ್ಲಿ, ೨೦೦೭ರಲ್ಲಿ, ವಿಧಾನಸಭೆಗೆ ಚುನಾವಣೆ ಜರುಗಿತು. ಬಿಜೆಪಿ ಅದರ ಪ್ರಚಾರಾಂದೋಳನದಲ್ಲಿ 'ಭಾರತ್ ಕೀ ಪುಕಾರ್' ಎಂಬ ಸಿಡಿಯನ್ನು ತಯಾರಿಸಿ, ವಿತರಣೆ ಮಾಡಿತು. ಅದರ ಪ್ರಧಾನ ಪಾತ್ರಧಾರಿ ಒಬ್ಬ ಉಪಾಧ್ಯಾಯ. ಮುಸಲ್ಮಾನರ ಕುಕೃತ್ಯಗಳ ಮೂಲಕ ಹಿಂದೂ ಧರ್ಮ ಆಕ್ರಮಣಕ್ಕೆ ಒಳಗಾಗಿದೆ ಎಂದು ಬಿಂಬಿಸಲು, ಇನ್ನೂ ಅನೇಕ ನಟರು ಅದರಲ್ಲಿ ನಟಿಸಿದ್ದರು. ತೀರ ತಡವಾಗುವ ಮುನ್ನ ಹಿಂದೂಗಳು ಕಾರ್ಯ ಪ್ರವೃತ್ತರಾಗಬೇಕೆಂದು ಆ ಉಪಾಧ್ಯಾಯ ನೀಡಿದ ಸಂದೇಶ – ''ನೀವು ಬಿಜೆಪಿಗೆ ಓಟು ಹಾಕದಿದ್ದರೆ, ನಂತರ ನೀವು ವಿಷಾದಿಸುತ್ತೀರಿ. ಈ ದೇಶವನ್ನು ಮುಸಲ್ಮಾನರು ತಮ್ಮ ಅಂಕೆಗೆ ತೆಗೆದುಕೊಳ್ಳುತ್ತಾರೆ. ನಿಮ್ಮ ಹಣೆಯ ಮೇಲಿರುವ ತಿಲಕ ಹೋಗುತ್ತದೆ. ಬದಲಿಗೆ ನೀವು ಗಡ್ಡಗಳನ್ನು ಬೆಳೆಸಬೇಕಾಗುತ್ತದೆ.'' ಕೊನೆಯಲ್ಲಿ ಆತ ಪಾರ್ಶ್ವವಾಯುವಿನಿಂದ ಪೀಡಿತನಾಗಿ ಕೊನೆಯುಸಿರೆಳೆಯುತ್ತಾನೆ. ಅವನ ಅಂತ್ಯಕ್ರಿಯೆಯಲ್ಲಿ ''ನೀವು ಹಿಂದೂಗಳೆಂದು ಕರೆಸಿಕೊಳ್ಳಲು ಭಯಪಡುವ ದಿನ ದೂರವಿಲ್ಲ. ನೀವು ಎಲ್ಲೂ ಒಬ್ಬ ಸೋಹನ್ ಲಾಲ್, ಮೋಹನ್‌ಲಾಲ್, ಆತ್ಮಾರಾಮ್ ಅಥವಾ ರಾಧಾಕೃಷ್ಣನನ್ನು ನೋಡಲು ಅಸಾಧ್ಯ. ನಾವು ಎತ್ತ ನೋಡಿದರೂ ನಮಗೆ ಕಂಡು ಬರುವುದು ಅಬ್ಬಾಸ್, ನಖ್ವಿ, ರಿಜ್ವಿ ಹಾಗೂ ಮೌಲ್ವಿ'' ಎಂದು ಎಚ್ಚರಿಕೆಯ ಗಂಟೆ ಮೊಳಗಿಸುತ್ತಾನೆ. ಆದರೆ ಈ ಸಿಡಿಯ ಬಗೆಗೆ ಚುನಾವಣಾ ಆಯೋಗ ಯಾವುದೇ ಕ್ರಮವನ್ನು ಜರುಗಿಸಲಿಲ್ಲ! ಆದರೆ ಅದು ವರುಣ ಗಾಂಧಿಯ ವಿಷಯದಲ್ಲಿ ಈ ತಪ್ಪನ್ನು ಎಸಗದೆ ಇದ್ದದ್ದು ಸ್ವಾಗತಾರ್ಹ ಬೆಳವಣಿಗೆ.

## ಅಗ್ನಿ ಪರ್ವತ

ಅಗ್ನಿ ಪರ್ವತ
ಮುಗಿಲೆತ್ತರಕ್ಕೆ
ಹೊಮ್ಮಿಸುವ
ಭೀಕರ ಜ್ವಾಲೆಗಳನ್ನು
ಇಡೀ ಕಡಲು ಕೂಡ
ತಣಿಸಲಾರದು:
ಎಂಥ ಕಡುಸೋಜಿಗ !

ಅದೇ ಬಡಬಾಗ್ನಿಯೆ ?
ಬಡವರ ಜಠರಾಗ್ನಿಯೆ ?

ಸಿ.ಪಿ.ಕೆ.
ಮೈಸೂರು

ಈ ರೀತಿಯ ಪ್ರಚೋದನಕಾರಿ ಭಾಷಣಗಳನ್ನು, ಲೇಖನಗಳನ್ನು ಮಾಡುವುದರಲ್ಲಿ ಮತ್ತು ಬರೆಯುವುದರಲ್ಲಿ ಶಿವಸೇನೆಯ ಅಧಿನಾಯಕ ಬಾಳ್ ಠಾಕರೆ ಸಹ ಎತ್ತಿದ ಕೈ. ಆತ ೧೯೮೦ರ ದಶಕದಲ್ಲಿ, ಒಮ್ಮೆ ಚುನಾವಣಾ ಪ್ರಚಾರದಲ್ಲಿ, ಉದ್ರೇಕಕಾರಿ ಭಾಷಣ ಮಾಡಿದ. ಆತನ ವಿರುದ್ಧ ದೂರು ದಾಖಲಾಯಿತು. ಆದರೆ ಆತನಿಗೆ ಪ್ರಾತಿನಿಧ್ಯ (ಮತಹಕ್ಕು) ಹರಣ ಶಿಕ್ಷೆ ವಿಧಿಸಿದ್ದು ಸುಮಾರು ಒಂದು ದಶಕದ ತರುವಾಯ ! ನಮ್ಮ ರಾಜಕೀಯ ಚರಿತ್ರೆಯಲ್ಲೇ ಇಂಥಾ ಉದಾಹರಣೆಯಿರುವುದು ಒಂದೇ ಒಂದು. ಇದರಿಂದ, ಎಷ್ಟು ರಾಜಕಾರಣಿಗಳು ಕಾನೂನುಗಳ ಹಿಡಿತದಿಂದ ದೂರ ಇದ್ದಾರೆ ಎಂಬುದು ಸಾಬೀತಾಗುತ್ತದೆ.

ವರುಣ ಗಾಂಧಿಯ ಭಾಷಣದ ಘಟನೆಯಿಂದ ಬಿಜೆಪಿಗೆ ಇರಸುಮುರಸಾಗಿರುವುದು ವಾಸ್ತವ. ಆದರೂ ಅದು ಅವನನ್ನು ಬಿಟ್ಟುಕೊಡಲಿಲ್ಲ. ಬದಲಿಗೆ, ಅದು ಕಾಂಗ್ರೆಸ್ಸಿನ ವಿರುದ್ಧ ತಕರಾರೆತ್ತಿತು. ಈ ಬಾರಿಯ ಸಂಸತ್ತಿನ ಚುನಾವಣೆಯಲ್ಲಿ ಕಾಂಗ್ರೆಸ್ ಜಗದೀಶ್ ಟೈಟ್ಲರ್ ಮತ್ತು ಸಜ್ಜನಕುಮಾರ್‌ರನ್ನು ಕಣಕ್ಕೆ ಇಳಿಸಿತು. ಅವರು ನವೆಂಬರ್ ೧೯೮೪ರಲ್ಲಿ ಜರುಗಿದ ಸಿಖ್‌ರ ಹತ್ಯಾಕಾಂಡದಲ್ಲಿ ಯಾವ ಪಾತ್ರ ವಹಿಸಿದರೆಂಬುದು ಗುಟ್ಟಾಗಿ ಉಳಿದಿರುವ ವಿಷಯವೇನಲ್ಲ. ಕಾಂಗ್ರೆಸ್‌ನ ಈ ಕ್ರಮ ಖಂಡನೆಗೆ ಅರ್ಹವಾದದ್ದು. ಆದರೆ ಎರಡು 'ತಪ್ಪುಗಳು' ಒಂದು 'ಸರಿ'ಯನ್ನು ಮಾಡುವುದಿಲ್ಲ, ಅಲ್ಲವೇ ? (ಕೇಂದ್ರ ಗೃಹ ಸಚಿವ ಚಿದಂಬರಂ ಮೇಲಿನ ಚಪ್ಪಲಿ ಪ್ರಹಾರ ಮತ್ತು ಸಿಖ್‌ರ ಆಕ್ರೋಶಭರಿತ ಪ್ರತಿಭಟನೆಗಳಿಗೆ ಸ್ಪಂದಿಸಿ, ಕಾಂಗ್ರೆಸ್ ಈ ಇಬ್ಬರು ನಾಯಕರಿಗೆ ಟಿಕೆಟ್ ನೀಡಲಿಲ್ಲ)

ನಮ್ಮ ಮಿತ್ರರ ಬಳಗದಲ್ಲಿ ವರುಣ ಗಾಂಧಿಯ ದ್ವೇಷ ಭಾಷಣದ ಪ್ರಸ್ತಾಪ ಬಂದಾಗ, ಒಬ್ಬ ಗೆಳೆಯ ''ಇಮಾಂ ಬುಖಾರಿ ಮಸೀದಿಯೊಂದರಲ್ಲಿ ಈ ರೀತಿ ಮಾತನಾಡಿದ್ದರೆ, ಏನೂ ಆಗುತ್ತಿರಲಿಲ್ಲ. ಆದರೆ ವರುಣ ಗಾಂಧಿ ಹೇಳಿದ್ದು ಮಾತ್ರ ದೊಡ್ಡದು ಮಾಡಲಾಗುತ್ತದೆ'' ಎಂದು ಕ್ಯಾತೆ ತೆಗೆದ. ಚುನಾವಣಾ ಸಮಯದಲ್ಲಿ ಸಾರ್ವಜನಿಕ ವೇದಿಕೆಯಿಂದ ಕೋಮುಸಾಮರಸ್ಯಕ್ಕೆ ಧಕ್ಕೆ ತರುವಂಥ ಭಾಷಣ ಮಾಡುವುದಕ್ಕೂ, ಮಸೀದಿಯಂಥಾ ಸ್ಥಳದಲ್ಲಿ ಮಾತನಾಡುವುದಕ್ಕೂ (ಹಾಗೇನಾದರೂ ಆಗಿದ್ದ ಪಕ್ಷದಲ್ಲಿ) ಇರುವ ವ್ಯತ್ಯಾಸವನ್ನು ಅರಿಯದ ಅನೇಕ ಮಂದಿ ನಮ್ಮ ನಡುವೆ ಇದ್ದಾರೆ. ಅವರನ್ನು ಪ್ರಚೋದಿಸುವುದು ತೀರ ಸುಲಭ. ಹಾಗೆಯೇ ಮಾಡುತ್ತಿದ್ದಾರೆ ಕೋಮುವಾದಿಗಳು, ಮೂಲಭೂತವಾದಿಗಳು, ವಿಚ್ಛಿದ್ರಕಾರಿ ಶಕ್ತಿಗಳು ಮತ್ತು ಮತಾಂಧ ರಾಜಕಾರಣಿಗಳು.

ಮ. ಶ್ರೀ. ಮುರಳಿಕೃಷ್ಣ
ನಂ. ೩೮, ೩ನೇ ಕ್ರಾಸ್, ರಾಜ ಗಾರ್ಡನಿಯಾ ಲೇಔಟ್, ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಉತ್ತರಹಳ್ಳಿ, ಬೆಂಗಳೂರು - ೫೬೦ ೦೬೧

# ಪ್ರೀತಿ ಎಂದರೆ ...

ಏನು ಈ ಪ್ರೀತಿ ಎಂದರೆ? ಪ್ರೀತಿ ಎಂದರೆ ಮಾಯೆಯ ನಿಜರೂಪ. ಬದುಕಿನ ಉಸಿರು. ಸ್ವಾರ್ಥ ಬದಿಗಿಟ್ಟು ಸ್ವೀಕರಿಸುವ ಪರಿ, ಕಷ್ಟ ನುಂಗಿ ಸುಖ ಹಂಚುವ ಮಾದರಿ... ಹೀಗೆ ಮಾತಾಡುತ್ತಲೇ ಹೋಗಬಹುದು. ಪ್ರೀತಿ ಎಂಬುದು ವಿಶ್ವದಾದ್ಯಂತ ಬಹು ಚರ್ಚಿತ ಶಬ್ದವಾಗಿದ್ದರೂ ಬಹುಮಂದಿಗೆ ದೊರೆತಿದೆಯೆಂದು ಹೇಳಲಾಗದು.

ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭ. ಮಟಮಟ ಮಧ್ಯಾಹ್ನ - ಊರ ಹೊರಗಿನ ಒಂದು ಚಿಕ್ಕ ಗುಡಿಸಲು. ಕುರುಚಲು ಗಡ್ಡದ ಖಾದೀಧಾರಿಯೊಬ್ಬ ಗುಡಿಸಲೊಳಗೆ ಓಡೋಡಿ ಬಂದ. ಬಾಣಂತಿಯೊಬ್ಬಳು ಮಲಗಿದ ಹೊರಸಿಗೆ ಧಾವಿಸಿ ಅವಳು ಹೊದ್ದುಕೊಂಡಿದ್ದ ಕೌದಿಯನ್ನೇ ಹೊದ್ದುಕೊಳ್ಳುತ್ತ ಹಿಡಿಯಾಗಿ ಕೈ ಮುಗಿದ. ಹಿಂದಿನ ದಿನ ತಾರಿನ ಕಂಬ ಕಡಿದ ಸ್ವಾತಂತ್ರ್ಯಯೋಧರಲ್ಲಿ ಈತನೂ ಒಬ್ಬ ಎಂದು ಅವಳಿಗೆ ತಿಳಿಯಿತು. ಸ್ವಲ್ಪ ಹೊತ್ತಿನಲ್ಲೇ ಪೊಲೀಸನೊಬ್ಬ ಬಂದ. ''ಈ ಗುಡಿಸಲೊಳಕ್ಕೆ ದ್ರೋಹಿಯೊಬ್ಬ ನುಸುಳಿದ್ದಾನೆ. ಅವನೆಲ್ಲಿ?'' ಎಂದು ಕೇಳಿದ.

''ಅಂಥವರು ಇಲ್ಲಿ ಯಾರೂ ಬಂದಿಲ್ಲ'' ಎಂದಳು ಬಾಣಂತಿ.

''ಆ ಹೊರಸಿನ ಮೇಲೆ ಮಲಗಿದ್ದು ಯಾರು?''

''ಆತ ನನ್ನ ಗಂಡ, ಆಜಾರಿಯಾಗಿದೆ, ತಿಂಗಳಾಯಿತು ಸರಿಯಾಗಿ ಊಟ ಮಾಡಿಲ್ಲ'' ಎಂದಳು.

ಪೊಲೀಸ್ ಹೊರಟುಹೋದಮೇಲೆ ಆತ ಎದ್ದು ಕುಳಿತ. ಕಣ್ಣಲ್ಲಿ ಆನಂದಬಾಷ್ಪ ಸುರಿಸುತ್ತ ಹೇಳಿದ :

''ತಾಯಿ, ನೀನು ಹೆಣ್ಣಲ್ಲ, ಮಾಯೆಯ ಪ್ರತಿರೂಪ. ನೀನು ನಿಜವಾದ ರಾಷ್ಟ್ರ ಸಂರಕ್ಷಕಿ - ನನ್ನನ್ನು ಆಶೀರ್ವದಿಸು, ರಾಷ್ಟ್ರಕ್ಕೆ ಬೇಗ ಸ್ವಾತಂತ್ರ್ಯ ಸಿಗಲಿ ಎಂದು ಹರಸು'' ಎಂದು ನಮಸ್ಕರಿಸಿ ಆಕೆಯ ಕಾಲು ಮುಟ್ಟಿ ಆಶೀರ್ವಾದ ಪಡೆದುಕೊಂಡ, ಮೈ ಮುಟ್ಟಿ ಹೊಲಸಮಾಡಲಿಲ್ಲ.

ಸಿಂಗರ್ ಎಂಬಾತ ಒಬ್ಬ ಬಡ ನಿವೃತ್ತ ಸೈನಿಕ. ಉಡಲು ಗಟ್ಟಿಯಾದ ಬಟ್ಟೆಗಳೂ ಇರಲಿಲ್ಲ, ಅವನ ಹೆಂಡತಿಗೆ ಅವನ ಹರಿದ ಉಡುಪುಗಳನ್ನು ಹೊಲಿದು ಕೊಡುವುದೇ ಮುಖ್ಯ ಕೆಲಸ. ಹೀಗೆ ಹರಿದ ಬಟ್ಟೆ ಹೊಲಿಯುತ್ತ ಹೊಲಿಯುತ್ತ ಅವಳ ಕಣ್ಣು ಮಂಜಾಗತೊಡಗಿದವು. ಅವಳ ಕಷ್ಟ ನೋಡಲಾಗದೆ ವರ್ಷ ವರ್ಷಗಳ ಕಾಲ ಕಷ್ಟಪಟ್ಟು ಹೊಲಿಗೆಯಂತ್ರ ಕಂಡು ಹಿಡಿದ ಸಿಂಗರ್. ಸಿಂಗರ್ ಹೊಲಿಗೆಯಂತ್ರದ ಹೆಸರು ಕೇಳದವರಾರಿದ್ದಾರೆ ಹೇಳಿ?

ಇನ್ನೊಂದು ಸಂದರ್ಭ : ಶೈಕ್ಷಣಿಕ ವಿಚಾರಸಂಕಿರಣವೊಂದರಲ್ಲಿ ಭಾಗವಹಿಸಲು ವಿದೇಶಕ್ಕೆ ಒಂದು ಚಿಕ್ಕ ವಿಮಾನದಲ್ಲಿ ಹೊರಟಿದ್ದರು ನಾಲ್ಕು ಮಂದಿ. ಆ ದೇಶದ ಶಿಕ್ಷಣಮಂತ್ರಿ, ವಿಶ್ವವಿದ್ಯಾಲಯದ ಪ್ರಾಧ್ಯಾಪಕ, ಅವನ ಸಂಶೋಧನ ಸಹಾಯಕ (ಶಿಷ್ಯ) ಹಾಗೂ ವಿಮಾನ ಚಾಲಕ. ಮಾರ್ಗಮಧ್ಯದಲ್ಲಿ ವಿಮಾನಕ್ಕೆ ಬೆಂಕಿ ತಗುಲಿದ್ದು ಪೈಲಟ್‌ನ ಗಮನಕ್ಕೆ ಬಂತು. ವಿಮಾನದಲ್ಲಿ ಮೂರು ಪ್ಯಾರಾಶೂಟ್‌ಗಳಿದ್ದವು. ''ನಾನು ತರಬೇತಿ ಪಡೆದ ಪೈಲಟ್, ನನ್ನ ಜೀವ ಅಮೂಲ್ಯ'' ಎಂದವನೆ ಒಂದು ಪ್ಯಾರಾಶೂಟ್ ಕಟ್ಟಿಕೊಂಡು ಜಿಗಿದುಬಿಟ್ಟ ಪೈಲಟ್.

''ನಾನು ಇಡಿ ದೇಶದ ಶಿಕ್ಷಣಮಂತ್ರಿ, ಶಿಕ್ಷಣ ಭವಿಷ್ಯದ ಆಧಾರಸ್ತಂಭ'' ಎಂದವನೆ ಇನ್ನೊಂದನ್ನು ಕಟ್ಟಿಕೊಂಡು ಹೊರಗೆ ಜಿಗಿದ ಮಂತ್ರಿ.

ಇನ್ನೊಂದು ಪ್ಯಾರಾಶೂಟ್ ಮಾತ್ರ ಉಳಿದಿತ್ತು.

''ಶಿಷ್ಯನೆ, ನೀನು ಬದುಕಿ ಬಾಳಬೇಕಾದವ, ಈ ರಾಷ್ಟ್ರದ ಭವಿಷ್ಯ ರೂಪಿಸಬೇಕಾದರೆ ನಿನ್ನಂಥ ಪ್ರತಿಭಾವಂತರು ಬದುಕಬೇಕು. ಉಳಿದ ಒಂದು ಪ್ಯಾರಾಶೂಟ್ ಸಹಾಯದಿಂದ ನಿನ್ನ ಪ್ರಾಣ ಉಳಿಸಿಕೊ, ನಿನಗೆ ಭಗವಂತ ಒಳ್ಳೆಯದು ಮಾಡಲಿ'' ಎಂದು ಹೇಳಿದ ಪ್ರಾಧ್ಯಾಪಕ. ''ಇಲ್ಲ ಗುರುಗಳೆ, ನನ್ನಂಥ ಶಿಷ್ಯರು ಸಾವಿರಾರು ಜನ ಸಿಗಬಹುದು ಆದರೆ ನಿಮ್ಮಂಥ ಗುರುಗಳು ಯುಗಕ್ಕೊಬ್ಬರು, ನೀವು ಉಳಿದರೆ ನನ್ನಂಥ ಲಕ್ಷ-ಲಕ್ಷ ಶಿಷ್ಯರನ್ನು ರೂಪಿಸಬಹುದು. ನೀವು ಉಳಿಯಬೇಕು. ತೆಗೆದುಕೊಳ್ಳಿ ಪ್ಯಾರಾಶೂಟನ್ನ ಬೇಗ, ಬೇಗ'' ಎಂದು ಕೈಮುಗಿದ.

ಗುರು ಅದಕ್ಕೊಪ್ಪಲಿಲ್ಲ. ಶಿಷ್ಯನೂ ಒಪ್ಪಲಿಲ್ಲ. ಜ್ವಾಲೆ ತೀವ್ರ ಸ್ವರೂಪ ತಾಳಿದ್ದನ್ನು ಗಮನಿಸಿದ ಶಿಷ್ಯ ಒಮ್ಮೆ ಪ್ಯಾರಾಶೂಟನತ್ತ ದೃಷ್ಟಿ ಹರಿಸಿದ. ಮುಖದ ಮೇಲೆ ನಗೆ ಚಿಮ್ಮಿತು.

''ಬನ್ನಿ ಗುರುಗಳೆ, ಇಲ್ಲಿ ಎರಡು ಪ್ಯಾರಾಶೂಟ್‌ಗಳಿವೆ, ಒಂದು ನಿಮಗೆ ಒಂದು ನನಗೆ, ಹೂಂ ತೆಗೆದುಕೊಳ್ಳಿ'' ಎಂದ.

''ಅದ್ಹೇಗೆ ಸಾಧ್ಯ? ಮೂರರಲ್ಲಿ ಒಂದು ಪೈಲಟ್‌ಗೆ, ಇನ್ನೊಂದು ಶಿಕ್ಷಣಮಂತ್ರಿಗಾದರೆ ಇನ್ನೊಂದೇ ಉಳಿಯಬೇಕಲ್ಲ'' ಎಂದ ಪ್ರಾಧ್ಯಾಪಕರಿಗೆ ಶಿಷ್ಯ ಹೇಳಿದ :

''ಇಲ್ಲ ಗುರುಗಳೆ, ಶಿಕ್ಷಣ ಮಂತ್ರಿಗಳು ಅವಸರದಲ್ಲಿ ಬರಿ ದಾರದ ಸುರುಳಿ ತೆಗೆದುಕೊಂಡು ಜಿಗಿದಿದ್ದಾರೆ. ಪ್ಯಾರಾಶೂಟ್ ಇಲ್ಲೇ ಇದೆ. ಬನ್ನಿ ಬೇಗ'' ಎಂದು ಪ್ಯಾರಾಶೂಟನ್ನು ಗುರುವಿನ ಕೈಗಿತ್ತ. ಆ ಎರಡು ಪ್ಯಾರಾಶೂಟ್‌ಗಳ ಸಹಾಯದಿಂದ ಗುರು-ಶಿಷ್ಯರಿಬ್ಬರೂ ಬದುಕಿಕೊಂಡರು.

ಸಂರಕ್ಷಕ ಸ್ಕಾಲರ್ ಆಗದಿದ್ದರೂ ಹೃದಯವಂತನಾಗಿರಬೇಕಲ್ಲವೆ?

ಇವು ಉದಾತ್ತಪ್ರೀತಿಯ ಕೆಲ ಮಾದರಿಗಳು.

ಕೋತಿ ತನ್ನ ಮಗುವನ್ನು ತುಂಬ ಗಾಢವಾಗಿ ಪ್ರೀತಿಸುತ್ತದೆ; ಸದಾಕಾಲ ತನ್ನ ಎದೆಗವಚಿಕೊಂಡೇ ಇರುತ್ತದೆ. ಆದರೆ ತನ್ನ ಪ್ರಾಣಕ್ಕೆ ಕುತ್ತು ಬಂದಾಗ ಅಂಟಿಕೊಂಡ ಮಗುವನ್ನು ಕಿತ್ತೆಸೆದು ತನ್ನ ಪ್ರಾಣ ಉಳಿಸಿಕೊಳ್ಳುತ್ತದೆ. ಮೋಹದ ಪರಾಕಾಷ್ಠೆ, ಸ್ವಾರ್ಥ ಮತ್ತು ಅಪ್ರಾಮಾಣಿಕತೆಗಳ ಕೆಸರೊಳಗಿಂದಲೇ ಮೊಳೆಯುತ್ತದೆ ಮೋಹದ ಬೀಜ.

ಮರದ ಅಂದಕ್ಕೆ ಮೇಲೆ ಪಲ್ಲವಿಸಿದ ಎಲೆ - ಹೂ ಮಾತ್ರ ಕಾರಣವಲ್ಲ, ಬೇರಿನ ಜೀವನೋತ್ಸಾಹ ಹಾಗೂ ಬೆಳೆಸುವ ಪ್ರೀತಿ. ಅಂದದ ಜೊತೆಗಾತಿ ಜಂಭ, ಈ 'ಜಂಭ'ಯ ವೈಯಾರ ನೋಡುಗರ ಕಣ್ಣು ಕುಕ್ಕಿಸುತ್ತವೆ. ಮರ ಕೊಡಲಿಗೆ ಆಹಾರವಾಗಿಹೋಗುತ್ತದೆ. ಕೆಳಗುರುಳಿ ಕಣ್ಣೀರಿಡುತ್ತ ಮರ-ಮರ ಮರುಗುತ್ತದೆ ಮರ. ಆಗ ಒಳಗಿನ ಒಳಗಿನಿಂದ ಕೇಳುತ್ತದೆ ಒಂದು ದನಿ :

''ನಾ ಇನ್ನೂ ಸತ್ತಿಲ್ಲೊ, ಬದುಕಸಾಕಂತ ಬಂದೇನಿ, ನಾ ಸಾಯೋದಿಲ್ಲ. ಯಾರು ಎಷ್ಟು ಸಾರೆ ಕಡದರೂ ನಾ ಚಿಗೀತೇನಿ, ಒಂದಕ್ಕ ಹತ್ತು ಕಡೆ ಜಿಗದೆದ್ದು ಹಸುರ ಉಳಸತೇನಿ.''

ಕಕ್ಕಾಬಿಕ್ಕಿಯಾಗಿ ನೋಡಿತು ಮರ - ಯಾರೂ ಕಾಣಲಿಲ್ಲ.

''ನೀ ನನ್ನ ಮರತಿರಬೇಕು. ಆದರ ನಾ ನನ್ನ ಕರ್ತವ್ಯ ಮರತಿಲ್ಲ. ಮರೀಗೆ ಇದ್ದು ನಿನ್ನಂಥವರನ್ನು ಮೆರಸೋದು ನನ್ನ ಕಾಯಕ. ಇನ್ನೂ ಗೊತ್ತಾಗಲಿಲ್ಲಾ? ನಾನು ಬೇರು.''

ಈ ಬೇರಿನ ಬೆಳೆಸುವ ನೀತಿಗೆ, ಜೀವನ ಪ್ರೀತಿಗೆ ಬೆರಗಾದ ಓಡುತ್ತಿದ್ದ ಮೋಡ ನಿಂತಲ್ಲೆ ನಿಂತು ಆನಂದ ಬಾಷ್ಪ ಸುರಿಸುತ್ತದೆ, ಬೇರು ಚಿಗುರುತ್ತದೆ. ಹಸಿರು ಕಳಕಳಿಸುತ್ತದೆ. ಮತ್ತೆ ಮತ್ತೆ ತಾಯಿಯ ಗರ್ಭದಲ್ಲಿ ಒಂಬತ್ತು ತಿಂಗಳು ಯಾತನೆ ಸಹಿಸಿದರೂ ಆನಂದ ನೀಡಲೆಂದೇ ಹೊರಬರುತ್ತದೆ ಮಗು. ಪಾಪ, ಅದಕ್ಕೇನು ಗೊತ್ತು ಈ ದೊಡ್ಡವರ ಆನಂದದ ಅನಂತ ಆವೃತ್ತಿಗಳು! ಈ ಮಾಯಾ ಲೋಕದ ಗಾಢ ವಾಸನೆಯ ಘಾಟು ತಗುಲಿದೊಡನೆ ಅತ್ತು ಅತ್ತು ಅಳು ನಿಲ್ಲಿಸಿದಾಗ ಗಾಬರಿಯಾದ ತಾಯಿ ಕರೆದೊಯ್ಯುತ್ತಾಳೆ ಶುಶ್ರೂಷಕನ ಬಳಿ. ಒಬ್ಬರ ಭಯ ಇನ್ನೊಬ್ಬರಿಗೆ ಅಭಯ. ಅದೇ ಆಶ್ರಯ. ಎಲ್ಲರಿಗೂ ಬೆಳಕು ನೀಡಲೆಂದೇ ಭುವಿಗೆ ಬಂದ ಆದಿತ್ಯನನ್ನು 'ಕೇಸು' ಎಂದು ದಾಖಲಿಸಿಕೊಳ್ಳುವ ಮೂಲಕ ನಿರ್ಮಾನುಷಗೊಳಿಸುವ ಈ ಶುಶ್ರೂಷಕನ ಎಲ್ಲ ಚಿತ್ರಹಿಂಸೆಗಳನ್ನು ಸಹಿಸಿಕೊಂಡೂ ತನ್ನ ಮೇಲೆ ಪ್ರಾಣ ಇಟ್ಟುಕೊಂಡವರ ಪ್ರೀತಿಗಾಗಿ ಚೇತರಿಸಿಕೊಂಡು ನಕ್ಕು ನಗಿಸುತ್ತದೆ ಮಗು. ಈ ಮಗುವಿನ ಆಟದಲ್ಲಿ ಮೋಹವಿಲ್ಲ, ಸ್ವಾರ್ಥವಿಲ್ಲ, ಭೇದವಿಲ್ಲ. ''ಆನಂದಮಯ ಈ ಜಗ ಹೃದಯ'' ಎಂದು ಹಿಗ್ಗಿ ಹಾಡುತ್ತದೆ ಮನಸ್ಸು ಮಗುವಿನ ಸಂಗದಲ್ಲಿ.

ಇದೇ ಮಗು ಬೆಳೆದು ದೊಡ್ಡದಾದಾಗ ರಣರಂಗವಾಗುತ್ತದೆ ಜಗ. ಹೆಣ್ಣಿಗೆ ಗಂಡು ಮಾಯೆ, ಗಂಡಿಗೆ ಹೆಣ್ಣು ಮಾಯೆಯಾಗಿ ಮೈ ಮನಗಳ ತುಂಬ ಗಾಯ. ತಾಯಿ ಹಾಗೂ ಹೆಂಡತಿ ಎಂಬ ಇಬ್ಬರು ಹೆಂಗಸರು ಒಂದು ಗಂಡಿನ ಮೇಲೆ ಅಧಿಕಾರ ಸ್ಥಾಪಿಸಲು ಹೆಣಗುವ ಸಂಸಾರವೆಂಬ ಸಮರಕ್ಕೆ ರಂಗೇರುತ್ತದೆ. ಆಟದ ಲಯ ತಪ್ಪಿಹೋಗಿ ಊಟದ ರುಚಿ ಕಳೆದುಹೋಗುತ್ತದೆ. ಗೆಲುವಿನ ಹಸಿವು ಸೋಲಿನ ಸೌಂದರ್ಯವನ್ನು ಆಹುತಿ ತೆಗೆದುಕೊಳ್ಳುತ್ತವೆ, ಮಗು ಹಾಗೂ ನಗು ಮಾಯವಾಗಿ ಧರೆ ಧಗಧಗಿಸತೊಡಗುತ್ತದೆ.

ಅದಕ್ಕೇ ಹೇಳುತ್ತಾರೆ ಬಲ್ಲವರು – ''ಏನು ಕಳಕೊಂಡರೂ ಒಳಗಿರೊ ಮಗು, ಮುಖದ ಮ್ಯಾಲಿನ ನಗು ಕಳಕೊಂಡರ ಬಾಳು ನರಕ'' ಅಂತ. ಇದೇ ನಿಜವಾದ ಜೀವನ ಪ್ರೀತಿ, ಅಲ್ಲವೆ?

**ಬಿ. ಆರ್. ಪೊಲೀಸ ಪಾಟೀಲ**
'ವಾತ್ಸಲ್ಯ', ಸೋಮವಾರ ಪೇಟೆ, ಬನಹಟ್ಟಿ - ೫೮೭ ೩೧೧
ಬಾಗಲಕೋಟ ಜಿಲ್ಲೆ.














## ಮಹಿಳೆಯರ ಬವಣೆಯ ಬದುಕಿಗೊಂದು ಬೆಳಕಿಂಡಿ




### ಭಾರತದ ಬೇರೆ ಬೇರೆ ಭಾಷೆಗಳಿಂದ ಆಯ್ದ ಸಾಹಿತ್ಯ

# ಹತ್ತು ಕೃತಿಗಳ ಲೋಕಾರ್ಪಣೆ

21-6-2009 ಭಾನುವಾರ, ಬೆಳಗ್ಗೆ 10 ಗಂಟೆಗೆ
ನಯನ ಸಭಾಂಗಣ, ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು

| ಕೃತಿ | ಲೇಖಕರು / ಅನುವಾದ | ಬೆಲೆ |
|---|---|---|
| **ನೂರಿ** (ಕಾದಂಬರಿ) | ಡಾ॥ ಜಾನಕಿ ಸುಂದರೇಶ್ | ರೂ. 140 |
| **ಮಣ್ಣಿಂದ ಎದ್ದವರು** (ಕಾದಂಬರಿ) | ಕುಸುಮಾ ಶಾನುಭಾಗ | ರೂ. 80 |
| **ಶಕ್ತಿಧಾಮದ ಸತ್ಯಕಥೆಗಳು** (ನೈಜ ಘಟನೆಗಳು) | ಜಿ. ಎಸ್. ಜಯದೇವ | ರೂ. 65 |
| **ಸಂಗತಿ** (ಆತ್ಮಕಥೆ) | ತಮಿಳು ಮೂಲ : ಬಾಮ<br>ಕನ್ನಡಕ್ಕೆ : ಎಸ್. ಫ್ಲೋಮಿನ್ ದಾಸ್ | ರೂ. 65 |
| **ಆಲಾಹಳ ಹೆಣ್ಣುಮಕ್ಕಳು** (ಕಾದಂಬರಿ) | ಮಲಯಾಳಂ ಮೂಲ : ಸಾರಾ ಜೋಸೆಫ್<br>ಕನ್ನಡಕ್ಕೆ : ಪ್ರೊ॥ ಪಾರ್ವತಿ ಜಿ. ಐತಾಳ್ | ರೂ. 100 |
| **ಉಷೋದಯ** (ಕಾದಂಬರಿ) | ತೆಲುಗು ಮೂಲ : ವೋಲ್ಗ<br>ಕನ್ನಡಕ್ಕೆ : ಮಿಸ್ ಸಂಪತ್ | ರೂ. 65 |
| **ಬದುಕು ನಮ್ಮದು** (ಆತ್ಮಕಥೆ) | ಮರಾಠಿ ಮೂಲ : ಬೇಬಿತಾಯಿ ಕಾಂಬಳೆ<br>ಕನ್ನಡಕ್ಕೆ : ಚಂದ್ರಕಾಂತ ಪೋಕಳೆ | ರೂ. 55 |
| **ನೋವು ತುಂಬಿದ ಬದುಕು** (ಆತ್ಮಕಥೆ) | ಬಂಗಾಳಿ ಮೂಲ : ಬೇಬಿ ಹಾಲ್ದಾರ್<br>ಕನ್ನಡಕ್ಕೆ : ಜಿ. ಕುಮಾರಪ್ಪ | ರೂ. 90 |
| **ನಿರಕ್ಷರಿಯ ಆತ್ಮಕತೆ** (ಆತ್ಮಕಥೆ) | ಹಿಂದಿ ಮೂಲ : ಸುಶೀಲಾ ರಾಯ್<br>ಕನ್ನಡಕ್ಕೆ : ಜಿ. ಕುಮಾರಪ್ಪ | ರೂ. 55 |
| **ಅಂತಿಮ ಜ್ವಾಲೆ** (ಕಾದಂಬರಿ) | ಹಿಂದಿ ಮೂಲ : ಹಿಮಾಂಶು ಜೋಶಿ<br>ಕನ್ನಡಕ್ಕೆ : ಡಾ॥ ಜಿ. ಎಸ್. ಕುಸುಮ ಗೀತ | ರೂ. 55 |

**ಪ್ರಕಟಣಪೂರ್ವ ರಿಯಾಯಿತಿ**

**ರೂ. 770 ಮುಖಬೆಲೆಯ ಪುಸ್ತಕಗಳು ರೂ. 550ಕ್ಕೆ**
(ಅಂಚೆ/ ಕೊರಿಯರ್ ವೆಚ್ಚ ರೂ. 30 ಪ್ರತ್ಯೇಕ )

ಅಂಚೆ/ಕೊರಿಯರ್ ಮೂಲಕ ಬೇಕಾದಲ್ಲಿ ರೂ. 580ಕ್ಕೆ
ಎಂ.ಓ. / ಡಿ.ಡಿ. ಕಳಿಸಿ ಇಂದೇ ನಿಮ್ಮ ಪ್ರತಿಗಳನ್ನು ಕಾದಿರಿಸಿ.

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂ. ಪೆ. ಸಂಖ್ಯೆ : 5159,
ಬೆಂಗಳೂರು - 560 001 ✆ : 22203580, 30578022 e-mail: navakarnataka@dataone.in
















Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

